18/6/51

ಹೊಸಗನ್ನಡ

# ಪಂಚತಂತ್ರ

(ಸಚಿತ್ರ)

WITH COMPLIMENTS

ದೇವುಡು ಕನ್ನಡಿಸಿದುದು

ಪ್ರಕಾಶಕರು:

ಶ್ರೀಕೃಷ್ಣ ಅಂಡ್ ಕೊ.

ಸುಲ್ತಾನ್‌ಪೇಟೆ ಬೆಂಗಳೂರು ೨.

1951

ಪ್ರಥಮ ಮುದ್ರಣ 1951



ಬೆಲೆ

ಸಾಮಾನ್ಯ ಪ್ರತಿ ೪-೦-೦
ಉತ್ತಮ ಪ್ರತಿ ೬-೦-೦



*Copy Right Reserved*

ಮುದ್ರಕರು:-
ಶ್ರೀ ಗೋಪಿನಾಥ್ ಪ್ರೆಸ್
ಸುಲ್ತಾನ್‌ಪೇಟೆ, ಬೆಂಗಳೂರು ೨.

# ಮುನ್ನುಡಿ

ಪಂಚತಂತ್ರವು ಸಾವಿರಾರು ವರ್ಷಗಳಿಂದ ಓದಿದವರಿಗೆ ಹಿತವಾಗಿ ಪ್ರಿಯವಾಗಿ ಬುದ್ಧಿಯನ್ನು ಕಲಿಸಿರುವ ಕಥೆಗಳ ಗುಂಪು. ಇದು ಸಂಸ್ಕೃತದಲ್ಲಿದೆ. ಇದು ದೇಶ ದೇಶಾಂತರಗಳಲ್ಲಿ ನಾನಾ ಭಾಷೆಯ ಜನರಿಗೆ ಸಂತೋಷವನ್ನು ಕೊಟ್ಟಿದೆ.

ಕನ್ನಡದಲ್ಲಿಯೂ ಸುಮಾರು ಒಂದು ಸಾವಿರ ವರ್ಷಗಳ ಹಿಂದಿನ ಒಂದು ಪಂಚತಂತ್ರವಿದೆ. ಈಚೆಗೆ ಇದನ್ನು ಹೊಸಗನ್ನಡದಲ್ಲಿ ತರಲು ಹಲವು ಪ್ರಯತ್ನಗಳು ನಡೆದಿವೆ. ಅವುಗಳಲ್ಲಿ ಇದೂ ಒಂದು.

ದುರ್ಗಸಿಂಹನ ಪಂಚತಂತ್ರ, ಡಾ|| ಹರ್ಟೆಲ್ ಅವರ ಪಂಚತಂತ್ರ, ನಿರ್ಣಯ ಸಾಗರದ ಪಂಚತಂತ್ರ, ಇವೆಲ್ಲವನ್ನೂ ಸೇರಿಸಿಕೊಳ್ಳಬೇಕೆಂದು ಆಸೆಯಿತ್ತು ಆದರೆ ಬಹುವಾಗಿ ನಿರ್ಣಯ ಸಾಗರದ ಪಂಚತಂತ್ರವನ್ನೇ ಇದರಲ್ಲಿ ಅನುಸರಿಸಲಾಗಿದೆ. ಅದರಲ್ಲೂ ಬೇಕೆಂದೇ ಕೆಲವು ಕಥೆಗಳನ್ನು ಬಿಟ್ಟಿದೆ. ಇನ್ನು ಕೆಲವು ಹೊಸ ಕಥೆಗಳನ್ನೂ ಸೇರಿಸಿದೆ.

ಮತ್ತೊಮ್ಮೆ ಅನುಕೂಲವಾದರೆ, ಅವೆಲ್ಲವನ್ನೂ ಸೇರಿಸುವ ಆಸೆಯೂ ಇದೆ. ಅದು ಭವಿಷ್ಯತ್ತಿನ ಕೈಯಲ್ಲಿರುವ ವಿಷಯ.

ಈಗ ಬಂದಿರುವ ಈಗ್ರಂಥವು ದೊಡ್ಡವರಿಂದ ಮಕ್ಕಳವರೆಗೆ ಎಲ್ಲರೂ ಓದಲು ಅನುಕೂಲಿಸುವಂತೆ ಸುಲಭವಾಗಿ ಬರೆಯಲಾಗಿದೆ.

ಈ ಕಥೆಗಳನ್ನು ಓದಿ ಎಲ್ಲರೂ ಸಂತೋಷ ಪಡುವರು ಎಂದು ನಂಬುತ್ತೇನೆ. ಹಾಗಾದರೆ, ನಾನು ಸಂತೋಷ ಪಟ್ಟಂತೆ, ಓದುಗರೂ ಸಂತೋಷ ಪಟ್ಟರೆ, ನನ್ನ ಯತ್ನವು ಸಾರ್ಥಕವಾಯಿತು.

ಇದರಲ್ಲಿರುವ ಪದ್ಯಗಳನ್ನು ಜನಪದ ಗೀತಗಳಂತೆ, ಅನುಕೂಲವಾದ ರಾಗ, ತಾಳಗಳಲ್ಲಿ ಹಾಡುವುದು.

ಬೆಂಗಳೂರು
8—2—1951

ದೇವುಡು

**ವೈರ ಸಾಧಿಸುವುದು**



**ಒಡೆಯುವುದು**





## ಸ್ನೇಹ ಕಟ್ಟುವುದು

# ಹೊಸಗನ್ನಡ ಪಂಚತಂತ್ರ

## ಪೀಠಿಕೆ

ದೇವತೆಗಳೆಲ್ಲರೂ ನಮ್ಮನ್ನು ಕಾಪಾಡಲಿ.

ನೀತಿಶಾಸ್ತ್ರವನ್ನು ಮಾಡಿದ ಮನು, ವಾಚಸ್ಪತಿ, ಶುಕ್ರ, ಪರಾಶರ, ವ್ಯಾಸ, ಚಾಣಕ್ಯ, ಮೊದಲಾದವರಿಗೆ ನಮಸ್ಕಾರವು.



ವಿಷ್ಣುಶರ್ಮನು ಸಕಲವಾದ ಅರ್ಥಶಾಸ್ತ್ರದ ಸಾರವನ್ನೆಲ್ಲಾ ಚೆನ್ನಾಗಿ ಯೋಚನೆ ಮಾಡಿ, ಅದಷ್ಟನ್ನೂ ಈ ಐದುತಂತ್ರಗಳುಳ್ಳ ಮನೋಹರವಾದ ಶಾಸ್ತ್ರವನ್ನಾಗಿ ಮಾಡಿರುವನು.

## ಕಥೆಯ ಮೊದಲು

'ದಕ್ಷಿಣದೇಶದಲ್ಲಿ ಮಹಿಲಾರೋಪ್ಯ ಎಂಬ ನಗರವೊಂದು ಉಂಟು. ಅಲ್ಲಿ ಅಮರಶಕ್ತಿಯೆಂಬ ರಾಜನು ಒಬ್ಬನು ಉಂಟು. ಆತನು ಯಾರು ಬಂದು ತನ್ನನ್ನು ಯಾಚಿಸಿದರೂ ಅವರಿಗೆ ಬೇಕಾದುದನ್ನು ಕೊಟ್ಟು ಕಲ್ಪವೃಕ್ಷ ಎನ್ನಿಸಿಕೊಂಡವನು. ಅನೇಕರು ರಾಜರು ಬಂದು ಆತನ ಪಾದಗಳಿಗೆ ನಮಸ್ಕಾರ ಮಾಡುವರು. ಆಗ ಅವರ ತಲೆಯಲ್ಲಿರುವ ಕಿರೀಟಗಳ ರತ್ನಕಾಂತಿಯು ಆತನ ಪಾದಗಳ ಮೇಲೆಲ್ಲಾ ಹರಡುವುದು. ಆತನು ಎಲ್ಲಾ ವಿದ್ಯೆಗಳನ್ನು ಬಲ್ಲವನು.

ಆತನಿಗೆ ಮೂವರು ಮಕ್ಕಳು. ಬಹುಶಕ್ತಿ, ಉಗ್ರಶಕ್ತಿ, ಅನಂತ ಶಕ್ತಿ ಎಂದು ಅವರ ಹೆಸರು. ಅವರು ಬುದ್ಧಿಗೆಟ್ಟವರು. ವಿವೇಕವಿಲ್ಲದವರು. ಅವರಿಗೆ ಓದು ಎಂದರೆ ಬೇಸರ. ಅದನ್ನು

ಕಂಡು ಅವರ ತಂದೆಯು ಬಹಳ ಸಂಕಟಪಟ್ಟು ಮಂತ್ರಿಗಳನ್ನು ಕರೆಸಿಕೊಂಡು ಅವರಿಗೆ ಹೇಳಿದನು; "ಎಲೈ ಮಂತ್ರಿಗಳೇ, ನಮ್ಮ ಮಕ್ಕಳು ವಿದ್ಯೆಯನ್ನು ಕಲಿಯದೆ ವಿವೇಕವೇ ಇಲ್ಲದವರಾಗಿರುವರು. ನೀವೂ ಇದನ್ನು ಬಲ್ಲಿರಿ! ಈ ಮಕ್ಕಳನ್ನು ಕಂಡು ನನಗೆ ಬೇಸರ ವಾಗಿರುವುದು; ಇಂತಹ ದೊಡ್ಡ ರಾಜ್ಯವೂ ನನಗೆ ಬೇಡವಾಗಿರು ವುದು. ಕೇಳಿಲ್ಲವೇ ? :—

ಹುಟ್ಟದವ ಸತ್ತವನು ಮೂರ್ಖನೆಂದು |
ಮಕ್ಕಳೊಳು ಮೂಜಾ೯ತಿ | ಮೂರೆಜಾತಿ ||
ಮೂರ್ಖನಳಿಸುವನು ಬದುಕಿರುವತನಕ |
ಮೊದಲಿನಿಬ್ಬರಿಮೇಲು ಮೂರ್ಖಗಿಂತ || ೧ ||

ಮಡದಿಮಕ್ಕಳ ಪಡೆಯದಿರೆ ಲೇಸು |
ಆದ ಗರ್ಭವು ಜಾರುವುದೆ ಲೇಸು ||
ಆಗುತಲೆ ಮಗು ಹೋಗುವುದೆ ಲೇಸು |
ಆದ ಮಗು ಹೆಣ್ಣಾಗುವುದೆ ಲೇಸು || ೨ ||

ವಿದ್ಯೆಯೋದದೆ ಇರಲು ಮಗನೆಂದು ಆದವನು |
ರೂಪಗುಣ ಸಿರಿವಂತನಾದರೇನು ? ಹೋದರೇನು ? || ೩ ||

ಕರುವನ್ನೂ ಹಾಕದೆ ಹಾಲನ್ನೂ ಕೊಡದೆ ಇರುವ ಹಸುವನ್ನು ಕಟ್ಟಿಕೊಂಡು ಮಾಡುವುದೇನು ? ಹಾಗೆಯೇ ಮಗನು ವಿದ್ಯಾ ವಂತನೂ ತಾಯಿತಂದೆಗಳಲ್ಲಿ ಭಕ್ತಿಯುಳ್ಳವನೂ ಆಗದಿದ್ದರೆ, ಅವ ನಿಂದ ಆಗುವುದೇನು ? ಮಗನು ಮೂರ್ಖನಾಗುವುದಕ್ಕಿಂತ ಸಾಯುವುದೇ ಲೇಸು.

ಗುಣವಂತರ ಗಣಿಸುವ ಎಡೆಯೊಳು |
ಗಣನೆಗೆ ಬಾರದ ಮಗನಿಂದೇನು ? ||
ಅಂಥವ ಮಗನೆಂದಾಗುವುದಾದರೆ, |
ಮಡದಿಯು ಬಂಜೆಯೆ ಆದರೆ ತಪ್ಪೇನು ? || ೪ ||

ಅದರಿಂದ, ಈ ಮಕ್ಕಳು ಬುದ್ಧಿವಂತರಾಗುವುದಕ್ಕೆ ಏನಾದರೂ ಉಪಾಯ ಮಾಡಿ. ನಮ್ಮ ಅರಮನೆಯಲ್ಲಿ ಐದುನೂರು ಜನ ಪಂಡಿತರು ಇರುವರು. ಅವರಲ್ಲಿ ಯಾರೂ ನಮ್ಮ ಆಸೆಯನ್ನು ಪೂರೈಸಿಕೊಡಲಾರರೇ? ವಿಚಾರಿಸಿ ನೋಡಿ" ಎಂದನು.

ಮಂತ್ರಿಗಳಲ್ಲಿ ಒಬ್ಬನು ಹೇಳಿದನು :—"ಅರಸಾ, ವ್ಯಾಕರಣ ಶಾಸ್ತ್ರವೊಂದನ್ನು ಓದಲು ಹನ್ನೆರಡುವರ್ಷಬೇಕು. ಅದಾದಮೇಲೆ ಮನು ಮೊದಲಾದವರು ಬರೆದಿರುವ ಅರ್ಥಶಾಸ್ತ್ರಗಳು, ಆಮೇಲೆ ಚಾಣಕ್ಯಾದಿಗಳು ಬರೆದಿರುವ ಅರ್ಥಶಾಸ್ತ್ರ, ಅದರಮೇಲೆ ವಾತ್ಸ್ಯಾಯನಾದಿಗಳು ಬರೆದಿರುವ ಕಾಮಶಾಸ್ತ್ರ, ಹೀಗೆ ಧರ್ಮ, ಅರ್ಥಕಾಮಶಾಸ್ತ್ರಾದಿಗಳನ್ನು ಓದಿ ತಿಳಿದುಕೊಂಡರೆ ಆಗ ಮನಸ್ಸಿಗೆ ಜ್ಞಾನವು ಲಭಿಸುವುದು" ಎಂದನು.*

ಆಗ ಅಲ್ಲಿದ್ದ ಸುಮತಿಯೆಂಬ ಇನ್ನೊಬ್ಬ ಮಂತ್ರಿಯು ಹೇಳಿದನು: "ಮಾನವನು ಬದುಕಿರುವುದು ಕೆಲವು ಕಾಲಮಾತ್ರ. ಈ ಶಾಸ್ತ್ರಗಳಾದರೋ ಬಹಳಕಾಲ ಅಭ್ಯಾಸ ಮಾಡಬೇಕಾದವು. ಅದರಿಂದ, ಈ ಶಾಸ್ತ್ರಗಳನ್ನೆಲ್ಲ ವಿಸ್ತಾರವಾಗಿ ಕಲಿಯಲು ಸಾಧ್ಯವಿಲ್ಲ

---

* ಜೀವನದಲ್ಲಿ ನಾಲ್ಕು ಗುರಿಗಳು. ಮೊದಲನೆಯದು ಶಾಸ್ತ್ರವೂ ಹಿರಿಯರೂ ಹೇಳಿದಂತೆ ಬಾಳಿಕೊಂಡಿದ್ದು ಸದ್ಗತಿಯನ್ನು ಸಾಧಿಸುವುದು ಇದು ಧರ್ಮ. ಎರಡನೆಯದು ಲೋಕದಲ್ಲಿ ಗೌರವವನ್ನೂ ಹಣವನ್ನೂ ಸಂಪಾದಿಸುವುದು, ಇದು ಅರ್ಥ. ಮೂರನೆಯದು ಸಂಪಾದಿಸಿರುವುದನ್ನು ವಿವೇಕವಾಗಿ ವೆಚ್ಚಮಾಡಿ ಸುಖವಾಗಿರುವುದು: ಇದು ಕಾಮ. ಎಲ್ಲಕ್ಕಿಂತಲೂ ಹೆಚ್ಚಾಗಿರುವುದು ಒಂದು ಇದೆ ಎಂದು ನಂಬಿ, ಅದಕ್ಕಾಗಿ ಎಲ್ಲವನ್ನೂ ಬಿಟ್ಟು ಅದನ್ನೇ ಹಿಡಿಯುವುದು ಕೊನೆಯದು; ಇದುಮೋಕ್ಷ.

ಇದು ಒಂದೊಂದಕ್ಕೂ ಒಂದೊಂದು ಶಾಸ್ತ್ರವಿದೆ. ಮೋಕ್ಷಶಾಸ್ತ್ರವನ್ನು ವ್ಯಾಸರು ಬರೆದಿದ್ದಾರೆ.

ವಾಗಿ, ಇವರಿಗೆ ಕೊಂಚವಾದರೂ ತಿಳಿಯುವಂತೆ ಆ ಶಾಸ್ತ್ರಗಳನ್ನು ಚಿಕ್ಕದು ಮಾಡಿ ಸಂಕ್ಷೇಪವಾಗಿ ಹೇಳಬೇಕು. ಕೇಳಿಲ್ಲವೆ?

ಕೊನೆಮೊದಲಿಲ್ಲದೆ ಶಾಸ್ತ್ರವಪ ರ |
ಆಯುವು ಅಲ್ಪ, ಅಡ್ಡಿಯು ಬಹಳ ||
ಹಂಸವು ನೀರಿಂ ಹಾಲನು ಕೊಂಬಂತೆ |
ಶಾಸ್ತ್ರದ ಸಾರವನದರಿಂ ಕೊಳ್ಳೈ || ೫ ||

ನಮ್ಮ ಅರಮನೆಯಲ್ಲಿ ವಿಷ್ಣುಶರ್ಮನೆಂಬ ಒಬ್ಬ ಬ್ರಾಹ್ಮಣನುಂಟು. ಆತನು ಎಲ್ಲಾ ಶಾಸ್ತ್ರಗಳನ್ನೂ ಬಲ್ಲವನು. ಜೊತೆಗೆ ಆತನ ಬಳಿ ಓದಿದವರೆಲ್ಲ ವಿದ್ಯಾವಂತರಾಗಿರುವರು. ಆದರಿಂದ ಆತನಿಗೆ ರಾಜಪುತ್ರರನ್ನು ಒಪ್ಪಿಸೋಣ. ಆತನು ಇವರನ್ನು ಆದಷ್ಟು ಬೇಗ ವಿದ್ಯಾವಂತರನ್ನು ಮಾಡುವನು."

ರಾಜನಿಗೆ ಸುಮತಿಯ ಮಾತು ಹಿಡಿಯಿತು: ವಿಷ್ಣುಶರ್ಮನನ್ನು ಬರಮಾಡಿಕೊಂಡನು: ಆತನಿಗೆ ಎಲ್ಲವನ್ನೂ ಹೇಳಿ, ಕೇಳಿಕೊಂಡನು:—"ಎಲೈ ಭಗವಂತನೇ,* ಈ ನನ್ನ ಮಕ್ಕಳನ್ನು ಆದಷ್ಟು ಬೇಗ ಅರ್ಥಶಾಸ್ತ್ರದಲ್ಲಿ ಇವರನ್ನು ಬಿಟ್ಟರೆ ಇನ್ನಿಲ್ಲ ಎಂಬಂತೆ ಮಾಡಿಕೊಡಬೇಕು. ಇದು ತಾವು ನನಗೆ ಮಾಡುವ ಅನುಗ್ರಹವು. ತಾವು ಇಷ್ಟು ಉಪಕಾರಮಾಡಿದರೆ ನಾನು ತಮಗೆ ಒಂದುನೂರು ಗ್ರಾಮಗಳನ್ನು ಮಾನ್ಯವಾಗಿ ಕೊಡುವೆನು" ಎಂದು ಕೈಮುಗಿದನು.

ವಿಷ್ಣುಶರ್ಮನು ಹೇಳಿದನು: "ದೇವ, ನಾನು ಮಾಡುವ ಪ್ರಮಾಣವನ್ನು ಕೇಳೋಣವಾಗಲಿ. ತಾವು ಒಂದು ನೂರು ಗ್ರಾಮಗಳನ್ನು ಕೊಡುವೆನೆಂದರೂ ನಾನು ವಿದ್ಯೆಯನ್ನು ಮಾರುವುದಿಲ್ಲ. ಆದರೂ ಈ ತಮ್ಮ ಮಕ್ಕಳನ್ನು ಆರೇ ತಿಂಗಳಲ್ಲಿ ನೀತಿಶಾಸ್ತ್ರದಲ್ಲಿ

* ದೊಡ್ಡವರನ್ನು ಭಗವಂತನೆಂದು ಕರೆಯುವುದು ವಾಡಿಕೆ.

ನಿಪುಣರನ್ನು ಮಾಡುವೆನು: ಹಾಗೆ ಮಾಡದಿದ್ದರೆ ನನ್ನ ಹೆಸರನ್ನು ಬಿಟ್ಟು ಬೇರೆ ಹೆಸರನ್ನು ಇಡಿ. ಅಷ್ಟೇನು? ನನ್ನ ಸಿಂಹಘರ್ಜನೆಯನ್ನು ಕೇಳಿರಿ. ನಾನು ಹಣದ ಮೇಲಿನ ಆಸೆಯಿಂದ ಹೇಳುತ್ತಿಲ್ಲ. ನನಗೆ ಈಗ ಎಂಭತ್ತುವರ್ಷ ವಯಸ್ಸು. ನನಗೆ ಎಲ್ಲಾ ಇಂದ್ರಿಯಗಳೂ ಬತ್ತಿಹೋಗಿವೆ. ನನಗೆ ಹಣದಿಂದ ಆಗಬೇಕಾದುದೇನು? ಆದರೂ, ತಮ್ಮ ಕೋರಿಕೆಯು ನೆರವೇರಲೆಂದು ಇದೊಂದು ವಿನೋದವನ್ನು ತೋರುವೆನು. ಶಾರದಾದೇವಿಯು ಮೆಚ್ಚಿಕೊಳ್ಳಲಿ. ಇವೊತ್ತು ಯಾವ ದಿವಸ ಎಂಬುವನ್ನು ಗುರುತುಹಚ್ಚಿಕೊಳ್ಳಿ. ಇನ್ನು ಆರು ತಿಂಗಳೊಳಗಾಗಿ ತಮ್ಮ ಮಕ್ಕಳನ್ನು ನೀತಿಶಾಸ್ತ್ರನಿಪುಣರನ್ನಾಗಿ ಮಾಡದಿದ್ದರೆ, ತಾವು ಮತ್ತೆ ನನ್ನ ಮುಖವನ್ನು ನೋಡಬೇಕಾಗಿಲ್ಲ."

ರಾಜನಿಗೆ ಆಶ್ಚರ್ಯವಾಯಿತು: "ಈ ಬ್ರಾಹ್ಮಣನು ಅಸಾಧ್ಯವಾದುದನ್ನು ಮಾಡುವೆನೆಂದು ಪ್ರತಿಜ್ಞೆ ಮಾಡುತ್ತಿರುವನು. ಇದನ್ನು ನಂಬುವುದೂ ಕಷ್ಟವಾಗಿದೆಯಲ್ಲ!" ಎಂದು ವಿಸ್ಮಯಪಡುತ್ತ ಮಂತ್ರಿಗಳೊಡನೆ ಆಲೋಚನೆಮಾಡಿ, ಸಂತೋಷವಾಗಿ ಮಕ್ಕಳನ್ನು ಆತನಿಗೆ ಒಪ್ಪಿಸಿ ನೆಮ್ಮದಿಯನ್ನು ಹೊಂದಿದನು. ವಿಷ್ಣುಶರ್ಮನೂ ಅವರನ್ನು ಕರೆದುಕೊಂಡು ಬಂದು ಒಂದು ಶುಭದಿನದಲ್ಲಿ ಗಣಪತಿ ಶಾರದೆ, ಗುರುಗಳನ್ನು ಪೂಜೆಮಾಡಿ ವಿದ್ಯೆಯನ್ನು ಕಲಿಸಲು ಆರಂಭಿಸಿದನು. ಮೊದಮೊದಲು ಅವರು ಓದಿಗೆ ಒಗ್ಗಲಿಲ್ಲ. ಹೊಸದಾಗಿ ಹಿಡಿದುತಂದು ಕಂಭಕ್ಕೆ ಕಟ್ಟಿದ ಕಾಡಾನೆಯಂತೆ ಒದ್ದಾಡಿದರು. ಕಡಿವಾಣಕ್ಕೆ ಸಿಕ್ಕಿಕೊಂಡ ತುಂಟಕುದುರೆಯಂತೆ ಕುಣಿದಾಡಿದರು. ಆಗ ವಿಷ್ಣುಶರ್ಮನು ಇರಲಿ ಎಂದು ಅವರಿಗೆ ಒಂದು ಕಥೆಯನ್ನು ಹೇಳಿದನು:

## ಸೆರೆಬಿದ್ದ ನರಿಯ ಕಥೆ



ಒಂದು ಅಡವಿಯಲ್ಲಿ ಒಂದು ನರಿ. ಅದು ಹಸಿದು ಆಹಾರವನ್ನು ಹುಡುಕಿಕೊಂಡು ತಿರುಗುತ್ತಿತ್ತು. ಅಲ್ಲಿ ಒಂದು ಮೂಲೆಯಲ್ಲಿ ಒಂದು ಎತ್ತು ಸತ್ತುಬಿದ್ದಿತ್ತು. ನರಿಯು ಅದನ್ನು ಕಂಡು ಅದರ ಹಿಂದಿನಿಂದ ಹೊಟ್ಟೆಯೊಳಕ್ಕೆ ನುಗ್ಗಿ ಅಲ್ಲಿದ್ದುದನ್ನು ತಿನ್ನುತ್ತ ನಿಂತುಬಿಟ್ಟಿತು. ಆ ಹೆಣವು ಅಲ್ಲಿಯೇ ಒಣಗಿ ಹೊರಗೆ ಹೋಗುವುದಕ್ಕೆ ಇದ್ದ ತೂತು ಮುಚ್ಚಿಹೋಗಿ ಅದಕ್ಕೆ ಅಲ್ಲಿಯೇ ಸೆರೆಯಾಯಿತು.

ಆ ವೇಳೆಗೆ ಕೆಲವರು ಬೇಡರು ಬೇಟೆಗೆಂದು ನಾಯಿಗಳೊಡನೆ ಅಲ್ಲಿಗೆ ಬಂದು ಆ ಭಾರಿಯ ಎತ್ತನ್ನು ಕಂಡು ಅದರ ಚರ್ಮಕ್ಕಾಗಿ ಅದನ್ನು ಕತ್ತರಿಸಬೇಕು ಎಂದು ಹೊರಟರು. ಆಗ ಒಳಗಿದ್ದ ನರಿಯು "ಕೆಟ್ಟೆನು, ಏನಾದರೂ ಉಪಾಯ ಮಾಡಬೇಕು" ಎಂದುಕೊಂಡು ಕೂಗಿತು: "ಅಯ್ಯೋ, ಪಾಪಿಗಳಿರಾ, ನಾನೊಬ್ಬ ತಾಪಸನು, ಕಾರಣಾಂತರದಿಂದ ಇಲ್ಲಿರುವೆನು. ನೀವು ಈ ಪಶುವಿನ ಪೃಷ್ಠಕ್ಕೆ ಬಿಸಿ ನೀರು ತಂದು ಎರೆದು ದೂರಹೋಗಿ ನಿಂತು ನಮಗೆ ದಾರಿ ಕೊಡಬೇಕು. ಇಲ್ಲದಿದ್ದರೆ ಶಾಪ ಕೊಡುವೆನು" ಎನಲು, ಅವರು ಹೆದರಿ, ಹಾಗೆಯೇ ಮಾಡಿದರು.

ಆದರೂ ನರಿಗೆ ಹೊರಗೆಹೋಗುವುದಕ್ಕೆ ನಾಯಿಗಳಿವೆಯೆಂದು ದಿಗಿಲು. ಅದರಿಂದ ಮತ್ತೆ "ಎಲೈ ಮ್ಲೇಚ್ಛರೆ, ನಾವು ದೇವಾಂತರಗಳಲ್ಲಿರುವೆವು. ಅದರಿಂದ ನಿಮ್ಮ ಈ ನಾಯಿಗಳನ್ನು ಹಿಡಿದುಕೊಳ್ಳಿ" ಎಂದಿತು. ಅವರು ಅಪ್ಪಣೆಯೆಂದು ಹಾಗೆಯೇ ಮಾಡಲು, ಆ ನರಿಯು ಎತ್ತಿನ ಹಿಂಭಾಗದಿಂದ ಹೊರಟುಹೋಗಿ ಗುಡ್ಡವನ್ನು ಸೇರಿಕೊಂಡಿತು.

ಈ ಕಥೆಯನ್ನು ಕೇಳಿ ರಾಜಕುಮಾರರು ಇಂತಹ ಇನ್ನೊಂದು ಕಥೆಯನ್ನು ಹೇಳಿ ಎಂದು ಬಲವಂತಮಾಡಿದರು. ಆಗ ಈ ಹುಡುಗರನ್ನು ದಾರಿಗೆ ತರಲು ಇದೇ ಸರಿಯಾದ ಹಾದಿಯೆಂದು "ಹಾಗಾದರೆ, ನೀವು ಈ ಕಥೆಯನ್ನು ಮತ್ತೆ ಹೇಳಿ. ನಿಮಗೆ ಇಂತಹ ಕಥೆಗಳನು, ಬೇಕಾದಷ್ಟು ಹೇಳುವೆನು" ಎಂದನು. ಅವರೂ ಆಗಲೆಂದು ಮೂವರೂ ಸೇರಿಕೊಂಡು ಒಬ್ಬರಿಗೊಬ್ಬರು ಹೇಳಿಕೊಂಡು ಕಥೆಯನ್ನು ಚೆನ್ನಾಗಿ ಗಟ್ಟಿಮಾಡಿಕೊಂಡು ಬಂದು ಹೇಳಿದರು. ವಿಷ್ಣುಶರ್ಮನು "ಇನ್ನು ಚಿಂತೆಯಿಲ್ಲ : ಗೆದ್ದಂತಾಯಿತು" ಎಂದು ನೀತಿಶಾಸ್ತ್ರದ ಸಾರವನ್ನೆಲ್ಲಾ, ಸೋಹದೆ ಮಾಡಿದರೆ, ಸಿಕ್ಕಿದ್ದು ಹೋಯಿತು, ಒಡೆಯುವುದು, ಸಾಧಿಸುವುದು, ಕಟ್ಟುವುದು, ಎಂಬ ಐದು ತಂತ್ರಗಳನ್ನಾಗಿ ರಚಿಸಿ, ಅವರಿಗೆ ಕಥೆಗಳಾಗಿಯೇ ಅದಷ್ಟನ್ನೂ ಹೇಳಿದನು. ಅವರೂ ಅದನ್ನು ಚೆನ್ನಾಗಿ ಕಲಿತು, ಆರು ತಿಂಗಳಲ್ಲಿ ನೀತಿಶಾಸ್ತ್ರದಲ್ಲಿ ನಿಪುಣರಾದರು. ಅಂದಿನಿಂದಲೂ ಈ ಪಂಚತಂತ್ರವೆಂಬ ಈ ನೀತಿಶಾಸ್ತ್ರವು ಬಾಲಕರಿಗಾಗಿಯೇ ಭೂಮಿಯಲ್ಲಿ ಮೆರೆಯುತ್ತಿರುವುದು. ಇದರ ವಿಚಾರವಾಗಿ ಬಹುವಾಗಿ ಹೇಳಲೇಕೆ?



ತಪ್ಪದೆ ನಿತ್ಯವು ಓದಿದರಿದನು |
ನೀತಿಯಶಾಸ್ತ್ರವನಿದಕೇಳಿದರು ||
ಸೋಲೆಂಬುದ ತಾನವಗಿಲ್ಲ ||
ಇಂದ್ರನೆ ಬಂದರು ಭಯವಿಲ್ಲ || ೬ ||

**ಇಂತಿದು ಪೂರ್ವ ಪೀಠಿಕೆಯು**

# ಹೊಸಗನ್ನಡ ಪಂಚತಂತ್ರ

## ಸಿಕ್ಕಿದ್ದು ಹೋಯಿತು

ಹೊಸಗನ್ನಡ ಪಂಚತಂತ್ರದಲ್ಲಿ "ಸಿಕ್ಕಿದ್ದು ಹೋಯಿತು" ಎಂಬ ಮೊದಲನೆಯ ತಂತ್ರವು.

ಮಾಡುತಿರುವ ಕಾರ್ಯದಲ್ಲಿ| ಬುದ್ಧಿಲೋಪವಾಗದಿರಲು ॥
ನಿಜದಿ ವಿಪದ ದಾಂಟುವಂ | ಕಪಿಯು ಬದುಕಿ ಬಂದ ತೆರದೊಳು ॥ ೧ ॥

### ಮೊಸಳೆಯ ಕಥೆ

ಅದು ಹೇಗೆಂದರೆ :- ಒಂದಾನೊಂದು ಕಡಲ ದಡದಲ್ಲಿ ಒಂದು ದೊಡ್ಡ ನೇರಳೆಯ ಮರವುಂಟು. ಅದು ಸದಾಫಲವು ಎಂದರೆ ಯಾವಾಗಲೂ ಹಣ್ಣುಳ್ಳದು. ಅದರಲ್ಲಿ ರಕ್ತಮುಖನೆಂಬ ಕಪಿಯು ವಾಸಮಾಡಿಕೊಂಡಿತ್ತು. ಒಂದು ದಿವಸ ಕರಾಲಮುಖನೆಂಬ ಮೊಸಳೆಯು ಸಮುದ್ರದಿಂದ ಬಂದು ಅದೇ ಮರದ ಕೆಳಗೆ ಮಲಗಿತ್ತು. ಅದನ್ನು ಕಂಡು ಕಪಿಯು "ಎಲೈ, ನೀನು ನನಗೆ ಅತಿಥಿಯು. ಅದರಿಂದ ನಾನು ಕೊಡುವ ಅಮೃತದಂತಿರುವ ಈ ನೇರಳೆಯ ಹಣ್ಣುಗಳನ್ನು ತಿನ್ನು. ಕೇಳಿಲ್ಲವೆ :—

ಪ್ರಿಯನಾಗಲಿ ಅಪ್ರಿಯದಾಗಲಿ |
ಊಟದವೇಳೆಗೆ ಬಂದವನು ||
ಪಂಡಿತನಾಗಲಿ ಮೂರ್ಖನೆಇರಲಿ|
ಅತಿಥಿಯು ಅವನಾ ಸ್ವರ್ಗಕೆ
ಸೇತು | |೨ ||

ಅತಿಥಿಯು ಬಂದರೆ ಕೇಳದಿರು |
ಕುಲಗೋತ್ರದ ಸುದ್ದಿಗಳ ||
ವಿದ್ಯೆಯ ಶೀಲವನೇ ನೊಂದ |
ಹೇಳಿದನಾ ಮನು ಹೀಗೆ ||೩ ||



ದೂರದಿಂದ ದಣಿದು ಬಂದ | ಅತಿಥಿಯನ್ನು ಪೂಜಿಸಲ್ಕೆ ||
ತಪ್ಪದಃತ ಪಡೆವ ನೋಡು | ಪರಮ ಗತಿಯನು || ೪ ||
ಅತಿಥಿ ಪೂಜೆ ಪಡೆಯದೆ | ಹೊರಟು ಹೋದ ಮನೆಯನು ||
ದೇವ ದೇವರೆಲ್ಲರು | ಪಿತೃಗಳೊಡನೆ ಬಿಡುವರು || ೫ ||

ಎಂದು ಹೇಳಿ ಕಪಿಯು ಹಣ್ಣುಗಳನ್ನು ಕೊಟ್ಟಿತು. ಅದೂ ತಿಂದು ಆ ಕಪಿಯೊಡನೆ ಅಷ್ಟು ಹೊತ್ತು ಸುಖವಾಗಿದ್ದು ಮತ್ತೆ ಕಡಲಿಗೆ ಹೊರಟು ಹೋಯಿತು.

ಹೀಗೆಯೇ ದಿನವೂ ಅಗುತ್ತ ಬರಲು ಕಪಿಗೂ ಮೊಸಳೆಗೂ ಸ್ನೇಹವು ಬಲಿಯಿತು. ಅವೆರಡೂ ದಿನವೂ ಕುಳಿತು ಯಾವ ಯಾವದೇ ಶಾಸ್ತ್ರಗಳ ವಿಚಾರವಾಗಿ ಮಾತು ಆಡುವುವು. ಬೇಕಾದ ಹಾಗೆ ನೇರಿಳೆಯ ಹಣ್ಣನ್ನು ತಿನ್ನುವುವು. ಮೊಸಳೆಯು ತಾನು ತಿಂದು ಮಿಕ್ಕ ಹಣ್ಣುಗಳನ್ನು ಮನೆಗೆ ತೆಗೆದುಕೊಂಡು ಹೋಗಿ ತನ್ನ ಹೆಂಡತಿಗೂ ಕೊಡುವುದು.

ಒಂದು ದಿವಸ ಮೊಸಳಮ್ಮನು ಮೊಸಳಪ್ಪನನ್ನ " ನಾಥ, ಅಮೃತದಂತಿರುವ ಈ ಹಣ್ಣುಗಳು ನಿನಗೆ ಎಲ್ಲಿ ಸಿಕ್ಕುತ್ತವೆ ? " ಎಂದು ಕೇಳಿತು. ಮೊಸಳಪ್ಪನು " ಪ್ರಿಯೆ, ನನಗೆ ಬಹಳ ಬೇಕಾದ ಸ್ನೇಹಿತನಾದ ರಕ್ತಮುಖನೆಂಬ ವಾನರನಿರುವುದು. ಅದು ಈ ಹಣ್ಣುಗಳನ್ನು ಪ್ರೀತಿಯಿಂದ ಕೊಡುವುದು." ಎಂದು ಹೇಳಿತು.

" ಹಾಗಾದರೆ ಆ ಕಪಿಯು ಯಾವಾಗಲೂ ಇಂತಹ ಅಮೃತದಂತಹ ಹಣ್ಣುಗಳನ್ನೇ ತಿನ್ನುವುದೇನು ? " ಹಾಗಾದರೆ ಅದರ ಎದೆಯೂ ಅಮೃತಮಯವೇ ಆಗಿರಬೇಕು. ಹೆಂಡತಿಯೆಂದು ನನ್ನಿಂದ ನಿನಗೆ ಏನಾದರೂ ಆಗಬೇಕು ಎನ್ನುವ ಹಾಗಿದ್ದರೆ, ಅದರ ಎದೆಯನ್ನು ತಂದುಕೊಡು. ಅದನ್ನು ತಿಂದು ನಾನು ಮುಪ್ಪು ಮರಣಗಳು ಇಲ್ಲದವಳಾಗಿ ನಿನ್ನೊಡನೆ ಸಂಸಾರಮಾಡಿಕೊಂಡಿರುವೆನು."

"ಹಾಗೆಲ್ಲಾ ಎನ್ನಬಾರದು. ಆ ಕಪಿಯು ಈಗ ನನಗೆ ಒಡಹುಟ್ಟಿಗಿಂತ ಹೆಚ್ಚಾಗಿರುವನು. ಜೊತೆಗೆ ಹಣ್ಣುಗಳನ್ನು ಕೊಡುವನು. ಅದರಿಂದ ಅವನನ್ನು ಕೊಲ್ಲುವುದಕ್ಕಾಗುವುದಿಲ್ಲ: ಕೊಲ್ಲಕೂಡದು. ಅದರಿಂದ ಈ ಕೆಟ್ಟಾಸೆಯನ್ನು ಬಿಡು. ಕೇಳಿಲ್ಲವೆ?

ತಾಯ ಮಗನಾದ ತಮ್ಮನೊಬ್ಬ | ಒಳ್ಳಾತು ತಂದ ಅಣ್ಣನೊಬ್ಬ ||
ಆ ತಮ್ಮಗಿಂತ ಈಯಣ್ಣನೇ | ಹೆಚ್ಚೆಂದು ಬಲ್ಲವರು ಒಪ್ಪುವರು || ೬ ||

"ನೀನು ಯಾವಾಗಲೂ ನನ್ನ ಮಾತನ್ನು ತಳ್ಳಿಹಾಕಿಲ್ಲ. ಅಂತಹ ನೀನು ಈಗ ಹೀಗೆ ಹೇಳುತ್ತಿರುವುದನ್ನು ನೋಡಿದರೆ, ಅದು ವಾನರವಲ್ಲ: ವಾನರಿಯಾಗಿರಬೇಕು. ಅದರ ಮೇಲೆ ನಿನಗೆ ಮೋಹ ಬಂದಿದೆ. ಅದಕ್ಕಾಗಿಯೇ ನೀನು ಬೆಳಗಿನಿಂದ ಸಂಜೆಯವರೆಗೂ ಅಲ್ಲಿಯೇ ಇರುತ್ತೀಯೆ. ನನಗೆ ತಿಳಿಯಿತು. ನೀನು ನನಗೆ ಮೋಸ ಮಾಡುತ್ತಿದ್ದೀಯೆ."



ಮೊಸಳೆಯು ಹೆಂಡತಿಯ ಕಾಲಿಗೆ ಬಿದ್ದಿತು: ಅವಳನ್ನು ಮಗ್ಗುಲಲ್ಲಿ ಕುಳ್ಳಿರಿಸಿಕೊಂಡಿತು. ಕೋಪಗೊಂಡಿರುವ ಮಡದಿಯನ್ನು ಕೈ ಮುಗಿದು ಕೇಳಿಕೊಂಡಿತು. ಅದೂ ಕೋಪದಿಂದ ಕಣ್ಣಲ್ಲಿ ನೀರು ಸುರಿಸುತ್ತಾ "ನೀನು ಹೇಳುವುದು ನಿಜವಾಗಿದ್ದರೆ" ಆ ವಾನರಿಯಲ್ಲಿ ನಿನಗೆ ಮೋಹವಿಲ್ಲದಿದ್ದರೆ, ಅದನ್ನು ಹಿಡಿದು ತರಬಾರದು? ಅದು ಗಂಡು ಕಪಿಯಾದರೆ, ಅದಕ್ಕೂ ನಿನಗೂ ಅದೆಂತಹ ಸ್ನೇಹ? ಅಷ್ಟೇನು? ಅದರ ಎದೆಯನ್ನು ನಾನು ತಿನ್ನಬೇಕು. ಇಲ್ಲದಿದ್ದರೆ ನಾನು ಹೀಗೆಯೇ ಇಲ್ಲೇ ಮಲಗಿ ಬಿಡುತ್ತೇನೆ. ತಿಂದರೆ ಅದನ್ನು ತಿನ್ನ

ಬೇಕು: ಇಲ್ಲದಿದ್ದರೆ ಸತ್ತರೂ ಸರಿಯೇ!" ಎಂದು ಮೊಸಳಮ್ಮನು ಮಲಗಿಯೇ ಬಿಟ್ಟಿತು.

ಅದನ್ನು ಕಂಡು ಮೊಸಳೆಗೆ ಬಹು ಯೋಚನೆಯಾಯಿತು. "ಏನು ಮಾಡಲಿ? ಆ ಕಪಿಯನ್ನು ಕೊಲ್ಲುವುದು ಹೇಗೆ?" ಎಂದು ಬಹುವಾಗಿ ಯೋಚನೆಮಾಡಿ ಕೊನೆಗೆ ಕಪಿಯ ಬಳಿಗೇ ಹೋಯಿತು. ಕಪಿಯೂ ಬಹಳಹೊತ್ತು ಮಾಡಿಕೊಂಡು ಬಂದು ಏನೋ ಯೋಚನೆ ಯಲ್ಲಿರುವ ಆ ಮಿತ್ರನನ್ನು ಕಂಡು ವಿಶ್ವಾಸದಿಂದ ಕೇಳಿತು:— "ಮಿತ್ರ, ಇದೇಕೆ ಇಷ್ಟು ಹೊತ್ತಾಯಿತು? ಈ ದಿನ ಏಕೆ ಹೀಗೆ ಮುಗುಡದಲ್ಲಿರುವೆ? ಏಕೆ ಸಂತೋಷವಾಗಿ ಮಾತನಾಡದಿರುವೆ? ಏಕೆ ಸುಭಾಷಿತಗಳನ್ನು ಹೇಳುವುದಿಲ್ಲ?"

ಮೊಸಳೆಯು ಕಣ್ಣಿನಲ್ಲಿ ನೀರಿಟ್ಟುಕೊಂಡು ಹೇಳಿತು: "ಮಿತ್ರ, ಮನೆಯಲ್ಲಿ 'ಮಡದಿಯು ಮನಸೋಇಚ್ಛೆ' ಯಾಗಿ ಮಾತನಾಡಿ ಬಿಟ್ಟಿಳು. ನಿಷ್ಠುರ ಮಾಡಿಬಿಟ್ಟಳು. ಹೋಗು, ಕೃತಘ್ನ ನನಗೆ ಮೊಕ ವನ್ನು ತೋರಿಸಬೇಡ. ನಿನಗೆ ನಾಚಿಕೆಯಾಗುವುದಿಲ್ಲವೆ? ನಿನ್ನ ಮಿತ್ರನು ಕೊಟ್ಟಿದನ್ನು ತಿಂದು ತಿಂದು ಕುಳಿತಿರುವೆಯಲ್ಲ. ಅವನನ್ನು ಒಂದು ದಿನವಾದರೂ ಮನೆಗೆ ಊಟಕ್ಕೆ ಕರೆದೆಯಾ? ಇಂತಹ ನಿನಗೆ ನರಕವಲ್ಲದೆ ಬೇರೆ ಗತಿಯೂ ಉಂಟೆ? ಕೇಳಿಲ್ಲವೆ?

ಹಾರುವನ ಕೊಂದವ, ಹೆಂಡವನು ಕುಡಿದವ,
ವ್ರತವ ಬಿಟ್ಟವ, ಕದ್ದವ, ನೀಗುವರು ಪಾಪವ,
ಉಪಕಾರ ಮರೆತವ ನಿಜದಿ ನಾಶನ ಹೊಂದುವ ॥ ೭ ॥

ಅದರಿಂದ ಆ ನಮ್ಮ ಭಾವನನ್ನು ಈ ದಿನ ಮನೆಗೆ ಕರೆದು ಕೊಂಡು ಬಾ ಇಲ್ಲದಿದ್ದರೆ ನಿನ್ನನ್ನು ಕೊಂದು ನಾನೂ ಸಾಯುತ್ತೇನೆ." ಎಂದಳು. ಅದರಿಂದ ಅದೇ ಮಾತನ್ನು ಯೋಚಿಸುತ್ತಾ ಬಂದೆನು. ಹೀಗೆ ನಿನಗಾಗಿ ಜಗಳವಾಡುತ್ತಾ ಇಷ್ಟು ಹೊತ್ತಾಯಿತು. ನೀನು ದೊಡ್ಡ ಮನಸ್ಸುಮಾಡಿ ನಮ್ಮ ಮನೆಗೆ ಬರಬೇಕು. ಅಲ್ಲಿ ನಿಮ್ಮ

ಅತ್ತಿಗೆಯು ನಿನಗಾಗಿ ಕಾಲುಮಣೆಯನ್ನು ಹಾಕಿ, ಬಾಗಿಲಿನಲ್ಲಿ ಪಂದನ ಮಾಲೆ* ಯನ್ನು ಕಟ್ಟಿ ನಿನಗೆ ಕೊಡಬೇಕೆಂದು ವಸ್ತ್ರ ಭೂಷಣಗಳನ್ನೆಲ್ಲಾ ಸಿದ್ಧಮಾಡಿಕೊಂಡು, ಬಂದಾನೇ ಎಂದು ಕುಳಿತಿದ್ದಾಳೆ.” ಎಂದಿತು.

ಕಪಿಯು ಹೇಳಿತು: ಮಿತ್ರ, ಅತ್ತಿಗೆಯು ಸರಿಯಾಗಿ ಹೇಳಿದಳು. ನಿಜ.

ಕೊಡುವುದು ಕೊಂಬುದು ಗುಟ್ಟನು ಪೇಳ್ವುದು ಕೇಳುವುದು ||
ಉಂಬುದು ಉಣಿಪುದು ಎಂಬಿವು ಪ್ರೀತಿಯ ಲಕ್ಷಣವು || ೮ ||

ಆದರೆ ಒಂದೇ ಕಷ್ಟ! ನಾವು ಕಾಡಿನವರು, ನೀವು ನೀರಿನವರು. ನೀರಿನಲ್ಲಿರುವ ನಿಮ್ಮ ಮನೆಗೆ ನಾವು ಬರುವುದೆಂತು? ಅದರಿಂದ ನೀನು ದೊಡ್ಡಮನಸ್ಸುಮಾಡಿ ಆಕೆಯನ್ನು ಇಲ್ಲಿಗೇ ಕರೆದುಕೊಂಡು ಬಾ. ನಾನು ಆಕೆಗೆ ನಮಸ್ಕಾರಮಾಡಿ ಆಕೆಯ ಆಶೀರ್ವಾದವನ್ನು ಪಡೆಯುವದು.”

ಮೊಸಳೆಯು ಹೇಳಿತು: “ಗೆಳೆಯ, ಸಮುದ್ರ ಮಧ್ಯದಲ್ಲಿ ದೊಡ್ಡದಾಗಿ ಸೊಗಸಾದ ಒಂದು ಮರಳು ದಿಣ್ಣೆಯಿದೆ. ಅಲ್ಲಿ ನಮ್ಮ ಮನೆಯಿರುವುದು. ನನ್ನ ಬೆನ್ನಿನಮೇಲೆ ಕುಳಿತುಕೋ. ಸುಖವಾಗಿ, ನಿನಗೇನು, ಭಯವಿಲ್ಲದಂತೆ ಕರೆದುಕೊಂಡು ಹೋಗುವೆನು.”

ಕಪಿಗೆ ಆ ಮಾತನ್ನು ಕೇಳಿ ಸಂತೋಷವಾಯಿತು. “ಹಾಗಾದರೆ ತಡವೇಕೆ? ನಡೆ ಹೋಗೋಣ” ಎಂದು ಹಾರಿ ಅದರ ಬೆನ್ನಿನ ಮೇಲೆ ಕುಳಿತೇ ಬಿಟ್ಟಿತು. ಮೊಸಳೆಯು ನೀರಿಗಿಳಿದು ಮುಂದಕ್ಕೆ ನಡೆಯಿತು.

ಅಷ್ಟುದೂರ ಹೋಗುವುದರೊಳಗಾಗಿ ಆ ಸಮುದ್ರದಅಲೆಗಳು ಅಪ್ಪಳಿಸಿದುವು. ಕಪಿಗೆ ಹೆದರಿಕೆಯಾಯಿತು. “ಅಣ್ಣ ಮೆಲ್ಲಮೆಲ್ಲಗೆ ಹೋಗು. ಈ ಅಲೆಗಳ ಏಟು ತಡೆಯಲಾರೆ. ನನ್ನ ಮೈಯೆಲ್ಲ

---

* ತೋರಣ



ನೊಂದು ಹೋಯಿತು.'' ಎಂದಿತು. ಅದನ್ನು ಕೇಳಿ ಮೊಸಳೆಯು ಯೋಚಿಸಿತು. "ನಾವೀಗ ಆಳವಾದ ನೀರಿಗೆ ಬಂದಿರುವೆವು. ಇನ್ನು ಈ ಕಪಿಯು ಹಿಂತಿರುಗುವಂತಿಲ್ಲ. ಸಂಪೂರ್ಣವಾಗಿ ನನ್ನ ವಶವಾಗಿರುವುದು. ಆದರಿಂದ ಏಕೆ ಇದನ್ನು ಮನೆಗೆ ಕರೆದುಕೊಂಡುಹೋಗುವುದು ಎಂಬುದನ್ನು ಹೇಳಿದರೂ ಚಿಂತೆಯಿಲ್ಲ" ಎಂದುಕೊಂಡು ಕಪಿಗೆ ಹೇಳಿತು. "ಮಿತ್ರ, ಈಗ ನಾವು ಹೋಗುತ್ತಿರುವ ಕೆಲಸವೇ ಬೇರೆ. ನನ್ನ ಹೆಂಡತಿಯು ನಿನ್ನನ್ನು ಕೊಲ್ಲಬೇಕೆಂದಿರುವಳು." ಎಂದಿತು.

ಕಪಿಯು ಕೇಳಿತು: "ಅಣ್ಣ, ನನ್ನನ್ನು ಕೊಲ್ಲುವುದಕ್ಕೆ ನಾನು ನಿನಗಾಗಲಿ, ನಿನ್ನ ಹೆಂಡತಿಗಾಗಲಿ ಏನೂ ಅಪರಾಧ ಮಾಡಿಲ್ಲವಲ್ಲ?"

"ಇಲ್ಲ. ನೀನೇನೂ ಅಪರಾಧಮಾಡಿಲ್ಲ. ಆದರೆ ನನ್ನ ಹೆಂಡತಿಗೆ ನಿನ್ನ ಎದೆಯನ್ನು ತಿನ್ನಬೇಕು ಎನ್ನಿಸಿದೆ. ಅಮೃತದಂತಹ ಹಣ್ಣುಗಳನ್ನು ತಿಂದು ತಿಂದು ನಿನ್ನ ಎದೆಯೆಲ್ಲಾ ಅಮೃತ ಕಲಶವಾಗಿ ಹೋಗಿದೆ. ಅದನ್ನು ತಿನ್ನಬೇಕು ಎಂದು ಅವಳ ಆಸೆ. ಅದಕ್ಕಾಗಿ ನಿನ್ನನ್ನು ಕರೆದುಕೊಂಡು ಹೋಗುತ್ತಿರುವುದು."

"ಅಯ್ಯೋ! ಇಷ್ಟೇನೆ? ಈ ಮಾತು ಆಗಲೇ ಅಲ್ಲಿಯೇ ಹೇಳಬಾರದಾಗಿತ್ತೇ? ನನ್ನ ಎದೆಯನ್ನು ನಾನು ಇಲ್ಲಿಗೆ ತರಲಿಲ್ಲ. ಅಲ್ಲಿಯೇ ನೇರಳೆಯ ಮರದ ಪೊಟ್ಟರೆಯಲ್ಲಿ ಭದ್ರವಾಗಿಟ್ಟದ್ದೇನೆ. ಸಂತೋಷವಾಗಿ ಅದನ್ನು ಅತ್ತಿಗೆಗೆ ಒಪ್ಪಿಸುತ್ತೇನೆ. ಎದೆಯೇ ಇಲ್ಲದ ನನ್ನನ್ನು ಇಷ್ಟುದೂರ ಹೊತ್ತು ತಂದೆಯಲ್ಲ ಮತ್ತೆ?"

ಮೊಂಕು ಮೊಸಳೆಯು ಅದನ್ನು ಕೇಳಿ ನೋಸಹೋಯಿತು : "ಹಾಗೇನು? ಸದ್ಯಕ್ಕೆ ಬದುಕಿದೆ. ಆ ಕೆಟ್ಟ ಹೆಣ್ಣು ನಿನ್ನ ಎದೆಯನ್ನು ತಿನ್ನುವವರೆಗೂ ಮೇಲಕ್ಕೆ ಏಳುವುದೇಇಲ್ಲ ಎಂದು ಮಲಗಿಬಿಟ್ಟಿದ್ದಾಳೆ. ಪುಣ್ಯಾತ್ಮ, ನಡೆ, ನಿನ್ನನ್ನು ನೇರಿಳೆಯ ಮರದ ಹತ್ತಿರಕ್ಕೆ ಕರೆದುಕೊಂಡು ಹೋಗುತ್ತೇನೆ. ಆ ಎದೆಯನ್ನು ಕೊಡು ಎಂದು ಹಿಂತಿರುಗಿ ತೀರಕ್ಕೆ ಬಂತು. ಕಪಿಯೂ ಕೂಡ ತೀರಕ್ಕೆ ಬರುವವರೆಗೂ ಯಾವಯಾವದೋ ಹರಟೆಗಳನ್ನು ಹರಟುತ್ತಿದ್ದು, ತೀರಕ್ಕೆ ಬರುತ್ತಲೂ ಛಂಗನೆ ಹಾರಿ ಮರವನ್ನು ಏರಿಕೊಂಡು "ಅಬ್ಬಾ, ಉಳಿಯಿತು ಪ್ರಾಣ. ಕೇಳಿಲ್ಲವೆ ?

ವಿಶ್ವಾಸವಿಲ್ಲದನ ನಂಬದಿರು |
ನಂಬದಿರು ವಿಶ್ವಾಸವಿದ್ದವನನೂ ||
ವಿಶ್ವಾಸವಿದ್ದಯೆಡೆಯಿಂದ ಭಯ |
ಹುಟ್ಟಿದರೆ ಆಗುವುದು ಸರ್ವನಾಶ || ೯ ||

ನಾನು ಈ ದಿನ ಮತ್ತೆ ಹುಟ್ಟಿಬಂದಂತಾಯಿತು." ಎಂದು ಏನೇನೋ ಯೋಚಿಸಿಕೊಳ್ಳುತ್ತ ಕುಳಿತಿರಲು, ಮೊಸಳೆಯು "ಮಿತ್ರ ಎಲ್ಲಿ ಆ ಎದೆಯನ್ನು ಕೊಡು ಮತ್ತೆ, ನಿಮ್ಮ ಅತ್ತಿಗೆಯು ಅದನ್ನು ತಿಂದು ಬದುಕಲಿ" ಎಂದಿತು.

ಅದನ್ನು ಕೇಳಿ ಕಪಿಗೆ ಕೋಪ ಬಂತು. ಜೊತೆಯಲ್ಲಿ ಅದರ ಮೊಂಕುತನವನ್ನು ಕಂಡು ನಗುವೂ ಬಂತು. "ಮೂರ್ಖ, ವಿಶ್ವಾಸಘಾತುಕ, ಎದೆಯನ್ನು ತೆಗೆದಿಡುವುದು ಯಾರಿಗಾದರೂ ಸಾಧ್ಯವೆ? ಹೋಗು, ಹೋಗು, ಇನ್ನು ಮುಂದೆ ಇತ್ತಕಡೆ ಬಂದು ಗಿಂದೀಯೆ? ಪರೀಕ್ಷೆಮಾಡಿ ಕಳ್ಳನೆಂದು ತಿಳಿದವನನ್ನು ಮತ್ತೆ ನಂಬುವುದು ಎಂದರೆ ಯಮನನ್ನೇ ಬಾಯೆಂದು ಹೇಳಿಕಳುಹಿಸಿದಂತೆ." ಎಂದು ಚೆನ್ನಾಗಿ ಛೀಮಾರಿ ಹಾಕಿತು.

ಮೊಸಳೆಗೆ ಅದನ್ನು ಕೇಳಿ ತನ್ನ ತಪ್ಪು ತಿಳಿಯಿತು : “ ನಾನು ಈ ಕೋಡಗಕ್ಕೆ ನನ್ನ ಮನಸ್ಸಿನಲ್ಲಿ ಇದ್ದುದನ್ನು ಹೇಳಬಾರದಾಗಿತ್ತು, ನಾನು ಮೂಢನಾದೆ ಮೋಸಹೋದೆ. ಆದರೂ ಇದಕ್ಕೆ ನಂಬುಗೆಯು ಹುಟ್ಟುವಂತೆ ಏನಾದರೂ ಮಾಡಬೇಕು.” ಎಂದು ಮತ್ತೆ ಹೇಳಿತು. “ ಮಿತ್ರ, ನಾನು ಹಾಸ್ಯಕ್ಕೆ ಆಡಿದ ಮಾತೇ ನಿಜವೆಂದು ಕೊಂಡೆಯಲ್ಲಾ ? ನನ್ನ ಹೆಂಡತಿಗೆ ನಿನ್ನ ಎದೆಯಿಂದ ಆಗಬೇಕಾದ ಪ್ರಯೋಜನವಾದರೂ ಏನು? ನೀನು ಅತಿಥಿಯಾಗಿ ನಮ್ಮ ಮನೆಗೆ ಬಾ. ನಿಮ್ಮ ಅತ್ತಿಗೆಯು ನಿನ್ನ ಹಾದಿಯನ್ನು ಎದುರು ನೋಡುತ್ತಿರುವಳು.” ಎಂದಿತು.

ಕಪಿಗೆ ಇನ್ನೂ ರೇಗಿತು : “ ದುಷ್ಟ, ಹೋಗು ಹೋಗು. ನಾನು ಬರುವುದಿಲ್ಲ. ” ಕೇಳಿಲ್ಲವೆ?

ಹಸಿದವನು ಮಾಡದಾ ಪಾಪವುಂಟೆ ?
ನಿರ್ಧನನು ಆದವಗೆ ಕರುಣವುಂಟೆ ?
ಹೋಗು ಹೋಗೆಲೆ ಹೆಣ್ಣೆ ತಿರುಗಿ ಹೋಗು,
ಗಂಗದತ್ತನು ಮತ್ತೆ ಬರುವುದುಂಟೆ || ೧೦ ||

ಮೊಸಳೆಯು “ ಅದೇನು” ಎಂದು ಕೇಳಿತು. ಕಪಿಯು ಹೇಳಿತು :—



# ಗಂಗದತ್ತನ ಕಥೆ

ಒಂದಾನೊಂದು ಕೊಳದಲ್ಲಿ ಗಂಗದತ್ತನೆಂಬ ಮಂಡೂಕ (ಕಪ್ಪೆ) ರಾಜನಿದ್ದನು. ಅವನ ದಾಯಾದಿಗಳು ಕೆಲವರು ಅವನನ್ನು ರೇಗಿಸಿದರು. ಆಗ ಅವನಿಗೆ ಎನ್ನಿಸಿತು: “ಈ ದಾಯಾದಿಗಳಿಗೆ ತಕ್ಕಂತೆ ಮಾಡಬೇಕು.” ಕೇಳಿಲ್ಲವೆ ?

ಅಪಾಕಾರ ಉಪಕಾರ ಮಾಡಿರುವ ಶತ್ರುಮಿತ್ರರಿಗೆ ||
ಅಪಾಕಾರಿ ಉಪಕಾರಿ ಯಾದವನ ಜನ್ಮ ಸಾರ್ಥಕವು || ೧೧ ||

ಎಂದು ಆ ಕೊಳದಿಂದ ಯಾತದ ಬಾನಿಯನ್ನು ಹಿಡಿದು ಹೊರಕ್ಕೆ ಹೊರಟು ಹೋಯಿತು. ಮುಂದೆ ಹೋಗುತ್ತಾ ದಾರಿಯಲ್ಲಿ ಬಿಲದೊಳಕ್ಕೆ ಹೋಗುತ್ತಿರುವ ಸರ್ಪವನ್ನು ಕಂಡಿತು. “ಆಹಾ! ಇದೀಗ ಸರಿಯಾದ ಉಪಾಯ. ಇದನ್ನು ಉಪಾಯಮಾಡಿ ಆ ಕೊಳಕ್ಕೆ ಕರೆದುಕೊಂಡು ಹೋದರೆ ಅವರಿಗೆಲ್ಲಾ ತಕ್ಕ ಗತಿಯಾಗುವುದು. ಶತ್ರುವಿಗೆ ಶತ್ರುವನ್ನೂ ಬಲವಂತನಿಗೆ ಬಲವಂತನನ್ನೂ ಹೊಂದಿಸಿ, ಅವರಿಬ್ಬರೂ ಹತರಾಗುವಂತೆ ಮಾಡಬೇಕು. ತನ್ನ ಕೆಲಸವನ್ನು ಮಾಡಿಕೊಂಡು ತೆಪ್ಪಗಿರಬೇಕು. ಗಾದೆ ಇಲ್ಲವೆ ಮುಳ್ಳನ್ನು ಮುಳ್ಳಿಂದ ತೆಗೆಯಬೇಕು. ಎಂದು?” ಎಂದುಕೊಂಡು ಆ ಬಿಲದ ಬಾಯಿಗೆ ಹೋಗಿ “ಪ್ರಿಯದರ್ಶನ, ಪ್ರಿಯದರ್ಶನ, ಬಾ, ಬಾ.” ಎಂದು ಕೂಗಿತು.

ಅದನ್ನು ಕೇಳಿ ಬಿಲದಲ್ಲಿದ್ದ ಹಾವು ಯೋಚಿಸಿತು. “ಇದು ಹಾವಿನ ಕಂಠವಲ್ಲ. ಕೂಗುತ್ತಿರುವವನು ನಮ್ಮ ಜಾತಿಯಲ್ಲ, ನಾನು ಇನ್ನು ಯಾರ ಜೊತೆಯಲ್ಲಿಯೂ ನನಗೆ ಸ್ನೇಹವಲ್ಲ. ಅದರಿಂದ, ಇಲ್ಲಿಯೇ ಇದ್ದುಕೊಂಡು ಇವನು ಯಾರು ಎಂಬುದನ್ನು ತಿಳಿಯಬೇಕು. ಕುಲ, ಶೀಲ, ಮನೆ, ಮಠ, ಹೆಸರು, ಬಳಗ, ತಿಳಿಯದವನೊಡನೆ ಬಳಕೆಯಿಟ್ಟುಕೊಳ್ಳಬಾರದು ಎಂದು ಬೃಹಸ್ಪತಿಯು

ಹೇಳಿರುವನು. ಇವನು ಯಾವನಾದರೂ ಮಂತ್ರವಾದಿಯೋ ಔಷಧ ವನ್ನು ಬಲ್ಲವನೋ ಆಗಿದ್ದರೆ ನನಗೆ ತಪ್ಪದೆ ಬಂಧನವಾಗುವುದು. ಅಥವಾ ಯಾವನಾದರೂ ಹಿಂದಿನ ವೈರವನ್ನು ನೆನೆದು ಇವೊತ್ತು ಕೊಲ್ಲುವುದಕ್ಕೆ ಬಂದಿದ್ದರೆ?" ಎಂದು ಹಲವು ತೆರದಲ್ಲಿ ಯೋಚನೆ ಮಾಡಿ ಅಲ್ಲಿಂದಲೇ "ಯಾರು ಎಂದನು.?"

"ನಾನು ಗಂಗದತ್ತನೆಂಬ ಮಂಡೂಕ ರಾಜನು. ನಿನ್ನ ಸ್ನೇಹವನ್ನು ಬಯಸಿ ಬಂದಿರುವೆನು."

"ನಿನ್ನ ಮಾತು ನಂಬುವಹಾಗಿಲ್ಲ. ಹುಲ್ಲು ಎಂದಾದರೂ ಬೆಂಕಿಯನ್ನು ಹುಡುಕಿಕೊಂಡು ಬರುವುದೇ? ನೀನು ನನ್ನ ಅನ್ನ. ನಾನು ನಿನ್ನ ಮೃತ್ಯು. ಯಾರಾದರೂ ಮೃತ್ಯುವನ್ನು ಹುಡುಕಿಕೊಂಡು ಬರುವರೆ? ಸುಳ್ಳು ಹೇಳುತ್ತಿದ್ದೀಯೆ. ಹೋಗು ಹೋಗು"

"ಎಲೈ ನಾನು ಹೇಳುವುದು ಸರ್ವಥಾ ನಿಜ. ನೀನು ನನಗೆ ಸ್ವಭಾವ ವೈರಿಯೆನ್ನುವುದೂ ನಿಜ. ಆದರೂ ಕೇಳು ಶತ್ರುಗಳಿಂದ ನನಗೆ ಅಪಮಾನವಾಯಿತು. ಕೇಳಿಲ್ಲವೆ?

ಸರ್ವನಾಶವು ಒದಗಿದಾಗ। ಪ್ರಾಣಕ್ಕೆ ಕಷ್ಟಬಂದಾಗ ||
ಶತ್ರುವಾದರು ಕಾಲು ಹಿಡಿದು। ಕಾದುಕೋ ಪ್ರಾಣಧನಗಳನು || ೧೨ ||

ಅದರಿಂದ ನಿನ್ನಬಳಿಗೆ ಬಂದಿರುವೆನು."

"ಆಯಿತು. ನಿನಗೆ ಯಾರಿಂದ ಅಪಮಾನವಾಯಿತು?"

"ಇನ್ನು ಯಾರಿಂದ. ನನ್ನ ಕುಲದವರಿಂದಲೇ! ನನ್ನ ದಾಯಾದಿಗಳಿಂದಲೇ!"

"ನೀನು ಇರುವುದೆಲ್ಲಿ? ಬಾವಿಯಲ್ಲೋ ಕೊಳದಲ್ಲೋ ಕೆರೆ ಯಲ್ಲೋ ಮಡುವಿನಲ್ಲೋ?"

"ಕಲ್ಲು ಕಟ್ಟಿರುವ ಕೊಳದಲ್ಲಿ."

"ಅಲ್ಲಿಗೆ ನಾನು ಬರುವುದಿಲ್ಲ. ಅಲ್ಲಿಗೆ ನಾನು ಸುಲಭವಾಗಿ ಹೋಗಿ ಬರುವುದಕ್ಕಾಗುವುದಿಲ್ಲ. ಹೋದರೂ ಇರುವುದಕ್ಕೆ ಆಗುವುದಿಲ್ಲ. ನಿನಗೆ ನನ್ನಿಂದ ಪ್ರಯೋಜನವಾಗುವುದಿಲ್ಲ. ಹೋಗು. ಕೇಳಿಲ್ಲ

**ನುಂಗುವಷ್ಟು ಕಚ್ಚಿಕೋ | ಅರಗುವಷ್ಟು ತಿಂದುಕೋ ||**
**ಬದುಕಬೇಕು ಎಂಬೆಯಾ | ಕೊನೆಗೆ ಆಹುದ ನೋಡಿಕೋ || ೧೩ ||**

"ನೀನು ಬಾ. ಅಲ್ಲಿ ಇಳಿಯುವುದಕ್ಕೆ, ನೀನು ಇರುವುದಕ್ಕೆ ಎಲ್ಲಾ ಅನುಕೂಲವಿದೆ. ನೀರಿನ ಅಂಚಿನಲ್ಲಿ ಸೊಗಸಾದ ಬಿಲವಿದೆ. ನೀನು ಅಲ್ಲಿದ್ದುಕೊಂಡು ಆಟವಾಡಿಕೊಂಡು ಅಲ್ಲಿರುವ ಕಪ್ಪೆಗಳನ್ನೆಲ್ಲ ನೋಡಿಕೊಳ್ಳಬಹುದು."

ಇದೆಲ್ಲವನ್ನೂ ಕೇಳಿ ಹಾವು ಯೋಚಿಸಿಕೊಂಡಿತು: "ನನಗೆ ವಯಸ್ಸಾಯಿತು. ಯಾವಾಗಲೋ ಎಲ್ಲೋ ಒಂದು ಇಲಿ ಸಿಕ್ಕಿದರೆ ಸಿಕ್ಕಿತು. ಇಲ್ಲದಿದ್ದರೆ ಇಲ್ಲ. ಈಗ ಈ ಕುಲನಾಶಕನು ಬಂದು ಒಂದು ಜೀವನೋಪಾಯವನ್ನು ತೋರಿಸುತ್ತಿದ್ದಾನೆ. ಹೀಗೇಕೆ ಮಾಡಬಾರದು? ಬಲವಿಲ್ಲದವನೂ ಸಹಾಯಗಳಿಲ್ಲದವನೂ ಸುಖವಾದ ಜೀವನೋಪಾಯವನ್ನೇ ಹುಡುಕಬೇಕು ಎಂದು ತಿಳಿದವರು ಹೇಳುವರು. ಅದರಿಂದ ಒಪ್ಪಿಕೊಳ್ಳೋಣ." ಎಂದು ಕಪ್ಪೆಯ ಮಾತಿಗೆ ಒಪ್ಪಿಕೊಂಡು ಅದರ ಹಿಂದೆಯೇ ಹೋಯಿತು.

ದಾರಿಯಲ್ಲಿ ಹೋಗುತ್ತ ಗಂಗದತ್ತನು "ಅಯ್ಯಾ, ನೋಡು ಈಗಲೇ ಹೇಳಿದ್ದೇನೆ. ನೀನು ಮಾತ್ರ ನಾನು ತೋರಿಸಿದವರನ್ನೇ ತಿನ್ನಬೇಕು. ನಮ್ಮ ಮನೆಯವರ ತಂಟೆಗೆ ಬರಬಾರದು." ಎಂದಿತು. ಹಾವು ಕೂಡ, ಅದಕ್ಕೊಪ್ಪಿಕೊಂಡು "ನೀನು ನನ್ನ ಮಿತ್ರನಾದೆ. ಅದರಿಂದ ಅಂಜಬೇಡ. ನಿನ್ನ ದಾಯಾದಿಗಳನ್ನು ಮಾತ್ರ ತಿನ್ನುವೆನು" ಎಂದು ಮಾತುಕೊಟ್ಟು ಹೋಗಿ, ಆ ಕಪ್ಪೆಯು ತೋರಿಸಿದ

ಕಡೆಯಿಂದ ಇಳಿದು, ಅದು ತೋರಿಸಿದ ಬಿಲದಲ್ಲಿ ಹೋಗಿ ಸೇರಿಕೊಂಡಿತು.

ಬರುಬರುತ್ತ ಗಂಗದತ್ತನ ದಾಯಿಾದಿಗಳೆಲ್ಲ ನಿರ್ಮೂಲವಾಗಿ ಹೋದರು. ಹಾವು " ಮಿತ್ರ, ನಿನ್ನ ಶತ್ರುಗಳು ಮುಗಿದರು. ನನಗೆ ತಿನ್ನುವುದಕ್ಕೆ ಇನ್ನೇನಾದರೂ ಕೊಡು " ಎಂದಿತು.

" ನೀನು ನನಗೆ ಬಹಳ ಉಪಕಾರ ಮಾಡಿದೆ. ಇನ್ನು ನೀನು ಸಂತೋಷವಾಗಿ ಹೋಗಿ ಬಾ."

" ಚೆನ್ನಾಗಿ ಹೇಳಿದೆ, ನಾನು ಎಲ್ಲಿಗೆ ಹೋಗಲಿ ? ಅಲ್ಲಿ ನನ್ನ ಬಿಲವನ್ನು ಇನ್ನು ಯಾವುದೋ ಹಾವು ಹಿಡಿದುಕೊಂಡಿರುತ್ತದೆ. ಅದರಿಂದ ಹೋಗುವುದು ಗೀಗುವುದು ಆಗುವುದಿಲ್ಲ. ನಿನ್ನ ಪರಿವಾರದಲ್ಲಿಯೇ ಒಂದೊಂದು ಕಪ್ಪೆಯನ್ನು ಕಳುಹಿಸು. ಇಲ್ಲದಿದ್ದರೆ ನೋಡಿಕೋ "

ಆ ಮಾತು ಕೇಳಿ ಕಪ್ಪೆಗೆ ಬುದ್ಧಿ ಬಂತು. ತಾನು ಹಾವನ್ನು ಕರೆತಂದುದು ತಪ್ಪಾಯಿತು ಎಂದು ತಿಳಿಯಿತು. " ತನಗಿಂತಲೂ ಬಲವಾದ ಹಗೆಯನ್ನು ಗೆಳೆಯನನ್ನು ಮಾಡಿಕೊಳ್ಳುವುದೂ ವಿಷವನ್ನು ತಿನ್ನುವುದೂ ಎರಡೂ ಒಂದೇ ! " ಎಂಬ ದೊಡ್ಡವರ ಮಾತು ನೆನಪಾಯಿತು. ಕೇಳಿಲ್ಲವೆ ?

ಬಡಬನಿಗೆ ಸಾಗರವು ಕೊಡುವಂತೆ ನೋಡು ||
ಎಲ್ಲವನು ಕೊಂಡೆಯ್ವ ಶತ್ರು ಬಂದಾಗ |
ಕೊಂಚವಾದರು ಕೊಟ್ಟು ಉಳಿದುಕೊಳ್ಳಯ್ಯ || ೧೪ ||

ಅಲ್ಲದೆ, ಕೊಂಚವಕೊಟ್ಟು ಬಹಳವನುಳಿಸಿಕೋ ||
ಕೊಂಚಕ್ಕಾಗಿ ಬಹಳವ ಕಳೆವುದು ||
ಜಾಣನ ಪರಿಯಲ್ಲ " " || ೧೫ ||

ಇಂತು ಎಲ್ಲವನ್ನೂ ಚಿಂತಿಸಿ, ಕೊನೆಗೆ ಹಾವನ್ನು ರೇಗಿಸುವುದು ತರವಲ್ಲ ಎಂದು ದಿನಕ್ಕೆ ಒಂದೊಂದು ಕಪ್ಪೆಯನ್ನು ಕಳು

ಹಿಸಿ ಕೊಡುವುದಾಗಿ ಒಪ್ಪಿಕೊಂಡು ಹಾಗೆಯೇ ಮಾಡುತ್ತಿತ್ತು. ಆ ಹಾವು ಕಂಡಹಾಗೆ ಗಂಗದತ್ತನು ಕಳುಹಿಸಿದುದನ್ನು ತಿಂದು ಕಾಣದಹಾಗೆ ಕೈಗೆ ಸಿಕ್ಕಿದುದನ್ನು ತಿನ್ನುತ್ತಿತ್ತು

ಹೀಗೆಯೇ ಇರಲು ಒಂದು ದಿನ ಆ ಹಾವು ಗಂಗದತ್ತನ ಮಗನನ್ನೇ ತಿಂದುಬಿಟ್ಟಿತು. ಆಗ ಅದು ಅಯ್ಯೋ ಎಂದು ಅಳಲು, ಅದರ ಹೆಂಡತಿಯು, "ಮನೆ ಹಾಳ, ಅಳುವುದಕ್ಕೆ ನಾಚಿಕೆಯಾಗುವುದಿಲ್ಲವೆ? ನಿನ್ನಿಂದಲ್ಲವೇ ನಮಗೆಲ್ಲಾ ಮೃತ್ಯುವು ಬಂದಿರುವುದು?" ಈಗಲೂ ಎಲ್ಲಿಯಾದರೂ ಓಡಿಹೋಗುವ ಯೋಚನೆಯನ್ನಾದರೂ ಮಾಡು. ಇಲ್ಲದಿದ್ದರೆ ಇದನ್ನು ಕೊಲ್ಲಿಸುವ ಉಪಾಯವನ್ನಾದರೂ ಮಾಡು ಎಂದು ಹೇಳಿತು.

ಇನ್ನು ಕೊಂಚ ಕಾಲವು ಕಳೆಯುವುದರಲ್ಲಿ ಮಂಡೂಕ ಕುಲವೆಲ್ಲ ನಾಶವಾಗಿ ಹೋಗಿ ಗಂಗದತ್ತನೊಂದೇ ಒಂದು ಉಳಿಯಿತು. ಆಗ ಹಾವು ಅದರ ಬಳಿಗೆ ಬಂದು, "ಗಂಗದತ್ತ, ನನಗೆ ಹಸಿವು ತಿನ್ನುವುದಕ್ಕೆ ಕಪ್ಪೆಗಳಿಲ್ಲ. ನೀನು ನನ್ನನ್ನು ಇಲ್ಲಿಗೆ ಕರೆತಂದವನು. ಅದರಿಂದ ನನಗೆ ಊಟಕ್ಕಿಕ್ಕು" ಎಂದಿತು. ಅದಕ್ಕೆ ಕಪ್ಪೆಯೂ ಯೋಚಿಸಿ, "ಮಿತ್ರ, ನಾನು ಇಲ್ಲಿಯೇ ಇದ್ದು ನಿನಗೆ ಊಟವೆಲ್ಲಿಂದ ತರಲಿ? ನನ್ನನ್ನು ಕಳುಹಿಸಿಕೊಡು. ಎಲ್ಲಾದರೂ ಹೋಗಿ ಬೇರೆ ಕಪ್ಪೆಗಳನ್ನು ಕರೆದುಕೊಂಡು ಬರುವೆನು." ಎಂದು ಹೇಳಿ ಅದರ ಅಪ್ಪಣೆಯನ್ನು ಪಡೆದುಕೊಂಡು ಕೊಳದಿಂದ ಹೊರಕ್ಕೆ ಬಂತು.

ಕಪ್ಪೆಯು ಅಲ್ಲಿಗೆ ಮತ್ತೆ ಬರಲಿಲ್ಲ. ಆಗ ಹಾವು ಅಲ್ಲಿಯೇ ಇನ್ನೊಂದು ಪೊಟರೆಯಲ್ಲಿದ್ದ ಹಲ್ಲಿಯನ್ನು ಗಂಗದತ್ತನನ್ನು ಕರೆದುಕೊಂಡು ಬಾರೆಂದು ಕಳುಹಿಸಿತು. ಹಲ್ಲಿಯು ಆ ಕಪ್ಪೆಯನ್ನು ಹುಡುಕಿಕೊಂಡು ಹೋಗಿ "ಗಂಗದತ್ತ, ನೀನಿಲ್ಲದಿದ್ದರೆ ನಾನು

ಬದುಕುವುದಕ್ಕೆ ಆಗುವುದಿಲ್ಲ. ಅದರಿಂದ ಬರಲೇಬೇಕು." ಎಂದು ಹಾವು ಹೇಳಿಕಳುಹಿಸಿದೆ ಯೆನ್ನಲು, ಆಗ ಆ ಕಪ್ಪೆಯು "ಗಂಗದತ್ತನು ಬರುವುದುಂಟೆ?" ಎಂದಿತು. ಅದರಂತೆ, ಎಲೆ ದುಷ್ಟ, ನಾನೂ ನಿನ್ನ ಮನೆಗೆ ಎಂದೂ ಬರುವುದಿಲ್ಲ." ಎಂದು ಕಪಿಯು ಹೇಳಿತು.




ಅದನ್ನು ಕೇಳಿ ಮೊಸಳೆಯು ಮತ್ತೆ ಹೇಳಿತು: "ಮಿತ್ರ, ನೀನು ಹೇಳುವುದು ಸರಿಯಲ್ಲ. ನೀನು ಮನಸ್ಸು ಮಾಡಿ ಮನೆಗೆ ಬಾ. ಇಲ್ಲದಿದ್ದರೆ, ನನ್ನ ಪಾಪವು ಕಳೆಯುವುದಿಲ್ಲ. ಇಲ್ಲದಿದ್ದರೆ, ನಾನು ಇಲ್ಲಿಯೇ ಮಲಗಿ ಅನ್ನವನ್ನು ಬಿಟ್ಟು ಪ್ರಾಣಾತ್ಯಾಗಮಾಡುವೆನು." ಹಾಗೆಂದರೂ ವಾನರವು ಮನಸ್ಸಿಗೆ ಹಾಕಿಕೊಳ್ಳದೆ, ಹೇಳಿತು:– "ನಾನೇನು ಲಂಬಕರ್ಣನಂತೆ ಮೂರ್ಖನೆಂದುಕೊಂಡೆಯಾ? ಅಪಾಯವಿದೆಯೆಂದು ತಿಳಿದೂ ನಾನಾಗಿ ಹೋಗಿ ಸಿಕ್ಕಿಕೊಳ್ಳಲೇ? ಕೇಳಿಲ್ಲವೆ?

ಬಂದು, ಸಿಂಹವಿಕ್ರಮ ಕಂಡು ಓಡಿತು ||
ಮತ್ತೆ, ಸೋತು ಮಾತಿಗೆ ಬಂದು ಸತ್ತಿತು || ೧೬ ||

ಮೊಸಳೆಯು "ಆ ಲಂಬಕರ್ಣನಾರು? ಕಂಡು ಕಂಡೂ ಹೇಗೆ ಸತ್ತಿತು? ಎಂದು ಕೇಳಲು ಕಪಿಯು ಹೇಳಿತು:—



# ಹೊಸಗನ್ನಡ ಪಂಚತಂತ್ರ

## ಲಂಬಕರ್ಣನ ಕಥೆ

ಒಂದಾನೊಂದು ಕಾಡಿನಲ್ಲಿ ಕರಾಲಕೇಸರನೆಂಬ ಸಿಂಹ ವೊಂದಿತ್ತು. ಅದಕ್ಕೆ ಧೂಸರಕನೆಂಬ ಒಂದು ನರಿಯು ಆಳಾಗಿ ಇತ್ತು. ಆ ಸಿಂಹವು ಒಮ್ಮೆ ಒಂದು ದೊಡ್ಡ ಕೊಂಬಿನ ಆನೆಯೊಡನೆ ಹೋರಾಡುವಾಗ ಕೊಂಬಿನ ಏಟು ಬಿದ್ದು ಗಾಯವಾಗಿ ಮೇಲಕ್ಕೇಳ ಲಾರದೆ ಬಿದ್ದುಹೋಯಿತು. ಅದು ಹಾಗೆ ಬೇಟೆಮಾಡದೆ ಬಿದ್ದಿರಲು, ಧೂಸರಕನಿಗೆ ತಿನ್ನುವುದಕ್ಕೆ ಏನೂ ಸಿಕ್ಕದೆ ಹೋಯಿತು. ಆಗ ಅದು, "ಒಡೆಯ, ನನಗೆ ಹೊಟ್ಟೆಹಸಿವು. ಮೇಲಕ್ಕೆ ಏಳಲೂಲಾರೆ, ನಾನು ಏನು ಸೇವೆಯನ್ನು ಮಾಡಲಿ?" ಎಂದು ಅತ್ತುಕೊಂಡಿತು. ಅದನ್ನು ಕೇಳಿ ಸಿಂಹವು "ಹೋಗು, ಯಾವುದಾದರೂ ಪ್ರಾಣಿಯನ್ನು ನೋಡಿ ಕೊಂಡು ಬಾ. ನಾನು ಹೀಗಿದ್ದರೂ ಬೇಟೆಯಾಡಿಕೊಡುವೆನು." ಎಂದಿತು. ನರಿಯು ಆಗಲೆಂದು ಹೊರಟಿತು.

ನರಿಯು ಹುಡುಕುತ್ತಾ ಒಂದು ಹಳ್ಳಿಯ ಬಳಿಗೆ ಬಂತು. ಅಲ್ಲಿ ಲಂಬಕರ್ಣನೆಂಬ ಒಂದು ಕತ್ತೆಯು ಕೆರೆಯ ಬಳಿಯಲ್ಲಿ ಅಲ್ಲಲ್ಲಿ ಇದ್ದ ಒಂದೊಂದು ಗರಿಕೆಯನ್ನು ಮೇಯುತ್ತಾ ತಿರುಗುತ್ತಿತ್ತು. ಅದನ್ನು ಕಂಡು ಹತ್ತಿರ ಹೋಗಿ ಆ ನರಿಯು "ಮಾವ, ನನ್ನದೊಂದು ನಮಸ್ಕಾರವನ್ನು ಒಪ್ಪಿಸಿಕೊ. ನಿನ್ನನ್ನು ನೋಡಿ ಬಹಳದಿನವಾಯಿತು. ಇದೇಕೆ? ಹೀಗೆ ಬಡವಾಗಿರುವೆಯಲ್ಲ.!" ಎಂದು ವಿನಯವಾಗಿ ಕೇಳಿತು. ಆ ಕತ್ತೆಯು "ಏನು ಹೇಳಲಿ, ಅಳಿಯ, ನಮ್ಮ ಅಗಸನಿಗೆ ದಯೆಯೆಂಬುದು ಕಿಂಚಿತ್ತೂ ಇಲ್ಲ. ಭಾರ ಬೇಕಾದಹಾಗೆ ಹೊರಿಸು ತ್ತಾನೆ. ಹುಲ್ಲು ಮಾತ್ರ ಒಂದು ಹಿಡಿಯೂ ಹಾಕುವುದಿಲ್ಲ. ಈ ಧೂಳುಕವಿದಿರುವ ಹುಲ್ಲು ತಿಂದರುಂಟು, ಇಲ್ಲದಿದ್ದರೆ ಇಲ್ಲ. ಹೀಗಿರಲು ಮೈಯಲ್ಲಿ ಪುಷ್ಟಿ ಎಲ್ಲಿಂದ ಬಂದೀತು?" ಎಂದು ಅತ್ತುಕೊಂಡಿತು.

" ಹಾಗಾದರೆ ಮಾವ, ಪಚ್ಚೆಯತುಂಡು ಎನ್ನುವ ಹಾಗಿರುವ ಗರಿಕೆ, ಒಂದು ನದಿಯ ತೀರದಲ್ಲಿದೆ. ನೀನು ಬಂದರೆ, ನಾನೂ ಮುಗ್ಗುಲಲ್ಲಿಯೇ ಇರುತ್ತೇನೆ. ಇಬ್ಬರೂ ಮಾತುಕಥೆ ಆಡಿಕೊಂಡು ಸುಖವಾಗಿರಬಹುದು."

" ಅಯ್ಯೋ, ನೀನು ಹೇಳುವುದು ಸರಿ. ಆದರೂ ನಾವು ಊರಿನವರು. ಕಾಡಿನವರು ನಮ್ಮನ್ನು ಕಂಡರೆ ಹೊಡೆದು ತಿನ್ನುವರು. ಹೀಗಿರಲು, ನಾವು ಅಲ್ಲಿಗೆ ಬಂದಿರುವುದು ಹೇಗೆ?"

" ಹಾಗಲ್ಲ. ಮಾವ, ನಾನಿಲ್ಲವೆ? ನಾನಿರುವಾಗ ಅಲ್ಲಿಗೆ ಬರುವ ಗಂಡಾದರೂ ಯಾವುದು? ಅಲ್ಲಿಗೆ ಇನ್ನು ಯಾರೂ ಬರುವ ಹಾಗಿಲ್ಲ. ಅಷ್ಟೇ ಅಲ್ಲ. ಅಗಸನ ಹತ್ತಿರ ಇರಲಾರದೆ ಬೇಸತ್ತು ಬಂದುಬಿಟ್ಟಿರುವ ಹೆಣ್ಣುಕತ್ತೆಗಳೂ ಅಲ್ಲಿ ಮೂರು ಇವೆ. ಅವು ತಿಂದು ತಿಂದು ಚೆನ್ನಾಗಿ ಕೊಬ್ಬಿವೆ. ಅವಕ್ಕೂ ಒಬ್ಬ ಗಂಡನು ಬೇಕು. ನೀನು ಬಂದರೆ ಅಲ್ಲಿಗೆ ಕರೆದುಕೊಂಡು ಹೋಗುವೆನು."

ಹೆಣ್ಣು ಎನ್ನುತ್ತಲೂ ಅದಕ್ಕೆ ಕಿವಿ ನೆಟ್ಟಗಾಯಿತು. " ಹಾಗಾದರೆ ನಡೆ. ಹೋಗೋಣ" ಎಂದು ಅದರ ಹಿಂದಯೇ ಹೊರಟೂಬಿಟ್ಟಿತು. ಅಷ್ಟಿಲ್ಲದೆ ಹೇಳಿದರೆ?

ಹೆಣ್ಣನು ಬಿಟ್ಟರೆ ಸುಧೆ[1] ಯಿಲ್ಲ; ವಿಷವಿಲ್ಲ,
ಹೆಣ್ಣೊಲಿದರೆ ಅದೆ ಸುಧೆ ಮುನಿದರೆ ವಿಷವೈ ||
ಮುಟ್ಟದೆ, ನೋಡದೆ, ಕೇಳಿದ ಮಾತ್ರದೊಳೇ ||
ಆಸೆಯು ಜನಿಪುದು ಅಚ್ಚರಿಯಿನ್ನೆಂಟೆ? || ೧೭ ||

ಕಾಮನು ಎತ್ತಿದ ಗೆಲುವಿನ ಬಾವುಟ |
ಕಾಮಿನಿಯೆಂಬುದ ನೋಡಾ | ಅದು |
ಸುಖಸುಖವೆಲ್ಲವ ಸಾಧಿಸಿ ಕೊಡುವುದು |
ಇದು ಬೇಡೆಂಬುವ ನಿಜದಿಂ ಮೂಢಾ |

[1] ಅಮೃತ.

ನೋಡವನಂ, ತಲೆಬೋಳನು, ನಗ್ನನು [2] |
ಕೆಂಬಟ್ಟೆಯ ಜಟಿಲನು [3] ಕಾಪಾಲಕನು.[4] || ೧೮ ||

ನರಿಯು ಕತ್ತೆಯನ್ನು ಆ ಮಾತು ಈ ಮಾತು ಆಡುತ್ತ ಸಿಂಹನ ಬಳಿಗೆ ಕರೆದು ತಂದಿತು. ಮೇಲಕ್ಕೆ ಏಳಲಾರದೆ ಬಿದ್ದಿದ್ದ ಸಿಂಹವು ಏಳುವುದರೊಳಗಾಗಿ, ಅದರ ಗರ್ಜನೆಗೇ ಹೆದರಿ ಕತ್ತೆಯು ಓಡಿಹೋಯಿತು. ಅದನ್ನು ಕಂಡು ನರಿಯು "ಆಹಾ ಏನು ಹೇಳಲೋ? ಹತ್ತಿರಕ್ಕೆ ಬಂದ ಒಂದು ಕತ್ತೆಯನ್ನು ಹೊಡೆಯಲಾರದೆ ಬಿಟ್ಟುಬಿಟ್ಟೆ. ಇನ್ನು ನೀನು ನಿಜವಾಗಿಯೂ ಆನೆಯ ಮೇಲೆ ಬೀಳುವುದುಂಟೆ?" ಎಂದು ಕೋಪದಿಂದ ಹೀನಾಯವಾಗಿ ನುಡಿಯಿತು.

ಸಿಂಹವು ಪೆಚ್ಚು ಪೆಚ್ಚಾಗಿ ನಗುತ್ತ "ನಾನು ಸಿದ್ಧವಾಗಿರಲಿಲ್ಲ ನಾನು ರೇಗಿ ಮೇಲೆ ಬಿದ್ದರೆ ಆನೆಯು ಕೂಡ ಏಟು ತಡೆಯಬಲ್ಲುದೆ? ಏನೋ ಆಗಿಹೋಯಿತು." ಎಂದಿತು. ನರಿಯು "ಇನ್ನು ಒಮ್ಮೆ ಆ ಕತ್ತೆಯನ್ನು ಇಲ್ಲಿಗೆ ಕರೆದು ತರುವೆನು. ಈಗಲೇ ಸಿದ್ಧವಾಗಿರು." ಎಂದು ಹೇಳಿ ಸುತ್ತೆ ಕತ್ತೆಯನ್ನು ಹುಡುಕಿಕೊಂಡು ಹೋಯಿತು.

ಕತ್ತೆಯೂ ಬಹಳ ದೂರ ಹೋಗಿರಲಿಲ್ಲ. ಅಲ್ಲಿಯೇ ಹತ್ತಿರದಲ್ಲಿಯೇ ಇತ್ತು. ನರಿಯನ್ನು ಕಂಡು "ಅಯ್ಯಾ, ಒಳ್ಳೆಯ ಕೆಲಸ ಮಾಡಿದೆ. ಅಲ್ಲಿದ್ದ ಆ ಮೃಗವು ಯಾವುದು? ಹಾಗೆ ಅಬ್ಬರಿಸುತ್ತಾ ಪಂಜ* ಗಳಿಂದ ಹೊಡೆಯುವುದಕ್ಕೆ ಬಂದಿತ್ತಲ್ಲಾ? ಏನೋ ಅದೃಷ್ಟ ಬದುಕಿ ಬಂದೆ" ಎಂದಿತು.

ಅದನ್ನು ಕೇಳಿ ನರಿಯು ಬಿದ್ದು ಬಿದ್ದು ನಕ್ಕಿತು: "ಅಯ್ಯೋ, ಮಾವ, ಏನು ಹೇಳಲಿ! ಆ ಹೆಣ್ಣುಕತ್ತೆ ನಿನ್ನನ್ನು ಕಂಡು ಆಲಿಂಗಿಸ

---

[2] ಬಟ್ಟೆಯಿಲ್ಲದವನು. [3] ಜಟೆಗಳನ್ನು ಬೆಳಸಿದವನು. [4] ಓಡು ಹಿಡಿದುಕೊಂಡು ತಿರುಪಕ್ಕೆ ಬರುವವನು.

* ಐದು ಉಗುರು ಇರುವ ಕೈ.

ಬೇಕೆಂದು ಸಂಭ್ರಮದಿಂದ ಬಂದರೆ ನೀನದನ್ನು ಕಂಡು ಹೆದರಿ ಓಡಿಬಂದೆ. ಈಗತಾನೆ ಏನು? ಅದು ನೀನು ಬಂದು ಮದುವೆ ಯಾದರೆ ಸರಿ. ಇಲ್ಲದಿದ್ದರೆ ಪ್ರಾಣ ಬಿಡುವೆನೆಂದು ಕುಳಿತಿದೆ. ನೀನು ಬರದಿದ್ದರೆ, ಪಾಪ, ಆ ಪ್ರಾಣಿಯು ನಿಜವಾಗಿ ನೀರಿನಲ್ಲಿಯೋ, ಬೆಂಕಿಯಲ್ಲಿಯೋ, ಬಿದ್ದು ಪ್ರಾಣಬಿಡುವುದು. ನಿನಗೆ ಸ್ತ್ರೀ ಹತ್ಯೆ ತಪ್ಪದೆ ಬರುವುದು. ಇಷ್ಟರ ಮೇಲೆ ನಿನ್ನಿಷ್ಟ" ಎಂದಿತು.

"ಹಾಗಾದರೆ ಏನು ಮಾಡಬೇಕು ಎನ್ನುತ್ತೀಯೆ?"

"ಮಾಡುವುದೇನು? ಹೋಗಿ ಮದುವೆ ಮಾಡಿಕೊಂಡು ಸುಖ ವಾಗಿರುವುದು. ಅಥವಾ ಅದು ಸತ್ತರೆ ಸಾಯಲಿ ಎಂದಿದ್ದು ಸ್ತ್ರೀ ಹತ್ಯೆ ಕಟ್ಟಿಕೊಳ್ಳುವುದು."

ಕತ್ತೆಯು ಒಂದು ಗಳಿಗೆ ಯೋಚನೆಮಾಡಿ, ಮತ್ತೆ ನರಿಯ ಜೊತೆಯಲ್ಲಿ ಹೊರಟಿತು. ದೈವ ಗತಿಯನ್ನು ಯಾರು ಮೀರುವರು? ಕೇಳಿಲ್ಲವೆ?

ನೀಚಕರ್ಮ ಮಾಡಲಾರು ಸಿದ್ಧರು?
ತಿಳಿದರೇನು? ದೈವ ಮೋಸ ಮಾಳ್ಪುದು ||

ಕತ್ತೆಯು ಹೋಗುವ ವೇಳೆಗೆ ಸಿದ್ಧವಾಗಿದ್ದ ಸಿಂಹವು ಅದನ್ನು ಒಂದೇ ಏಟಿಗೆ ಹೊಡೆದು ಹಾಕಿತು. "ಇದನ್ನು ಕಾಯ್ದು ಕೊಂಡಿರು. ನಾನು ನದಿಗೆ ಹೋಗಿ ಸ್ನಾನ ಮಾಡಿ ದೇವರ ಪೂಜೆ ತರ್ಪಣ* ಗಳನ್ನು ಮಾಡಿಕೊಂಡು ಬಂದು ತಿನ್ನುವೆನು. ನಾ

---

* ವಂಶದ ಹಿರಿಯರಿಗೆ, ಪಿತೃಗಳು ಅವರ ಹೆಸರಿನಲ್ಲಿ ಎಳ್ಳು ನೀರೂ ಬಿಡುವುದು ತರ್ಪಣ. ಇದನ್ನು ದೇವರಪೂಜೆಯಂತೆ ನಿತ್ಯವೂ ಮಾಡಬೇಕು. ಮನುಷ್ಯನು ಹುಟ್ಟುವಾಗ ದೇವತೆಗಳು, ಋಷಿಗಳು, ಪಿತೃಗಳು ಸಹಾಯಮಾಡುವರು. ಆದರಿಂದ ಅವರ ಆ ಸಾಲವನ್ನು ಪ್ರತಿಯೊಬ್ಬನೂ ತೀರಿಸಬೇಕು. ಜಪ ಹೋಮ ಪೂಜೆಗಳಿಂದ ದೇವತೆಗಳಸಾಲವು ತೀರುವುದು.

ತಿಂದ ಮೇಲೆ ನೀನೂ ತಿನ್ನುವೆಯಂತೆ!" ಎಂದು ಅದಕ್ಕೆ ನರಿಯನ್ನು ಕಾವಲಿಟ್ಟು ತಾನು ಹೋಯಿತು.

ಇತ್ತ ನರಿಯು ಚಪಲದಿಂದ ಆ ಕತ್ತೆಯ ಕಿವಿಗಳನ್ನೂ ಎದೆಯನ್ನೂ ತಿಂದು ಬಿಟ್ಟಿತು. ಸಿಂಹವು ಬಂದು "ಇದೇನು ಹೀಗೆ ಮಾಡಿದೆ? ನಾನು ನಿನ್ನ ಎಂಜಲನ್ನು ತಿನ್ನಬೇಕೋ?" ಎಂದು ಅಬ್ಬರಿಸಲು, ನರಿಯು, "ಒಡೆಯ, ಹಾಗಲ್ಲ. ಈ ಕತ್ತೆಗೆ ಮೊದಲೇ ಕಿವಿಯೂ ಎದೆಯೂ ಇರಲಿಲ್ಲ. ಹಾಗೆ ಇದ್ದಿದ್ದರೆ ನಿನ್ನ ಅರ್ಭಟವನ್ನು ಕೇಳಿಯೂ ನಿನಗೆ ಹೆದರಿಯೂ ಮತ್ತೆ ನನ್ನ ಮಾತು ಕೇಳಿ ಇಲ್ಲಿಗೆ ಬರುತ್ತಿತ್ತೆ?" ಎಂದು ಕೇಳಿತು. ಸಿಂಹವೂ ಸರಿಸರಿಯೆಂದು ಅದನ್ನು ತಾನಷ್ಟು ತಿಂದು ನರಿಗೂ ಅಷ್ಟು ಕೊಟ್ಟಿತು.

ಅದರಿಂದ "ಮತ್ತೆ, ಸೋತು ಮಾತಿಗೆ ಬಂದು ಸತ್ತಿತು" ಎಂದು ಹೇಳಿದೆನು. ನೀನು ಮೂರ್ಖ, ಮೋಸಗಾರ, ಅಷ್ಟೇ ಅಲ್ಲ, ನೀನು ಯುಧಿಷ್ಠಿರನಂತೆ ಜಂಭಕ್ಕೆ ಸತ್ಯ ನುಡಿದು ಕೆಟ್ಟೆ. ಕೇಳಿಲ್ಲವೆ?

ಲಾಭವ ಮರೆತು, ಜಂಭದಿ ಬೆರೆತು | ಸತ್ಯವನುಡಿದರೆ ಫಲವೇನಾಯ್ತು ||
ಆ, ಯುಧಿಷ್ಠಿರನಿಗೆ ಆದಂತೆ | ಇದ್ದಾಪದವಿಯು ತಪ್ಪೀತು || ೧೯ ||

ಮೊಸಳೆಯು ಕೇಳಿತು: "ಅದು ಹೇಗೆ?" ಕಪಿಯು ಹೇಳಿತು :—

---

ಶಾಸ್ತ್ರಗಳನ್ನು ಓದಿ ಇತರರಿಗೆ ಹೇಳುವುದರಿಂದ ಋಷಿಗಳ ಸಾಲವು ತೀರುವುದು. ಧರ್ಮ ಪುತ್ರನನ್ನು ಪಡೆದರೆ ಪಿತೃಗಳ ಸಾಲವು ತೀರುವುದು.



# ಯುಧಿಷ್ಠಿರನ ಕಥೆ

ಒಂದಾನೊಂದು ಊರಿನಲ್ಲಿ ಒಬ್ಬ ಕುಂಬಾರನಿದ್ದನು. ಅವನ ಹೆಸರು ಯುಧಿಷ್ಠಿರ. ಅವನು ಒಂದಾನೊಂದು ದಿನ ಬಹು ವೇಗವಾಗಿ ಓಡಿಬರುತ್ತಾ ಒಡೆದ ಮಡಕೆಯ ತುಂಡಿನ ಮೇಲೆ ಬಿದ್ದು ತಲೆಯನ್ನು ಒಡೆದುಕೊಂಡನು. ಮೈಯೆಲ್ಲಾ ರಕ್ತವಾಗಿ ಹೇಗೆ ಹೇಗೋ ಮನೆಗೆ ಬಂದು ಸೇರಿದನು. ಗಾಯಕ್ಕೆ ಏನೋ ಅಪಥ್ಯವಾಗಿ, ಅದು ಕೀವು ಕಟ್ಟಿಕೊಂಡು ವಾಸಿಯಾಗುವುದೇ ಅಸಾಧ್ಯವಾಗಿ, ಕೊನೆಗೆ ಹೇಗೆ ಹೇಗೋ ವಾಸಿಯಾಯಿತು.

ಒಂದು ಸಲ ಅವನಿದ್ದ ದೇಶದಲ್ಲಿ ಕ್ಷಾಮವು ಬರಲು, ಅವನು ದೇಶಾಂತರ ಹೋಗಿ ಒಬ್ಬ ರಾಜನ ಬಳಿ ಸೇವಕನಾದನು. ಆ ರಾಜನು ಅವನ ಹಣೆಯಲ್ಲಿರುವ ಭಾರಿಯ ಕಲೆಯನ್ನು ನೋಡಿ "ಇವನು ವೀರಪುರುಷನಿರಬೇಕು. ಇವನ ಹಣೆಯ ಮೇಲಿನ ಕಲೆಯು ಮುಖಾಮುಖಿ ಯುದ್ಧಮಾಡಿದಾಗ ಆದದ್ದು ಇರಬೇಕು." ಎಂದುಕೊಂಡು ಅವನಿಗೆ ಬೇಕಾದ ಮಾನ ಮರ್ಯಾದೆಗಳನ್ನು ಮಾಡಿ ರಾಜಪುತ್ರರ ಬಳಿ ಇಟ್ಟುಕೊಂಡಿದ್ದನು.

ಒಂದು ದಿನ ಅರಸನು ವೀರ ಸಂಭಾವನೆಯನ್ನು ಕೊಡಲು ಎಲ್ಲರನ್ನೂ ಕರೆಸಿದನು. ಆನೆ ಕುದುರೆ ಮೊದಲಾದುವುಗಳೂ ವೀರ ಪುರುಷರೂ ಬಂದು ನಿಂತಿದ್ದರು. ಆಗ ಅರಸನು ಕುಂಬಾರನನ್ನು ಕರೆದು, "ಎಲೈ ರಾಜಪುತ್ರ, ನಿನ್ನ ಹೆಸರೇನು? ನೀನು ಯಾವ ಜಾತಿಯವನು? ಯಾವ ಯುದ್ಧದಲ್ಲಿ ಏಟು ತಿಂದು ನಿನಗೆ ಈ ಹಣೆಯು ಹೀಗಾಯಿತು?" ಎಂದು ಕೇಳಿದನು. ಕುಂಬಾರನು "ದೇವ, ಇದು ಶಸ್ತ್ರದ ಗಾಯವಲ್ಲ. ಯುಧಿಷ್ಠಿರನೆಂಬ ಕುಂಬಾರನು ನಾನು. ನಮ್ಮ ಮನೆಯಲ್ಲಿ ಎಷ್ಟೋ ಓಡುಗಳು ಇದ್ದವು. ಒಂದು ದಿನ ನಾನು ಓಡಿಬರುತ್ತಾ ಒಂದು ಓಡಿನ ಮೇಲೆ

ಬಿದ್ದೆನು. ಅದು ತಗಲಿ ಇಷ್ಟು ಗಾಯವಾಯಿತು.'' ಎಂದು ಹೇಳಿದನು

ರಾಜನು ಅದನ್ನು ಕೇಳಿ ''ಮೋಸವಾಯಿತು,'' ಎಂದು ಕೊಂಡು ಮೊದಲು ಇವನನ್ನು ಹೊರಕ್ಕೆ ತಳ್ಳಿ ಎಂದನು. ಕುಬಾರನು, ''ಅರಸಾ, ತಡೆ, ತಡೆ, ಯುದ್ಧ ಬರಲಿ, ನನ್ನ ಕೈ ತೋರಿಸುವೆನು.'' ಎನ್ನಲು ಅರಸನು ಹೇಳಿದನು: ''ಆಹಾ, ಅಲ್ಲವೇ? ನೀನು ಸರ್ವ ಗುಣ ಸಂಪನ್ನನು. ಆದರೂ ನಮಗೆ ಬೇಡ, ಕೇಳಲಿಲ್ಲವೇ?''

ಶೂರನೆ ಅಹುದು, ಸುಂದರನಹುದು, ಪಂಡಿತನಹುದು ||
ಆದರು ಮಗನೆ, ನಿನ್ನವರಾನೆಯ ಕೊಂದವರಲ್ಲಾ || ೨೦ ||

ಕುಂಬಾರನು ''ಅದು ಹೇಗೆ?'' ಎನ್ನಲು ಅರಸನು ಹೇಳಿದನು :—



## ನರಿಯ ಮರಿಯ ಕಥೆ

ಒಂದಾನೊಂದು ಕಾಡಿನಲ್ಲಿ ಸಿಂಹ ದಂಪತಿಗಳು ಇದ್ದವು. ಸಿಂಹಿಯು ಒಂದು ಸಲ ಎರಡು ಮರಿಗಳನ್ನು ಈದಿತು. ಸಿಂಹವು ದಿನವೂ ಹೋಗಿ ಬೇಟೆ ಯಾಡಿ ಆ ತಾಯಿ ಮಕ್ಕಳಿಗೆ ಮಾಂಸವನ್ನು ತಂದುಕೊಡು ತ್ತಿತ್ತು. ಒಂದು ದಿನ ಬೇಟೆ



ಯಿಂದ ಬರುವಾಗ ಒಂದು ನರಿಯ ಎಳೆಯ ಮರಿಯು ಸಿಕ್ಕಲು, ಸಿಂಹವು ಅದನ್ನು ತಂದು ಹೆಂಡತಿಗೆ ಕೊಟ್ಟಿತು. ಸಿಂಹಿಯು

ಅದನ್ನು ಕೊಲ್ಲದೆ, ಅದಕ್ಕೂ ಹಾಲು ಕೊಟ್ಟು ಸಾಕಿತು. ಆ ಮರಿಗಳೊಡನೆ ಅದೂ ಬೆಳೆಯಿತು.

ಅವು ಒಂದು ದಿನ ಅರಣ್ಯದಲ್ಲಿ ಅಲೆಯುತ್ತಿರುವಾಗ ಅವುಗಳ ಎದುರಿಗೆ ಒಂದು ಆನೆಯು ಬಂತು. ಸಿಂಹದ ಮರಿಗಳು ಅದನ್ನು ಕಂಡು ರೇಗಿ ಅದರ ಮೇಲೆ ಬೀಳಲು ಹೋದುವು. ನರಿಯ ಮರಿಯು "ಬೇಡ ಬೇಡ" ಎಂದು ತಡೆಯಿತು; ಅವು ನಿಲ್ಲದಿರಲು ತಾನು ಮನೆಯ ಕಡೆಗೆ ಓಡಿತು. ಇದು ಓಡುತ್ತಲೂ ಅವು ಏನೋ ಎಂತೋ ಎಂದು ಅದರ ಹಿಂದೆಯೇ ಬಂದುಬಿಟ್ಟುವು. ಕೇಳಿಲ್ಲವೆ?

ಉತ್ಸಾಹಿ ಧೀರನಿಂದುತ್ಸಾಹ ಸೇನೆಗೆಲ್ಲ ||
ಸೋತೊಬ್ಬನೋಡಲ್ಕೆ ಸೋತಂತೆ ಸೇನೆಯೆಲ್ಲ || ೨೧ ||

ಮನೆಗೆ ಬಂದಮೇಲೆ ಸಿಂಹದ ಮರಿಗಳೆರಡೂ ತಾಯಿ ಬಳಿಯಲ್ಲಿ "ಅಮ್ಮಾ, ಅಣ್ಣ ಈ ಹೊತ್ತು ಹೆದರಿ ಓಡಿ ಬಂದುಬಿಟ್ಟ" ಎಂದು ಹಾಸ್ಯಮಾಡಿ ನಗುತ್ತ ನರಿಯ ಮರಿಯು ಮಾಡಿದುದನ್ನೆಲ್ಲಾ ಹೇಳಿದುವು. ಅದನ್ನು ಕೇಳಿ ನರಿಯ ಮರಿಗೆ ಕೋಪ ಬಂತು. ಅವರನ್ನು ಗದರಿಸಿಕೊಂಡು ಬಯ್ಯಿತು.

ಸಿಂಹಿಯು ನರಿಯ ಮರಿಯನ್ನು ಬೇರೆಯಾಗಿ ಕರೆದು "ಮಗು, ನೀನು ಹೀಗೆಲ್ಲ ಹಾರಾಡಬಾರದು. ನಿನ್ನ ತಮ್ಮಂದಿರು ಅವರು" ಎನ್ನಲು, ಅದು ಇನ್ನೂ ರೇಗಿ ಹಾರಾಡಿತು. "ನಾನೇನು ಇವರಿಗಿಂತ ಕಡಿಮೆಯೋ? ನನಗೆ ಶೌರ್ಯವಿಲ್ಲವೋ? ರೂಪವಿಲ್ಲವೋ? ವಿದ್ಯೆಯಿಲ್ಲವೋ? ನನ್ನನ್ನು ಇವರು ಏಕೆ ಹಾಸ್ಯ ಮಾಡುವುದು?" ಎಂದು ಕೂಗಿತು. ಆಗ ಸಿಂಹಿಯು ನಗುತ್ತ ಹೇಳಿತು:—"ನೀನು ಎಲ್ಲವೂ ಅಹುದು. ಅದರೂ ನಿನ್ನವರು ಆನೆಯನ್ನು ಕೊಂದವರಲ್ಲ. ನೀನು ನರಿಯ ಮಗನು. ನಾನು

ನಿನ್ನನ್ನು ಕಾಪಾಡಿದೆ ಅಷ್ಟೆ? ನನ್ನ ಮರಿಗಳಿಗೆ ನೀನು ನರಿಯೆಂಬುದು ಇನ್ನೂ ತಿಳಿಯದು. ಈಗಲೇ ಹೊರಟು ಹೋಗಿ ನಿನ್ನವರ ಜೊತೆ ಸೇರಿಕೊ. ಇಲ್ಲದಿದ್ದರೆ ಇವರ ಏಟು ತಿಂದು ಸತ್ತೀಯೆ'' ಎಂದು ಹೇಳಿ ಅದನ್ನು ಅಲ್ಲಿಂದ ಕಳುಹಿಸಿ ಕೊಟ್ಟಿತು.



ಅದರಂತೆಯೇ ನೀನೂ ಈ ರಾಜಪುತ್ರರು ನೀನು ಕುಂಬಾರನೆಂದು ತಿಳಿಯುವುದಕ್ಕಿಂತ ಮುಂಚೆಯೇ ಓಡಿಬಿಡು. ಇಲ್ಲವಾದರೆ ಇವರ ಕೈಗೆ ಸಿಕ್ಕಿ ಬದುಕುವುದೇ ಕಷ್ಟವಾದೀತು. '' ಎಂದು ಹೇಳಲು ಅವನೂ ಹೋಗಿ ಬದುಕಿದನು.''

'' ಎಲೆ ಮೊಸಳೆ, ನೀನು ನಿಜವಾಗಿ ಮೂರ್ಖನು. ಹೆಂಗಸಿನ ಮಾತು ಕೇಳಿ ಕೆಟ್ಟೆ. ಕಥೆಯನ್ನು ಕೇಳಿಲ್ಲವೇ ?

ಹೆಣ್ಣು ಮಾಡೆನೆ ಗಂಡು ಮಾಡನದೇನ ?
ಕುದುರೆಯಿಲ್ಲದ ಅರಸು ಕೆನೆಯುವ ‖ ಪರ್ವ
ಕಾಲವೆನ್ನದೆ ಮಂತ್ರಿ ಬೋಳಿಸ ತಲೆಯನು ‖

ಮೊಸಳೆಯು ಅದು ಹೇಗೆ ಎನ್ನಲು ಕಪಿಯು ಹೇಳಿತು :—

## ಅರಸು ಮಂತ್ರಿಗಳ ಕಥೆ

ನಂದನೆಂಬ ಒಬ್ಬಾನೊಬ್ಬ ರಾಜನು ಇದ್ದನು. ಸಮುದ್ರಗಳವರೆಗಿನ ಭೂಮಿಯೆಲ್ಲವೂ ಆತನದು. ಆತನಿಗೆ ವರರುಚಿಯೆಂಬ ಒಬ್ಬ ಮಂತ್ರಿಯಿದ್ದನು. ಆತನು ಸರ್ವಶಾಸ್ತ್ರಗಳನ್ನೂ ಬಲ್ಲವನು.

ಆ ಮಂತ್ರಿಯು ಒಂದು ದಿನ ಹೆಂಡತಿಯೊಡನೆ ಸರಸ ಮಾಡುತ್ತಾ ಇರುವಾಗ ಅವಳಿಗೆ ಕೋಪ ಬಂತು. ಆತನು ಏನು ಮಾಡಿದರೂ ಅವಳು ಕೋಪವನ್ನು ಬಿಡಲಿಲ್ಲ. ಆಗ ಆತನು "ಏನು ಮಾಡಿದರೆ ನಿನ್ನ ಕೋಪವು ತೀರುವುದು? ಅದನ್ನಾದರೂ ಹೇಳು." ಎಂದು ಕೇಳಿದಳು. ಅವಳು "ನೀನು ತಲೆಯನ್ನು ಇವೊತ್ತೇ ಬೋಳಿಸಿಕೊಂಡು ನನ್ನ ಕಾಲಿಗೆ ಬೀಳಬೇಕು" ಎಂದಳು. ಆ ದಿನ ಅಮಾವಾಸ್ಯೆ. ಅಮಾವಾಸ್ಯೆ, ಹುಣಿಮೆ, ಸಂಕ್ರಮಣ, ಇವು ಪರ್ವಗಳು. ತಿಳಿದವರು ಯಾರೂ ಆ ದಿನಗಳಲ್ಲಿ ತಲೆಯನ್ನು ಬೋಳಿಸಿಕೊಳ್ಳುವುದಿಲ್ಲ. ಆದರೂ ವರರುಚಿಯು ಹೆಂಡತಿಗೆ ಸಂತೋಷವಾಗಲೆಂದು ತಲೆಯನ್ನು ಬೋಳಿಸಿಕೊಂಡು ಬಂದು ಅವಳ ಕಾಲಿಗೆ ಬಿದ್ದನು. ಅವಳಿಗೆ ಸಂತೋಷವಾಯಿತು: ಪ್ರಸನ್ನಳಾದಳು.

ಅತ್ತ ಅರಸನ ಹೆಂಡತಿಯೂ ಹೀಗೆಯೇ ಯಾವುದೋ ಕಾರಣಕ್ಕಾಗಿ ಕೋಪ ಮಾಡಿಕೊಂಡಳು. ಅರಸನೂ ಹೆಂಡತಿಯನ್ನು "ಏನು ಮಾಡಿದರೆ ಪ್ರಸನ್ನಳಾಗುವೆಯೋ ಹೇಳು" ಎಂದು ಕೇಳಿದನು. ಅವಳು "ನೀನು ಕುದುರೆಯಂತೆ ಬಾಯಿಗೆ ಕಡಿವಾಣ ಹಾಕಿಸಿಕೊಂಡು, ನನ್ನನ್ನು ಬೆನ್ನಿನ ಮೇಲೆ ಕುಳ್ಳಿರಿಸಿಕೊಂಡು ಕುದುರೆಯಂತೆ ಕೆನೆಯುತ್ತ ಓಡಬೇಕು." ಎಂದಳು. ಅರಸನೂ ಹಾಗೆಯೇ ಮಾಡಿದನು.

ಮರುದಿನ ದೊರೆಯನ್ನು ಕಾಣುವುದಕ್ಕೆ ಮಂತ್ರಿಯು ಬಂದನು. ಅರಸನು ಮಂತ್ರಿಯು ತಲೆ ಬೋಳಿಸಿಕೊಂಡಿರುವುದನ್ನು ನೋಡಿ ಆಶ್ಚರ್ಯಪಟ್ಟು, "ಏನು ಮಂತ್ರಿಗಳೇ, ಪರ್ವಕಾಲದಲ್ಲಿಯೂ ಮುಂಡನವೇ?" ಎಂದನು. ಆತನು ನಗು ನಗುತ್ತಾ "ಮಹಾಸ್ವಾಮಿ, ಅರಸನು ಕುದರೆಯಂತೆ ಕಡಿವಾಣ ಕಚ್ಚಿಕೊಂಡು

ಕೆನೆಯುತ್ತಾ ತಿರುಗಿದ ದಿವಸ ಪರ್ವವಾದರೂ ಮುಂಡನವಾಗ ಬಹುದು.'' ಎಂದನು. ಅರಸನು ಸುಮ್ಮನಾದನು.

ಅದರಿಂದ ಎಲೆ ದುಷ್ಟ ಮೊಸಳೆಯೇ, ನೀನೂ ನಂದವಂ ರುಚಿಗಳಂತೆ ಸ್ತ್ರೀ ವಶನಾದವನು. ಒಂದು ಉಪಾಯ ಮಾಡಿ ನನ್ನನ್ನು ವಧ ಮಾಡಲು ಕರೆದುಕೊಂಡೂ ಹೋದೆ: ಆದರೆ ನಿನ್ನ ವಾಗ್ದೋಷದಿಂದಲೇ ನಿನ್ನ ಕೆಲಸ ಕೆಟ್ಟಿತು. ಕೇಳಿಲ್ಲವೇ ?

ಶುಕ ಸಾರಿಕೆಗಳ ಬಂದಿಪುದೇಕೆ ? ನುಡಿವುದರಿಂ ಬಂಧನವವಕೆ ॥
ಬಕವನು ಬಂಧಿಸದಿರುವುದದೇಕೆ ? ನುಡಿಯದು ಬಂಧನವಿಲ್ಲದಕೆ ॥೨೨॥

ಮತ್ತು, ಹುಲಿಯ ಚರ್ಮವ ಹೊದ್ದುಕೊಂಡು |
ಭೀತಿತೋರುವ ರೂಪುಗೊಂಡು
ಮೇಯುತಿದ್ದಾ ಕತ್ತೆಗಂದು |
ಕೂಗಿಕೊಂಡುದೆ ಮೃತ್ಯುವಾಯ್ತು ॥ ೨೩ ॥

ಮೊಸಳೆಯು "ಅದು ಹೇಗೆ ?" ಎನ್ನಲು, ಕಪಿಯು ಹೇಳಿತು.



## ಹುಲಿಯಾಗಿದ್ದ ಕತ್ತೆಯ ಕಥೆ

ಒಂದಾನೊಂದು ಊರಿನಲ್ಲಿ ಶುದ್ಧಪಟನೆಂಬ ಅಗಸನು ಇದ್ದನು. ಅವನಿಗೆ ಒಂದು ಕತ್ತೆಯಿತ್ತು. ಅದು ಹೊಟ್ಟೆಗಿಲ್ಲದೆ ಬಹಳ ಇಳಿದುಹೋಗಿ ನಿಶ್ಶಕ್ತಿಯಾಗಿತ್ತು. ಆ ಅಗಸನು ಒಂದು ದಿನ ಎಲ್ಲಿಯೋ ಹೋಗಿ ಬರುತ್ತಿದ್ದಾಗ ಕಾಡಿನಲ್ಲಿ ಸತ್ತು ಬಿದ್ದಿದ್ದ ಹುಲಿ ಯೊಂದನ್ನು ಕಂಡನು. "ಆಹಾ, ಇದರ ಚರ್ಮವನ್ನು ತೆಗೆದು ಕೊಂಡು ಹೋಗಿ ನಮ್ಮ ಕತ್ತೆಗೆ ಹೊದಿಸಿ ಹೊಲಗಳಲ್ಲಿ ಬಿಟ್ಟ

ಬಿಟ್ಟರೆ, ಕಾವಲುಗಾರರು ಹುಲಿಯೆಂದುಕೊಳ್ಳುವರು: ಇದನ್ನು ಯಾರೂ ಹಿಡಿಸುವುದಿಲ್ಲ. ಹಾಗೆ ಆದರೆ, ಕತ್ತೆಯು ಚೆನ್ನಾಗಿ ಮೇದು ಬಲವಾಗುವುದು'' ಎಂದು ಯೋಚನೆ ಬಂತು. ಅವನು ಹಾಗೆಯೇ ಮಾಡಿದನು. ರಾತ್ರಿಯೆಲ್ಲವೂ ಕತ್ತೆಯು ಬೆಳೆದ ಹೊಲದಲ್ಲಿ ಮೇಯುವುದು. ಬೆಳಗಾಗುವುದಕ್ಕೆ ಮುಂಚೆಯೇ ಅಗಸನು ಬಂದು ಅದನ್ನು ಹೊಡೆದುಕೊಂಡು ಹೋಗುವನು.

ಹೀಗೆಯೇ ಕೆಲವು ಕಾಲ ನಡೆಯಲು ಕತ್ತೆಯು ಚೆನ್ನಾಯಿತು. ಅದನ್ನು ಹಿಡಿಯುವುದೇ ಕಷ್ಟವಾಯಿತು. ಹೀಗಿರಲು ಒಂದು ದಿನ ಹೊಲದಲ್ಲಿ ಮೇಯುತ್ತಿದ್ದ ಕತ್ತೆಯು ದೂರದಲ್ಲಿ ಎಲ್ಲಿಯೋ ಇನ್ನೊಂದು ಕತ್ತೆಯು ಕೂಗಿದುದನ್ನು ಕೇಳಿತು. ಅದು ಹೆಣ್ಣು ಕತ್ತೆಯೆಂದುಕೊಂಡು ತಾನೂ ಕೂಗುವುದಕ್ಕೆ ಆರಂಭಿಸಿತು.

ಕೂಡಲೇ ಕಾವಲುಗಾರರು "ಎಲೆಲಾ, ಇದು ಹುಲಿಯಲ್ಲ. ಹುಲಿಯ ಚರ್ಮ ಹೊದ್ದ ಕತ್ತೆ'' ಎಂದು ತಿಳಿದುಕೊಂಡು ಬಂದು ಕಲ್ಲು ದೊಣ್ಣೆ ಮುಂತಾದವುಗಳಿಂದ ಹೊಡೆದು ಕೊಂದರು.

ಆದರಿಂದ ಹೇಳಿದೆನು "ಕತ್ತೆಗಂದು ಕೂಗಿಕೊಂಡುದೆ ಮೃತ್ಯುವಾಯ್ತು ಎಂದು'' ಎಂದು ಕಪಿಯು ಕಥೆಯನ್ನು ಮುಗಿಸುತ್ತಿದ್ದ ಹಾಗೆಯೇ ಒಂದು ಜಲಚರವು (ನೀರಿನ ಪ್ರಾಣಿ) ಬಂದು "ಎಲೆ ಮೊಸಳೆ, ನಿನ್ನ ಹೆಂಡತಿಯು ನೀನು ಬರಲಿಲ್ಲವೆಂದು ಉಪವಾಸಮಾಡಿ ಪ್ರಾಣಬಿಟ್ಟಳು'' ಎಂದು ಹೇಳಿತು. ಸಿಡಿಲಿನಂತಹ ಆ ಕೆಟ್ಟ ಸುದ್ದಿಯನ್ನು ಕೇಳಿ ಮೊಸಳೆಯು ಹೋ ಎಂದು ಅತ್ತಿತು. "ಅಯ್ಯೋ, ನನ್ನ ಅದೃಷ್ಟವೇ! ಹೀಗಾಗಬಹುದೇ? ಕೇಳಿಲ್ಲವೆ?

ಎಲ್ಲಿ ತಾಯಿಯಿಲ್ಲವೋ; ನುಡಿವ ಮುದ್ದು
ಮಡದಿ ಎಲ್ಲಿಯಿಲ್ಲವೋ, ಆ ಮನೆಯು
ಮನೆಯೇ ? ಅದರಲ್ಲಿದ್ದರೇನಿದ್ದರೇನು ? ॥
ಅಡವಿಗಾಮನೆಗುಂ ನೋಡಲಾಗಿ ಭೇದವೇನು ? ॥ ೨೪ ॥

ಅವಸ್ಥೆ ಆಗಿ ಹೋಯಿತು. ನನ್ನ ಅಪರಾಧವನ್ನು ಮನ್ನಿಸು. ನನ್ನ ಹೆಂಡಿತಿಯೂ ಹೋದಳು. ಆ ದುಃಖವನ್ನು ನಾನು ತಡೆಯು ಲಾರೆ. ನಾನು ಬೆಂಕಿಗೆ ಬೀಳುವೆನು." ಎಂದು ಬಹಳವಾಗಿ ಅತ್ತು ಕೊಂಡಿತು.

ಅದನ್ನು ಕೇಳಿ ಕಪಿಯು ನಕ್ಕುಬಿಟ್ಟಿತು. "ಎಲೆಲಾ, ಈಗ ತಿಳಿಯಿತು. ನೀನು ಕೇವಲ ಸ್ತ್ರೀವಶನು ಮಾತ್ರವಲ್ಲ: ಹೆಣ್ಣಿಗೆ ಸೋತವನೂ ಹೌದು. ಅದರಿಂದ ನೀನು ಅಪರಾಧಿಯಲ್ಲ ಎಂಬು ನಂಬಿಕೆಯಾಯಿತು. ಮೂಢ, ಇದು ಆನಂದ ಪಡುವ ಸಮಯ. ಅಳುವ ಸಮಯವಲ್ಲ. ಅಂತಹ ಹೆಂಡತಿಯು ಸತ್ತರೆ ಹಬ್ಬ ಮಾಡ ಬೇಕು." ಎಂದಿತು.

ಮೊಸಳೆಯು ಹೇಳಿತು. "ಮಿತ್ರ, ನೀನು ಹೇಳುವುದಿರಲಿ, ಈಗ ನೋಡು, ನನಗೆ ಎರಡು ನಷ್ಟವಾಯಿತು. ಮೊದಲನೆಯ ದಾಗಿ ಮನೆಯು ಹಾಳಾಗಿ ಹೋಯಿತು. ಎರಡನೆಯದಾಗಿ ನಿನ್ನಂತಹ ಸ್ನೇಹಿತನ ಸ್ನೇಹವು ಹೋಯಿತು. ಇದಿಷ್ಟೂ ನನ್ನ ಹಣೆಯ ಬರೆಹ! ಕೇಳಿಲ್ಲವೆ?

ನನ್ನ ಜಾಣಿಗೆರಡುಪಾಲು ನಿನ್ನ ಜಾಣು ||
ಗಂಡನಿಲ್ಲ ಮಿಂಡನಿಲ್ಲ ಆದೆ ಬೆತ್ತಲೆ || ೨೫ ||

ಕಪಿಯು "ಅದು ಹೇಗೆ?" ಎಂದು ಕೇಳಲು, ಮೊಸಳೆಯು ಹೇಳಿತು:—



# ಎರಡೂ ಇಲ್ಲವಾದ ಕಥೆ

ಒಂದು ಊರಿನಲ್ಲಿ ದಂಪತಿಗಳು ಇದ್ದರು. ಗಂಡನು ಮುದುಕ ನೆಂದು ಅವಳಿಗೆ ಅವನ ಮೇಲೆ ಮಮತೆಯಿರಲಿಲ್ಲ. ಯಾವಾಗಲೂ ಅದೇ ಚಿಂತೆಯಾಗಿ ಅವಳು ಮನೆಯಲ್ಲಿಯೇ ಇರುತ್ತಿರಲಿಲ್ಲ. ಹಾಗೆ ಸುತ್ತುತ್ತಿರುವ ಅವಳನ್ನು ನೋಡಿ ಒಬ್ಬ ತುಂಟನು, "ಎಲೆ ಸುಂದರಿ, ನನ್ನ ಹೆಂಡತಿಯು ಸತ್ತುಹೋದಳು. ನಿನ್ನನ್ನು ನೋಡಿ ನನಗೆ ಆಸೆಯಾಗುವುದು. ನೀನು ನನ್ನ ಹೆಂಡತಿಯಾಗು" ಎಂದು ಕೇಳಿಕೊಂಡನು. ಅವಳು "ಹಾಗೆ ನೀನು ನನ್ನನ್ನು ಮಾಡಿಕೊಳ್ಳು ವುದಾದರೆ, ನನ್ನ ಗಂಡನ ಮನೆಯಲ್ಲಿರುವ ಹಣವೆಲ್ಲಾ ತರುವೆನು. ಅವನು ಮುದುಕ. ಇವೊತ್ತೋ ನಾಳೆಯೋ ಸಾಯುವನು. ನಾವಿಬ್ಬರೂ ದೇಶಾಂತರ ಹೋಗೋಣ" ಎಂದಳು. ಅವನೂ "ಸರಿ. ಹಾಗೇ ಆಗಲಿ." ಎಂದನು. ಮರುದಿನ ಬೆಳಗಾಗುವುದ ರೊಳಗಾಗಿ ಅವಳು ಮನೆಯಲ್ಲಿದ್ದುದನ್ನೆಲ್ಲಾ ಗಂಟು ಕಟ್ಟಿಕೊಂಡು ಬಂದುಬಿಟ್ಟಳು. ಆ ತುಂಟನೂ ಅವಳನ್ನು ಕರೆದುಕೊಂಡು ಆ ಊರು ಬಿಟ್ಟು ಹೋದನು.

ದಾರಿಯಲ್ಲಿ ಒಂದು ನದಿಯು ಸಿಕ್ಕಿತು. ಅದನ್ನು ಕಂಡು ಆ ಧೂರ್ತನು "ಇವಳಿಂದ ನನಗೆ ಆಗಬೇಕಾದುದೇನು ? ಇವಳನ್ನು ಹುಡುಕಿಕೊಂಡು ಯಾರಾದರೂ ಬಂದರೆ ನನಗೆ ಕಷ್ಟವಾಗುವುದು. ಅದರಿಂದ ಇವಳ ಹಣವನ್ನು ಹಾರಿಸಿಕೊಂಡು ಓಡಬೇಕು." ಎಂದು ಗೊತ್ತುಮಾಡಿಕೊಂಡು "ನೋಡು, ಈ ನದಿಯನ್ನು ದಾಟುವುದು ಕಷ್ಟ. ಅದರಿಂದ ನಿನ್ನ ಬಳಿಯಿರುವುದನ್ನೆಲ್ಲ ಮೂಟೆ ಕಟ್ಟಿಕೊಡು. ಅದನ್ನು ತೆಗೆದುಕೊಂಡು ಹೋಗಿ ಆ ಕಡೆಯಲ್ಲಿ ಇಟ್ಟು ಬಂದು ನಿನ್ನನ್ನು ಕರೆದುಕೊಂಡು ಹೋಗುವೆನು." ಎಂದನು. ಅವಳು ಎಲ್ಲವನ್ನೂ ಕಟ್ಟಿದಳು. "ನೀನು ಉಟ್ಟಿರುವ ಸೀರೆಯನ್ನೂ ಕೊಡು

ಈ ತುಂಡನ್ನು ಉಟ್ಟುಕೊಂಡಿರು. ನದಿ ದಾಟುವಾಗ ನೆನೆದುಹೋದವು ಒಣಗುವವರೆಗೂ ಇಲ್ಲಿಯೇ ಕೂತಿರಬೇಕು." ಎನ್ನಲು, ಅವಳು ಹಾಗೂ ಮಾಡಿದಳು. ಒಂದು ತುಂಡು ಬಟ್ಟೆಯುಟ್ಟುಕೊಂಡು ನದಿಯ ತೀರದಲ್ಲಿ ಒಣಕುತ್ತ ಕುಳಿತುಕೊಂಡಳು. ಆ ತುಂಟನು ನದಿಯನ್ನು ದಾಟಿ ಹೇಳದೆ ಕೇಳದೆ ಎಲ್ಲಿಯೋ ಹೊರಟುಹೋದನು.

ಅವಳು ಹೀಗೆ ಒಣಕುತ್ತ, ಅಳುತ್ತ ಕುಳಿತಿರುವಾಗ ಒಂದು ನರಿಯು ಅತ್ತ ಬಂತು. ಅದರ ಬಾಯಲ್ಲಿ ಒಂದು ತುಂಡು ಮಾಂಸ ವಿತು. ಅದು ಬರುವ ವೇಳೆಗೆ ನೀರಿನಲ್ಲಿ ಎರಡು ಮೀನುಗಳು ಜಗಳ ವಾಡಿ, ಒಂದು ಮೀನು ನೀರಿನಿಂದ ಹಾರಿ ದಡದಲ್ಲಿ ಬಿತ್ತು. ಅದನ್ನು ಕಂಡು ನರಿಯು ತನ್ನ ಬಾಯಲ್ಲಿ ಇದ್ದ ಮಾಂಸದ ತುಂಡನ್ನು ಅಲ್ಲಿ ಹಾಕಿ ಆ ಮೀನು ಹಿಡಿದುಕೊಳ್ಳಲು ಹೋಯಿತು. ಆ ಮೀನು ಮತ್ತೆ ನೀರಿಗೆ ಪುಣಕ್ಕನೆ ನೆಗೆಯಿತು. ಇತ್ತ ನರಿಯು ಹಾಕಿದ್ದ ಮಾಂಸದ ತುಂಡನ್ನು ಹದ್ದು ಕಚ್ಚಿಕೊಂಡು ಹೋಯಿತು. ನರಿಯು ಅದೂ ಹೋಗಿ ಇದೂ ಹೋಗಲು ಪೆಚ್ಚಾಗಿ ನಿಂತುಕೊಂಡಿತು. ಅದನ್ನು ಕಂಡು ಆ ಹೆಂಗಸು ನಕ್ಕು "ಅಯ್ಯೋ ಪಾಪ, ಮೀನು ನೀರಿನ ಪಾಲಾಯಿತು : ಮಾಂಸ ಹದ್ದಿನ ಪಾಲಾಯಿತು. ನಿನ್ನ ಮೊಖ ಪೆಚ್ಚಾಯಿತು." ಎಂದು ಹಾಸ್ಯ ಮಾಡಿದಳು. ನರಿಗೆ ರೇಗಿ ಹೋಗಿ ಹೇಳಿತು: —

ನನ್ನ ಜಾಣಿಗೆರಡು ಪಾಲು ನಿನ್ನ ಜಾಣು ||
ಗಂಡನಿಲ್ಲ ಮಿಂಡನಿಲ್ಲ ಆದೆ ಬೆತ್ತಲೆ ||

ಎಂದು ಮೂದಲಿಸಿ ಮುಂದೆ ಹೋಯಿತು.

ಎಂದು ಕಪಿಯು ಕಥೆಯನ್ನು ಮುಗಿಸುತ್ತಿದ್ದ ಹಾಗೆಯೇ ಮತ್ತೊಂದು ಜಲಚರವು ಬಂದು "ಎಲೋ, ನಿನ್ನ ಮನೆಯನ್ನು ಇನ್ನೊಂದು ಮೊಸಳೆಯು ಹಿಡಿದುಕೊಂಡಿತು." ಎಂದು ಹೇಳಿತು. ಅದನ್ನು ಕೇಳಿ ಮೊಸಳೆಯು "ಇದೀಗ ಅದೃಷ್ಟ ಎನ್ನುವುದು. ಎದ

ಒಪಕಾಲು ಎಡಹುವುದು. ಅನ್ನವಿಲ್ಲದಿದ್ದಾಗ ಹಸಿವು ಹೆಚ್ಚುವುದು. ಆಪತ್ತುಗಳೂ ವೈರಗಳೂ ಹೆಚ್ಚುವುವು. ಇವೆಲ್ಲ ದುರದೃಷ್ಟ ಕಾಲ ದಲ್ಲಿ ಆಗುವ ಕೆಲಸಗಳು. ಏನು ಮಾಡಲಿ? ಈಗ ಅವನೊಡನೆ ಯುದ್ಧ ಮಾಡಲೇ? ಒಳ್ಳೆಯ ಮಾತಿನಿಂದ ಕಾರ್ಯವನ್ನು ಸಾಧಿ ಸಲೇ? ಏನಾದರೂ ಕೊಟ್ಟು ಅವನನ್ನು ಮನೆ ಬಿಡಿಸಲೆ?'' ಎಂದು ಬಹಳ ಯೋಚನೆ ಮಾಡಿ, ಏನು ಮಾಡಬೇಕೆಂದು ಕಪಿಯನ್ನೇ ಕೇಳಿತು.

ಅದು '' ನೀನು ಕೃತಘ್ನ, ನಿನಗೆ ನಾನು ಏನೂ ಹೇಳುವು ದಿಲ್ಲ.'' ಎನ್ನಲು ಮೊಸಳೆಯು '' ಅಯ್ಯಾ, ಬಲ್ಲವರು, ಏಳು ಹೆಜ್ಜೆ ಒಟ್ಟಿಗೆ ನಡೆದರೆ ಒಬ್ಬರಿಗೊಬ್ಬರು ಮಿತ್ರರಾಗುವರು ಎನ್ನುವರು. ಅದ ರಿಂದಲಾದರೂ ನೀನು ನನಗೆ ಹಿತವಾಗುವುದು ಯಾವುದು ಅದನ್ನು ಹೇಳು.

ಅಲ್ಲದೆ, ಉಪಕಾರಿ ಗುಪಕಾರ ಮಾಳ್ಪುದೇನದು ದೊಡ್ಡಿತು ||
ಅಪಕಾರಿ ಗುಪಕಾರಮಾಳ್ಪುದದು ನಿಜ ದೊಡ್ಡಿತು || ೨೬ ||

'' ಎಂದು ಕೇಳಿಕೊಂಡಿತು.'' ಅದಕ್ಕೆ ಕಪಿಯು ಹೇಳಿತು: ಹಾಗಾದರೆ ಕೇಳು. ಹೋಗಿ ಮೊದಲು ಅದರೊಡನೆ ಯದ್ಧ ಮಾಡು. ಕೇಳಿಲ್ಲವೆ?

ರಣದೆ ಸೋತರೆ ಸಗ್ಗ, ಮನೆಯ ಗೆಲ್ಲಲು ಕೀರ್ತಿ ||
ರಣಕೆ ಇಳಿದರೆ ಹೀಗೆ, ಹಿರಿಯ ಲಾಭಗಳೆರಡು || ೨೭ ||

ಮಹಾ ಚತುರಕನಂತೆ ಮಾಡಬೇಕು.

ಅಲ್ಲದೆ, ನಮಿಸಿ ಸಾಮದಿಂದುತ್ತಮನನೊಲಿಸಿಕೊ ||
ಶೂರನಂ ಭೇದದಿಂದೊಡೆದು ಜಯಿಸಿಕೊ ||
ನೀಚಗಿತ್ತಿನಿತು ದಾನದಿಂ ಬಿಡಿಸಿಕೋ ||
ಸಮನೊಡನೆ ಮಲೆತು ಹೋರಾಡಿ ಗೆದ್ದುಕೋ || ೨೮ ||

ಮೊಸಳೆಯು ಹೇಳಿತು: '' ಅದು ಹೇಗೆ? '' ಎಂದು: ಕಪಿಯು ಹೇಳಿತು.

## ಮಹಾ ಚತುರಕನ ಕಥೆ

ಒಂದಾನೊಂದು ಕಾಡಿನಲ್ಲಿ ಮಹಾಚತುರಕನೆಂಬ ನರಿಯು ಇತ್ತು. ಒಂದು ದಿನ ಅದಕ್ಕೆ ತಾನಾಗಿ ಸತ್ತ ಆನೆಯ ಹೆಣವೊಂದು ಸಿಕ್ಕಿತು. ಅದು ಆ ಹೆಣದ ಸುತ್ತಲೂ ತಿರುಗಿ ನೋಡಿತು. ಆನೆಯ ದಪ್ಪ ಚರ್ಮವನ್ನು ಕತ್ತರಿಸುವುದಕ್ಕೆ ಅದರ ಕೈಯಲ್ಲಾಗದು. ಆದರೂ ಅದನ್ನು ತಿನ್ನಬೇಕೆಂಬ ಆಸೆ ಬಿಡಲೊಲ್ಲದು.

ಹೀಗೆ ಅದು ಅಲ್ಲಿಯೇ ಒದ್ದಾಡುತ್ತಿರುವಾಗ ಸಿಂಹವೊಂದು ಅತ್ತಕಡೆ ಬಂತು. ಆ ಮೃಗರಾಜನನ್ನು ಕಂಡು ನೆಲದ ಮಲಗಿ ನಮಸ್ಕರಿಸಿ, ಎದ್ದು ಕೈ ಮುಗಿದು ವಿನಯದಿಂದ ಹೇಳಿತು: "ಒಡೆಯ, ತಮ್ಮ ಪಾದದ ಸೇವಕನು ನಾನು. ತಾವು ಬಂದೀರಿ ಎಂದು ಈ ಆನೆಯನ್ನು ರಕ್ಷಿಸಿಕೊಂಡಿದ್ದೆನು. ಇದನ್ನು ದೇವರು ಒಪ್ಪಿಸಿಕೊಳ್ಳಬೇಕು" ಎಂದು ಮತ್ತೆ ಕೈ ಮುಗಿಯಿತು. ಹಾಗೆ ವಿನಯದಿಂದ ಹೇಳಿದ ನರಿಯನ್ನು ನೋಡಿ "ಎಲಾ, ನಾನು ಇನ್ನೊಬ್ಬರು ಹೊಡೆದ ಜೇಟೆಯನ್ನು ಯಾವಾಗಲೂ ತಿನ್ನುವವನಲ್ಲ. ಕೇಳಿಲ್ಲವೇ?

ಸಿಂಹವು ಮಾಂಸವ ತಿನ್ನುವ ಜಂತು ॥
ಹಸಿದರು ಹುಲ್ಲನು ತಿನ್ನುವುದಿಲ್ಲ ॥
ಒಳ್ಳೆಯ ಕುಲದವಗಾಪದ ಬಂದರು ॥
ನೀತಿಯ ಮಾರ್ಗವ ಬಿಡುವುದೆ ಇಲ್ಲ ॥ ೨೯ ॥

ಅದರಿಂದ ಈ ಆನೆಯನ್ನು ನೀನೇ ಪ್ರಸಾದವಾಗಿ ತೆಗೆದುಕೋ" ಎಂದು ಹೇಳಿತು. ನರಿಯು "ಒಡೆಯನು ಸೇವಕರಲ್ಲಿ ಯಾವಾಗಲೂ ಹೀಗೆಯೇ! ದೊಡ್ಡವರು ಎಂದಿಗೂ ತಮ್ಮ ದೊಡ್ಡ ಗುಣಗಳನ್ನು ಬಿಡುವುದಿಲ್ಲ. ಶಂಖವನ್ನು ಬೆಂಕಿಗೆ ಹಾಕಿ ಸುಟ್ಟರೆ ತಾನೇ ಕಪ್ಪಾದೀತೇ" ಎಂದು ಹೊಗಳಿತು. ಸಿಂಹವು ಪ್ರಸನ್ನವಾಗಿ ಹೊರಟು ಹೋಯಿತು.

ಅದು ಅತ್ತ ಹೋದಮೇಲೆ ಹುಲಿಯು ಬಂತು. ಅದನ್ನು ಕಂಡು ನರಿಯು ಯೋಚಿಸಿತು: "ಭಾರಿಯ ಭೂತವೊಂದನ್ನು ನಮಸ್ಕಾರ ಮಾಡಿ ಕಳುಹಿಸಿಯಾಯಿತು. ಅದು ಹೋಯಿತು ಎನ್ನುವುದರೊಳಗಾಗಿ ಇನ್ನೊಂದು ಬಂತಲ್ಲಾ! ಇದನ್ನು ತಪ್ಪಿಸುವುದೆಂತು? ಇದು ಶೂರನು. ಇದರಲ್ಲಿ ಭೇದೋಪಾಯ ಬಿಟ್ಟರೆ ಇನ್ನು ಯಾವುದೂ ಸಿದ್ಧಿಸುವುದಿಲ್ಲ. ಎಂತಹ ಸರ್ವಗುಣಸಂಪನ್ನನಾದರೂ ಭೇದಕ್ಕೆ ಸಿಕ್ಕಿಹೋಗುವನು. ಗುಂಡು ಗುಂಡಗೆ ಕಲ್ಲಿನ ಹಾಗೆ ಗಟ್ಟಿಯಾಗಿರುವ ಮುತ್ತನ್ನು ಕೂಡಾ ಕೊರೆದು ಮಾಲೆ ಮಾಡುವುದಿಲ್ಲವೆ? ಇರಲಿ," ಎಂದುಕೊಂಡು ಗರ್ವದಿಂದ ತಲೆಯೆತ್ತಿಕೊಂಡು ನಿಂತು, "ಏನು ಮಾವ, ಬೇಕೆಂದು ಸಾವನ್ನು ಹುಡುಕಿಕೊಂಡು ಬಂದೆಯಾ? ಈ ಆನೆಯನ್ನು ಹೊಡೆದುರುಳಿಸಿ ಸಿಂಹವು ಮಿಂದು ಬರುವೆನೆಂದು ನದಿಗೆ ಹೋಗಿದೆ. ಹೋಗುವಾಗ ನನ್ನನ್ನು ಕರೆದು," ಹುಲಿಯೇನಾದರೂ ಬಂದರೆ, ನನಗೆ ಗುಟ್ಟಾಗಿ ಬಂದು ಹೇಳು. ಹಿಂದೆ ನಾನು ಹೊಡೆದ ಆನೆಯನ್ನು ಒಂದು ಹುಲಿ ತಿಂದು ಬಿಟ್ಟಿತು. ಅಂದಿನಿಂದ ನನಗೆ ಹುಲಿಗಳ ಮೇಲೆ ವೈರ ಬಂದಿದೆ. ಈ ವನದಲ್ಲಿರುವ ಹುಲಿಗಳನ್ನೆಲ್ಲ ಧ್ವಂಸ ಮಾಡಬೇಕು ಎಂದಿದ್ದೇನೆ. ಈ ಕಾಡಿನಲ್ಲಿ ಹುಲಿಗಳೇ ಇರಕೂಡದು ಎಂದು ಹೇಳಿ ಹೋಗಿದೆ:" ಎಂದಿತು. ಹುಲಿಗೆ ಹೆದರಿಕೆಯಾಗಿ, "ತಮ್ಮ, ನನ್ನನ್ನು ಉಳಿಸು, ನಾನು ಬಂದಿದ್ದೆನೆಂದೂ ಸಿಂಹಕ್ಕೆ ಹೇಳಬೇಡ." ಎಂದು ಕಾಲಿಗೆ ಬುದ್ಧಿ ಹೇಳಿತು.

ಅದು ಹೋದಮೇಲೆ ಒಂದು ಚಿರತೆ ಬಂತು. "ಪಟ್ಟೆಯ ದನು ಹೋದ ಚುಕ್ಕಿಯವನು ಬಂದ. ಇದಕ್ಕೂ ಹಲ್ಲು ಗಟ್ಟಿ. ಇದರಿಂದ ಈ ಆನೆಯ ಚರ್ಮ ಕತ್ತರಿಸಬೇಕು. ಇದಕ್ಕೊಂದು ಉಪಾಯ ಮಾಡುವೆನು." ಎಂದು ಅದರ ಹತ್ತಿರ ಹೋಗಿ ಹೇಳಿತು: "ಭಾವ, ನಿನ್ನನ್ನು ನೋಡಿ ಬಹಳ ದಿನವಾಯಿತು.

ಏಕೆ ಮುಖ ಒಣಗಿಸಿಕೊಂಡಿದ್ದೀಯೆ? ಹಸಿವಿದ್ದೀಯೇನು? ಹಾಗಾದರೆ ಬಾ, ನನ್ನ ಅತಿಥಿಯಾಗಿರು. ಈ ಆನೆಯನ್ನು ಸಿಂಹವು ಕೆಡ



ವಿದೆ. ನಾನೇ ಇದಕ್ಕೆ ಕಾವಲು. ಸಿಂಹವು ಬರುವುದರೊಳಗಾಗಿ ನೀನು ತೃಪ್ತಿಯಾಗಿ ತಿಂದು ಹೋಗು'' ಎಂದಿತು. ಅದು ''ಭಾವ, ಈ ಸಿಂಹದ ಊಟವು ನನಗೆ ಬೇಡ. ''ಬದುಕಿದ್ದರೆ ಭದ್ರ ಬರದೇ ಹೋದೀತೆ?'' ಕೇಳಿಲ್ಲವೆ?

ನುಂಗುವಷ್ಟು ಕಚ್ಚಿಕೋ | ಅರಗುವಷ್ಟು ತಿಂದುಕೋ |
ಬದುಕಬೇಕು ಎಂದರೆ | ಕೊನೆಗೆ ಅಹುದ ನೋಡಿಕೋ || ೩೦ ||

ಅದರಿಂದ, ನಾನು ಇನ್ನೆಲ್ಲಿಯಾದರೂ ಹೋಗುವೆನು.'' ಎಂದಿತು.

ನರಿಯು ನಕ್ಕು ಹೇಳಿತು: ''ಭಾವ, ನೀನೆಲ್ಲೋ ಹೇಡಿ, ಸುಖವಾಗಿ ಊಟಮಾಡು. ನಾನು ದೂರದಲ್ಲಿ ನಿಂತು ನೋಡಿಕೊಂಡಿರುತ್ತೇನೆ. ಸಿಂಹವು ಇನ್ನೂ ದೂರದಲ್ಲಿ ಬರುತ್ತಿರುವಾಗಲೇ ಹೇಳುತ್ತೇನೆ'' ಎಂದು ಅದನ್ನು ಒಪ್ಪಿಸಿತು, ಅದು ಆಗಲೆಂದು ಆನೆಯನ್ನು ತಿನ್ನಲು ಮೊದಲು ಮಾಡಿತು. ಅದು ಚರ್ಮವನ್ನು ಕತ್ತರಿಸಿದೆಯೆಂದು ನಂಬಿಕೆಯಾದಮೇಲೆ, ದೂರದಲ್ಲಿದ್ದ ನರಿಯು

ಸಿಳ್ಳುಹಾಕಿ, ಕಣ್ಣುಹಾರಿಸಿ "ಬಂತು, ಬಂತು." ಎಂದಿತು. ಅದನ್ನು ಕೇಳಿ ಚಿರತೆಯು ನೆಗೆದು ಹಾರಿ ಓಡಿತು.

ಆ ಮೇಲೆ ನರಿಯು ಬಂದು ಚಿರತೆಯು ಕೊರದಿದ್ದ ತೂತಿನಿಂದ ಮಾಂಸವನ್ನು ಎಳೆದು ತಿನ್ನುತ್ತಿದ್ದಾಗ ಇನ್ನೊಂದು ನರಿಯು ಬಂತು. ಅದನ್ನು ಕಂಡು, "ಸಮಶಕ್ತಿಯಿದು. ಇದನ್ನು ಪರಾಕ್ರಮದಿಂದಲೇ ಗೆಲ್ಲಬೇಕು." ಎಂದು ನಿಶ್ಚಯಿಸಿಕೊಂಡು ಅದರಮೇಲೆ ಯುದ್ಧಕ್ಕೆ ಹೋಯಿತು: ಅದರಮೇಲೆ ಬಿದ್ದು ಕಚ್ಚಿ ಗಾಯಮಾಡಿ ಓಡಿಸಿ ಬಂದು ಆನೆಯನ್ನು ತಿಂದುಕೊಂಡು ಸುಖವಾಗಿತ್ತು.




ನೀನೂ ಅದರಂತೆಯೇ ನಿನ್ನ ಜಾತಿಯವನಾದ ಹಗೆಯನ್ನು ಯುದ್ಧಮಾಡಿ ಸೋಲಿಸು. ಇಲ್ಲದಿದ್ದರೆ, ಅದೇ ನಿನ್ನನ್ನು ಹಾಳು ಮಾಡುವುದು. ಕೇಳಿಲ್ಲವೆ?

ಹಸುವಿನಿಂದ ಹಾಲು ಮೊಸರು | ಜಪವು ತಪವು ಪಾರ್ವನಲ್ಲಿ ||
ಹೆಣ್ಣಿನಲ್ಲಿ ಚಪಲತನವು | ಸ್ವಕುಲದಿಂದ ಭಯವು ತಪ್ಪದು ||೩೧||

ಮೊಸಳೆಯು "ಅದು ಹೇಗೆ? ಸ್ವಕುಲದಿಂದ ಭಯವೆನ್ನುವುದು ಹೇಗೆ?" ಎನ್ನಲು, ಕಪಿಯು ಹೇಳಿತು:—

# ಚಿತ್ರಾಂಗನ ಕಥೆ

ಒಂದಾನೊಂದು ಊರಿನಲ್ಲಿ ಚಿತ್ರಾಂಗನೆಂಬ ನಾಯಿಯಿತ್ತು. ಆ ಊರಿನಲ್ಲಿ ಕ್ಷಾಮವು ಬಂತು. ತಿನ್ನುವುದಕ್ಕೆ ಎಂಜಲೂ ಇಲ್ಲದೆ ನಾಯಿಗಳು ನಾಶವಾಗಿ ಹೋದುವು. ಅದರಿಂದ ಚಿತ್ರಾಂಗನು ಹೊಟ್ಟೆಯಪಾಡು ನೋಡಿಕೊಳ್ಳಲು ದೇಶಾಂತರಕ್ಕೆ ಹೋಯಿತು.



ಅಲ್ಲೊಂದು ಊರಿನಲ್ಲಿ ಒಬ್ಬಳು ದಿನವೂ ಅಡಿಗೆಯ ಮನೆಯ ಬಾಗಿಲನ್ನು ಮುಚ್ಚು ವುದನ್ನು ಮರೆತುಬಿಡುವಳು. ಈ ನಾಯಿಯು ಸಮಯ ಕಾದಿದ್ದು ಒಳನುಗ್ಗಿ ಬೇಕಾದ್ದನ್ನೆಲ್ಲ ತಿಂದುಬಿಡುವುದು. ಆದರೆ, ಈಚೆಗೆ ಬರುವ ವೇಳೆಗೆ ಸರಿಯಾಗಿ ಆ ಬೀದಿಯ ನಾಯಿಗಳು ಮೇಲೆ ಬಿದ್ದು ಕಚ್ಚಿ ಗೋಳುಗುಟ್ಟಿಸಿಬಿಡುವುವು.

ಹೀಗೆ ಕೆಲವುದಿನ ಕಷ್ಟದಿಂದ ಅಲ್ಲಿಯೇ ಕೆಲವು ದಿನವಿತ್ತು. ಕೊನೆಗೆ " ಇಲ್ಲಿದ್ದು ಈ ತಿಂಡಿ ತಿನ್ನುವುದೂ ಸಾಕು. ಈ ನಾಯಿಗಳಿಂದ ಕಚ್ಚಿಸಿಕೊಳ್ಳುವುದೂ ಸಾಕು. ನಮ್ಮೂರಲ್ಲಿ ತಿಂಡಿಯಿಲ್ಲದಿದ್ದರೂ ಕಚ್ಚುವವರು ಯಾರೂ ಇಲ್ಲ." ಎಂದು ಅಲ್ಲಿಂದ ಹಿಂತಿರುಗಿ ಬಂತು.

ಅದರಿಂದ ಹಾಗೆ ಹೇಳಿದೆ. ಹೋಗು. ನಿನ್ನ ಮನೆಯನ್ನು ಹಿಡಿದುಕೊಂಡಿರುವವನೊಡನೆ ಯುದ್ಧ ಮಾಡಿ ಹೊಡೆದೋಡಿಸಿ ಮನೆಯನ್ನು ಸಾಧಿಸು. " ಎಂದಿತು.

ಆ ಮೊಸಳೆಯೂ ಆ ಕಪಿಯು ಹೇಳಿದ ಬುದ್ಧಿಯ ಮಾತನ್ನು ಕೇಳಿ ಆ ಉಪದೇಶದಂತೆಯೇ ನಡೆಯಿತು. ಅದಕ್ಕೆ ಮನೆಯೂ ಸಿಕ್ಕಿತು. ಅದೂ ಬಹು ಕಾಲ ಅಲ್ಲಿ ಸುಖವಾಗಿತ್ತು. ಅದರಿಂದಲೇ ಹೇಳುವರು:

ಪೌರುಷಮಾಡದೆ ಪಡೆದಾಸಿರಿಯದು |
ಹಿರಿದಾದರು ಫಲವಿಲ್ಲ | ವನದೊಳು ||
ದೈವವು ಕೊಟ್ಟಾ ಹುಲ್ಲನು ಸೊಪ್ಪನು |
ತಿಂಬುದು ಮುದಿ ಗೂಳಿಯು ಕಾಣೆಯ || ೩೨ ||



ಇಂತಿದು ಹೊಸಗನ್ನಡ ಪಂಚತಂತ್ರದಲ್ಲಿ
"ಸಿಕ್ಕಿದ್ದು **ಹೋಯಿತು**" ಎಂಬ
ಮೊದಲನೆಯ ತಂತ್ರವು

# ಹೊಸಗನ್ನಡ ಪಂಚತಂತ್ರ

## ನೋಡದೆ ಮಾಡಿದರೆ

"ನೋಡದೆ ಮಾಡಿದರೆ" ಎಂಬ ಎರಡನೆಯ ತಂತ್ರದ ಮೊದಲನೆಯ ಶ್ಲೋಕವಿದು.

ಅರಿಯದೆ, ನೋಡದೆ, ತಿಳಿಯದೆ ಪರಿಕಿಸದೆ * |
ಮಾಡಲುಬಾರದು ಕಾರ್ಯವ ನಾಪಿತನಂತೆ ||೧||

"ನಾಪಿತನು ಅಂತಹುದನ್ನೇನು ಮಾಡಿದನು?" ಎಂದು ಅರಸು ಮಕ್ಕಳು ಕೇಳಲು, ವಿಷ್ಣುಶರ್ಮನು ಹೇಳಿದನು:—

## ಮಣಿಭದ್ರನ ಕಥೆ

ದಕ್ಷಿಣ ದೇಶದಲ್ಲಿ ಪಾಟಲೀಪುತ್ರ ಎಂಬ ಒಂದು ನಗರವುಂಟು. ಅಲ್ಲಿ ಮಣಿಭದ್ರನೆಂಬ ಶೆಟ್ಟಿಯಿದ್ದನು. ಆತನು ಧರ್ಮವನ್ನು ಬಿಟ್ಟವನಲ್ಲ: ಅರ್ಥವನ್ನು ಮರೆತವನಲ್ಲ: ಕಾಮವನ್ನು ಬೇಡೆಂದವನಲ್ಲ: ಮೋಕ್ಷವನ್ನು ತಿರಸ್ಕರಿಸಿದವನಲ್ಲ. ಹೀಗೆ ಅವನು ಸಜ್ಜನನಾಗಿದ್ದರೂ ಆತನ ಹಣೆಯ ಬರೆಹದಿಂದ ಕೆಟ್ಟ ಕಾಲವು ಬಂದು ಇದ್ದ ಹಣವೆಲ್ಲಾ ಕರಗಿ ಹೋಯಿತು. ಹಣವು ಹೋಗಲು ಅವನಿಗೆ ಎಲ್ಲೆಲ್ಲೂ ಅಪಮಾನದ ಮೇಲೆ ಅಪಮಾನವಾಗಿ ಅವನು ಬಹಳ ಸಂಕಟಪಡುವಂತಾಯಿತು. ಒಂದು ದಿನ ರಾತ್ರಿ ಮಲಗಿರುವಾಗ ಅವನಿಗೆ ಒಂದು ಯೋಚನೆ ಬಂತು. "ಅಯ್ಯೋ, ಈ ಬಡತನವು ಎಂಥದು! ಹೇಳಿಯೇ ಇದೆಯಷ್ಟೆ!

ಬುದ್ಧಿಯು ಜ್ಞಾನವು ಮಾನವು ದರ್ಪವು ||
ಶೀಲವು ಶೌಚವು ಒಳ್ಳೆಯ ಜನ್ಮವು ||
ವಿತ್ತವು ಇಲ್ಲದೆ ಸರ್ವವು ವ್ಯರ್ಥ ||೨||

---

* ಪರಿಕಿಸದೆ – ಪರೀಕ್ಷೆ ಮಾಡದೆ

ಉಪ್ಪು ಬೇಳೆಯು ಚಿಂತೆ ಹಿಡಿಯೆ ||
ಬುದ್ಧಿವಂತನ ಬುದ್ಧಿಯೆಲ್ಲವು ||
ಕರಗಿ ಹೋಹುದು ಶಿಶಿರ ಹಿಮದಂತೆ || ೩ ||

ಸಾಗರ ಹಗಲಿರುಳೆನ್ನದೆ ಮೊರೆಯುವುದು ||
ಸುಮ್ಮನೆ ಇಹುದೀ ಲೋಕವು ದೊಡ್ಡವನೆಂದು ||
ದುಡ್ಡಿನ ದೊಡ್ಡವ ನಾಚಿಕೆ ಬಿಟ್ಟರು ||
ಲೋಕವು ಬಿಡುವುದೆ ಅವನನ್ನು ? || ೪ ||

ಅದರಿಂದ, ಈ ಬಡತನದ ಬಾಳು ಬದುಕುವುದಕ್ಕಿಂತ, ಉಪವಾಸಮಾಡಿ ಪ್ರಾಣ ಬಿಡುವುದು ಒಳ್ಳೆಯದು. ಫಲವಿಲ್ಲದ ಈ ಬಂಜೆ ಬಾಳಿನಿಂದ ಆಗುವುದೇನು ? '' ಎಂದು ನಿಶ್ಚಯಮಾಡಿಕೊಂಡು ಮಲಗಿಕೊಂಡನು.

ಅವನಿಗೆ ಕೊಂಚ ಹೊತ್ತಿನಲ್ಲಿಯೇ ನಿದ್ದೆ ಬಂದು ಒಂದು ಕನಸು ಬಿತ್ತು. ಲೋಕದಲ್ಲಿರುವ ಐಶ್ವರ್ಯವೆಲ್ಲಾ ನಿಧಿಗಳು ಎಂಬ ಒಂಭತ್ತು ದೇವತೆಗಳ ವಶದಲ್ಲಿರುವುದು. ಅವರಲ್ಲಿ ಒಬ್ಬನಾದ ಪದ್ಮನು ಜೈನಸನ್ಯಾಸಿಯ ಹಾಗೆ ಆ ಕನಸಿನಲ್ಲಿ ಕಾಣಿಸಿಕೊಂಡು '' ಎಲೈ ಶೆಟ್ಟಿಯೇ, ನೀನು ಒಳ್ಳೆಯವನು. ಬೇಸರಪಟ್ಟು ಪ್ರಾಣ ಕಳೆದು ಕೊಳ್ಳಬೇಡ. ನಾನು ಪದ್ಮ ನಿಧಿಯು. ನಿನ್ನ ಹಿರಿಯರು ಮಾಡಿರುವ ಪುಣ್ಯದಿಂದ ನಾನು ನಿನಗೆ ದರ್ಶನಕೊಟ್ಟಿರುವೆನು. ನಾಳೆ ನಾನು ಈ ರೂಪದಿಂದಲೇ ನಿಮ್ಮ ಮನೆಗೆ ಬರುವೆನು. ಆಗ ನೀನು ನನ್ನನ್ನು ಒಂದು ದೊಣ್ಣೆಯಿಂದ ಹೊಡೆದರೆ ನಾನು ಚಿನ್ನವಾಗುವೆನು.'' ಎಂದು ಹೇಳಿದನು.

ಶೆಟ್ಟಿಯು ಬೆಳಗೆದ್ದು '' ಇದೇನು ಹೀಗೆ ಕನಸಾಯಿತು ? ಈ ಕನಸು ನಿಜವಾಗುವುದೋ ಇಲ್ಲವೋ ಬಲ್ಲವರಾರು ? ನಾನು ಕೇವಲ ಹಣ ಹಣ, ಎಂದೇ ಚಿಂತಿಸುತ್ತಾ ನಿದ್ದೆ ಹೋದೆನು. ಅದರಿಂದ ಹೀಗೆ ಆಗಿದ್ದರೂ ಆಗಿರಬಹುದು. ಅಲ್ಲದೆ, ಬೋಗ,

ದುಃಖ, ಶೋಕ, ಕಾಮ, ಗಳಿಂದ ಒದ್ದಾಡುವವರಿಗೆ ಬೀಳುವ ಕನಸು ಗಳು ಫಲವಾಗುವುದಿಲ್ಲ ಎನ್ನುವರು. ಆದರೂ ಇರಲಿ, ನೋಡೋಣ. ಏನಾಗುವುದೋ? '' ಎಂದು ಮಡಿಯುಟ್ಟು ಕಾದಿದ್ದನು.

ಇಷ್ಟರಲ್ಲಿ ಆ ಶೆಟ್ಟಿಯ ಮಡದಿಯು ತನ್ನ ಕಾಲಿಗೆ ಔಷಧ ವನ್ನು ಹಾಕಿಸಿಕೊಳ್ಳಲು ಒಬ್ಬ ನಾಪಿತನನ್ನು ಕರೆಯಿಸಿದ್ದಳು. ಅವನು ಔಷಧವನ್ನು ಮಾಡುತ್ತಿದ್ದಹಾಗೆಯೇ ಜೈನ ಸನ್ಯಾಸಿಯು ಎಲ್ಲಿಂದಲೋ ಬಂದೇ ಬಿಟ್ಟನು. ಶೆಟ್ಟಿಯು ಅವನನ್ನು ಕಂಡು ಸಂತೋಷದಿಂದ ಆತನನ್ನು ಒಳಕ್ಕೆ ಕರೆದುಕೊಂಡು ಹೋಗಿ ಕುಳ್ಳಿ ರಿಸಿ, ಒಂದು ದೊಣ್ಣೆಯಿಂದ ಆತನ ತಲೆಯ ಮೇಲೆ ಹೊಡೆದನು. ಕೂಡಲೇ ಆ ಸನ್ಯಾಸಿಯು ಕನಸಿನಲ್ಲಿ ಹೇಳಿದ್ದಂತೆ ಚಿನ್ನದ ರಾಶಿ ಯಾದನು. ಅದನ್ನೆಲ್ಲ ಶೆಟ್ಟಿಯು ಒಳಗೆ ಭದ್ರ ಮಾಡಿಟ್ಟು, ನಾಪಿತ ನನ್ನು ಕರೆದು ಅವನಿಗೂ ಅಷ್ಟು ಕೊಟ್ಟು, '' ಇದನ್ನು ಯಾರಿಗೂ ಹೇಳಬೇಡ '' ಎಂದು ಒಪ್ಪಿಸಿ ಕಳುಹಿಸಿಕೊಟ್ಟನು.

ದಾರಿಯಲ್ಲಿ ಹೋಗುತ್ತಾ ಆ ನಾಪಿತನು ಯೋಚಿಸಿದನು :- '' ಈ ಜೈನ ಸನ್ಯಾಸಿಗಳೆಲ್ಲರೂ ಹೀಗೆಯೇ ತಲೆಯ ಮೇಲೆ ಹೊಡೆದರೆ ಚಿನ್ನದ ರಾಶಿಗಳಾಗುವರು ಎಂದು ತೋರುತ್ತದೆ. ಅವರಿಂದ ನಾಳೆ ನಾನೂ ಬೇಕಾದಷ್ಟು ಜನರನ್ನು ಕರೆದು ಅವರನ್ನೆಲ್ಲ ದೊಣ್ಣೆಯಿಂದ ಹೊಡೆದು ಬೇಕಾದಹಾಗೆ ಚಿನ್ನವನ್ನು ಸಂಪಾದಿಸುವೆನು '' ಎಂದು ಕೊಂಡು ಅದೇ ಯೋಚನೆಯಲ್ಲಿಯೇ ಆ ದಿನವನ್ನೆಲ್ಲಾ ಕಳೆದನು.

ಮರುದಿನ ಬೆಳಗಾಗುತ್ತಿದ್ದ ಹಾಗೆಯೇ ಮಿಂದು ಮಡಿಯುಟ್ಟು, ಜೈನರ ದೇವಾಲಯಕ್ಕೆ ಹೋಗಿ, ಜಿನೇಂದ್ರನಿಗೆ ಮೂರು ಪ್ರದಕ್ಷಿಣೆ ಮಾಡಿ, ಮೊಳಕಾಲೂರಿ ನಮಸ್ಕಾರಹಾಕಿ, ಬಾಯನ್ನು ಸೆರಗಿನಿಂದ ಮುಚ್ಚಿಕೊಂಡು, ಗಟ್ಟಿಯಾಗಿ ಸ್ತೋತ್ರಗಳನ್ನು ಹೇಳಿದನು :-

ಜಯಂತಿ ತೇ ಜಿನಾ ಯೇಷಾಂ ಕೇವಲ ಜ್ಞಾನ ಶಾಲಿನಾಂ ॥
ಆಜನ್ಮನಃ ಸ್ಮರೋತ್ಪತ್ತೌ ಮಾನಸೇ಼ನೋಷರಾಯಿತಂ ॥

ಜಿನರು ಕೇವಲ ಜ್ಞಾನವುಳ್ಳವರು. ಹುಟ್ಟಿದಂದು ಮೊದಲು ಅವರು ಕಾಮನಿಗೆ ವಶವಾದವರಲ್ಲ ಅಂಥಹ ಜಿನರಿಗೆ ಜಯವಾಗಲಿ.

ಜಿನನ ಹೊಗಳುವ ನಾಲಿಗೆಯು ನಾಲಿಗೆಯು ||
ಜಿನನಲ್ಲಿ ನಿಂತಿರುವ ಚಿತ್ತವೇ ಚಿತ್ತ ||
ಜಿನನ ಪೂಜೆಯ ಮಾಳ್ಪ ಹಸ್ತಗಳೆ ಹಸ್ತಗಳು ||
ಜಿನನಲ್ಲದಿನ್ನೊಂದು ದೈವವುಂಟೆ || ೫ ||

ಹೀಗೆಲ್ಲ ಸ್ತೋತ್ರಗಳನ್ನು ಮಾಡಿ, ಆ ವಿಹಾರ[1] ದಲ್ಲಿದ್ದ ಕ್ಷಪಣಕರ[2]ಲ್ಲೆಲ್ಲಾ ಮುಖ್ಯನಾದವನನ್ನು ಕಂಡು "ನಮೋಸ್ತು, ವಂದೇ," ಎಂದು ನಮಸ್ಕಾರ ಮಾಡಿದನು. ಅವನು "ನಿನ್ನ ಧರ್ಮವು ಬೆಳೆಯಲಿ" ಎಂದು ಆಶೀರ್ವಾದ ಮಾಡಿ, ಆ ಧರ್ಮವು ಏನು ಎಂಬುದನ್ನು ಹೇಳಿದರು. ಅದನ್ನೆಲ್ಲಾ ಭಕ್ತಿಯಿಂದ ಕೇಳಿ "ಎಲೈ ಭಗವಂತರೆ, ತಾವು ಈ ದಿನ ಈ ಮುನಿಗಳೆಲ್ಲರನ್ನೂ ಕರೆದುಕೊಂಡು ನಮ್ಮ ಮನೆಗೆ ದಯಮಾಡಿಸಬೇಕು." ಎಂದು ಕೇಳಿಕೊಂಡನು. ಅದಕ್ಕೆ ಆ ಮುನೀಂದ್ರನು "ಅಯ್ಯಾ ಶ್ರಾವಕ,[3] ನೀನು ಧರ್ಮವನ್ನು ಬಲ್ಲೆ. ಆದರೂ ಹೀಗೆ ನುಡಿಯುತ್ತಿರುವೆಯಲ್ಲ. ಬ್ರಾಹ್ಮಣರನ್ನು ಕರೆಯುವಂತೆ ಕರೆಯುತ್ತಿರುವಿಯೆಲ್ಲ! ನಮ್ಮ ಪಾಡಿಗೆ ನಾವು ಹೋಗುತ್ತಿರುವಾಗ ಯಾರಾದರೂ ಬನ್ನಿರೆಂದರೆ, ಆಗ ಹೋಗಿ, ಪ್ರಾಣಧಾರಣಕ್ಕೆ ಬೇಕಾಗುವಷ್ಟು ಭಿಕ್ಷೆಯನ್ನು ಮಾತ್ರ ಸ್ವೀಕರಿಸುವವರು. ಅದರಿಂದ ನಮ್ಮನ್ನು ಹೀಗೆ ಕರೆಯಬಾರದು. ಹೋಗು." ಎಂದನು.

---

[1] ಜೈನ ಸನ್ಯಾಸಿಗಳಿರುವ ಮಠಕ್ಕೆ ವಿಹಾರ ಎಂದು ಹೆಸರು.

[2] ಜೈನಸನ್ಯಾಸಿಗಳನ್ನು ಕ್ಷಪಣಕರು, ಮುನಿಗಳು, ಎಂದು ಕರೆಯುವರು.

[3] ಜೈನರಲ್ಲಿ ಇನ್ನೂ ವ್ರತವನ್ನು ಹಿಡಿಯದಿದ್ದವರಿಗೆ ಶ್ರಾವಕರೆಂದು ಹೆಸರು.

ನಾಪಿತನು ಬಿಡಲಿಲ್ಲ. "ಭಗವಂತರೆ, ನಾನು ತಮ್ಮ ಧರ್ಮವನ್ನು ಬಲ್ಲೆ. ತಾವು ಬೀದಿಯಲ್ಲಿ ಹೊರಟರೆ ತಮ್ಮನ್ನು ಕರೆಯುವವರು ಎಷ್ಟೋ ಮಂದಿ. ಆದರೆ ನಾನು ಈ ದಿನ ತಮಗಾಗಿ ಪುಸ್ತಕಗಳನ್ನು ಕಟ್ಟುವುದಕ್ಕೆ ಪಟ್ಟು* ಗಳನ್ನು ತೆಗದಿಟ್ಟಿರುವೆನು. ಪುಸ್ತಕಗಳನ್ನು ಬರೆಸುವುದಕ್ಕೆಂದು ಹಣವನ್ನು ತೆಗೆದಿಟ್ಟಿರುವೆನು. ಆದ್ದರಿಂದ ತಾವು ದಯಮಾಡಿ ಅನುಗ್ರಹಿಸಬೇಕು" ಎಂದು ಮತ್ತೆ ನಮಸ್ಕಾರ ಮಾಡಿದನು. ಅವರು ಆ ಪಟ್ಟುಗಳು, ಪುಸ್ತಕ ಬರೆಯುವುದಕ್ಕೆ ಹಣ ಸಿಕ್ಕುವುದೆಂಬ ಲೋಭದಿಂದ ಅವನ ಹಿಂದೆಯೇ ಹೋದರು. ಲೋಕವೇ ಹೀಗೆ:—

ಮನೆಯನು ಬಿಟ್ಟು ಒಂಟಿಗನಾಗಿ | ಬಟ್ಟೆಯ ತೊರೆದು ಕಾಡೊಳು ಉಂಡು ॥
ತಿರುಗುವ ಯತಿಯೂ ಆಶೆಯ ದಾಸನು | ಆಶೆಯ ಬಿಟ್ಟಿಹುದಾರನ್ನು ॥ ೬ ॥

ನಾಪಿತನು ಅವರನ್ನೆಲ್ಲ ತನ್ನ ಮನೆಗೆ ಕರೆದುಕೊಂಡು ಹೋಗಿ ನಡುಮನೆಯಲ್ಲಿ ಕೂರಿಸಿದನು. ಬಾಗಿಲುಗಳನ್ನೆಲ್ಲಾ ಭದ್ರವಾಗಿ ಮುಚ್ಚಿ, ಮೊದಲೇ ಇಟ್ಟಿದ್ದ ಭಾರಿಯ ದೊಣ್ಣೆಗಳಿಂದ ಅವರ ತಲೆಗಳನ್ನು ಒಡೆಯಲು ಆರಂಭಿಸಿದನು. ಅವರು ಸಿಟ್ಟು ತಡೆಯಲಾರದೆ ಹೋ ಎಂದು ಅತ್ತರು. ಕೆಲವರು ಸತ್ತೂ ಹೋದರು.

ಆ ಅಳುವಿನ ಸದ್ದು ಕೇಳಿ ಅವರೂ ಇವರೂ ಅಲ್ಲಿಗೆ ಬಂದರು. ನಗರ ರಕ್ಷಕರೂ ಬಂದು ಬಾಗಿಲು ತೆಗೆಯಿಸಿ ನೋಡಲು ಒಳಗೆ ಆಗುತ್ತಿರುವ ಕ್ಷಪಣಕ-ಸಂಹಾರವು ಕಾಣಿಸಿತು. ಸಾಯದೆ ಉಳಿದವರು ತಲೆಯಿಂದ ರಕ್ತವನ್ನು ಸುರಿಸಿಕೊಂಡು ಈಚೆಗೆ ಓಡಿ ಬಂದರು. ಅವರಿಂದ ಎಲ್ಲವನ್ನೂ ಕೇಳಿ, ರಕ್ಷಕರು ಆ ನಾಪಿತನನ್ನು ಹಿಡಿದುಕೊಂಡು ಹೋಗಿ ನ್ಯಾಯಾಸ್ಥಾನದಲ್ಲಿ ನಿಲ್ಲಿಸಿದರು. ಧರ್ಮಾಧಿಕಾರಿಗಳು ನಾಪಿತನನ್ನು "ಇದೇಕೆ ಹೀಗೆ ಮಾಡಿದೆ?" ಎಂದು

* ಪಟ್ಟು = ದಪ್ಪ ರೇಶ್ಮೆಯ ಬಟ್ಟೆ.

ಕೇಳಲು, ಮಣಿಭದ್ರನು ಮಾಡಿದಂತೆ ತಾನೂ ಮಾಡಿದೆನೆಂದು ಹೇಳಿದನು. ಅವರು ಆ ಶೆಟ್ಟಿಯನ್ನು ಕರೆಸಿ, "ಏನಯ್ಯಾ, ನೀನು ಕ್ಷಪಣಕನನ್ನು ಕೊಂದೆಯಾ?" ಎನ್ನಲು ಅವನು ತನಗೆ ಆದ ಕನಸು ಮೊದಲುಗೊಂಡು ಎಲ್ಲವನ್ನೂ ಅವರಿಗೆ ಅರಿಕೆಮಾಡಿದನು. ಆಗ ಅವರು "ಈ ನಾಪಿತನು ಕುಪರೀಕ್ಷಿತಕಾರಿಯು. ಕಂಡುದನು. ಪರೀಕ್ಷೆಮಾಡದೆ ಮಾಡಿದ ಪಾಪಿಯು. ಹಿಂದಿನವರು ಹೇಳಿಲ್ಲವೆ?

ಯೋಚಿಸಿ ಮಾಡದೆ ದುಡುಕಿದರೆ | ತಪ್ಪದೆ ದುಃಖವು ಒದಗುವುದು ||
ಥಟ್ಟನೆ ಕೊಂದಾ ನಕುಲವನು | ಬ್ರಾಹ್ಮಣಿಯತ್ತಳು ಹಗಲಿರುಳು || ೭ ||

ಮಣಿಭದ್ರನು "ಆ ಕಥೆಯೇನು?" ಎನ್ನಲು ಧರ್ಮಾಧಿಕಾರಿಗಳು ಹೇಳಿದರು :—

## ದೇವಶರ್ಮನ ಕಥೆ

ಒಂದಾನೊಂದು ಊರಿನಲ್ಲಿ ದೇವಶರ್ಮನೆಂಬ ಬ್ರಾಹ್ಮಣನಿದ್ದನು. ಅವನು ವೇದ ಶಾಸ್ತ್ರಗಳನ್ನು ಬಲ್ಲವನು. ದಿನವೂ ವೇದಗಳನ್ನು ಓದುವನು. ಶಾಸ್ತ್ರದಲ್ಲಿ ಹೇಳಿರುವಂತೆ ನಡೆಯುವನು. ಆಹಿತಾಗ್ನಿಯು* ಆತನಿಗೆ ಪರಮ ಪತಿವ್ರತೆಯಾದ ಯಜ್ಞದತ್ತೆಯೆಂಬ ಹೆಂಡತಿಯಿದ್ದಳು. ಅವಳೊಮ್ಮೆ ಬಸುರಾಗಿ ಒಂದು ಗಂಡು ಮಗುವನ್ನು ಹೆತ್ತಳು. ಅದೇ ದಿನವೇ ಅವರ ಮನೆಯಲ್ಲಿದ್ದ ಮುಂಗುಸಿಯೂ ಒಂದು ಮರಿಯನ್ನು ಹಾಕಿತು. ಆ ಬ್ರಾಹ್ಮಣಿಯು ತನ್ನ ಮಗುವಿನಂತೆ ಆ ಮರಿಯನ್ನು ವಿಶ್ವಾಸದಿಂದ ಸಾಕುತ್ತಿದ್ದಳು. ಅದೂ ಮಗುವಿನಲ್ಲಿ ಬಲು ಅಕ್ಕರೆಯಿಂದ ಇದ್ದರೂ ಆಕೆಗೆ "ಇದು

* ಆಹಿತಾಗ್ನಿ :—ಮನೆಯಲ್ಲಿ ಅಗ್ನಿಯನ್ನು ಇಟ್ಟುಕೊಂಡು ದಿನವೂ ಬೆಳಗ್ಗೆ ಸಂಜೆ ತಪ್ಪದೆ ಹೋಮ ಮಾಡುವವರು.

ಕೆಟ್ಟಜಾತಿ. ಯಾವಾಗಲಾದರೂ ಮಗುವಿಗೆ ಕೇಡುಮಾಡಿದರೂ ಮಾಡೀತು.'' ಎಂದು ಬಲು ಎಚ್ಚರಿಕೆಯಿಂದ ಇರುತ್ತಿದ್ದಳು.

ಒಂದು ದಿನ ಆಕೆಯು ಮಗುವನ್ನು ತೊಟ್ಟಿಲಲ್ಲಿ ಮಲಗಿಸಿ, ಗಂಡನನ್ನು ಕೂಗಿ, '' ನಾನು ಕೆರೆಗೆ ಹೋಗಿ ನೀರು ತರುವೆನು. ನೀವು ಈ ಮಗುವನ್ನು ನೋಡಿಕೊಳ್ಳಿ. ಮುಂಗುಸಿಯೂ ಇಲ್ಲಿಯೇ ಇದೆ. ಎಚ್ಚರಿಕೆ.'' ಎಂದು ಹೇಳಿ ಒಪ್ಪಿಸಿ ಕೊಡವನ್ನು ತೆಗೆದು ಕೊಂಡು ನೀರಿಗೆ ಹೋದಳು. ಆ ವೇಳೆಗೆ ಆ ಊರಿನ ಅರಸು '' ದಾನಕ್ಕಾಗಿ ಬರಬೇಕು'' ಎಂದು ಆಳುಗಳನ್ನು ಕಳುಹಿಸಿದನು. ಆ ದೇವಶರ್ಮನು ಅರಸನ ಮಾತು ಮೀರಲಾರದೆ ಅಲ್ಲಿಗೆ ಹೋದನು.

ಇತ್ತ ಮನೆಯಲ್ಲಿ ಯಾರೂ ಇಲ್ಲದ ವೇಳೆಯಲ್ಲಿ ಒಂದು ನಾಗರಹಾವು ತನ್ನ ಬಿಲದಿಂದ ಈಚೆಗೆ ಬಂತು. ಮುಂಗುಸಿಯು ಅದನ್ನು ಕಂಡು ಅದರಮೇಲೆ ಬಿದ್ದು ಕಾದಾಡಿ ಅದನ್ನು ಕೊಂದಿತು.

ಹಾಗೆ ಹಗೆಯನ್ನು ಕೊಂದೆನೆಂಬ ತನ್ನ ಸಂತೋಷವನ್ನು ತಾಯಿಗೆ ಹೇಳಲು ಅದು ಅಕೆಗೆ ಎದುರಾಗಿ ಬಂತು. ಆಕೆಯು ಅದರ ಮುಸುಡಿಯಲ್ಲಿದ್ದ ಮಾಂಸ ರಕ್ತಗಳನ್ನು ನೋಡಿ ಮಗುವನ್ನು ಕೊಂದು ಬಂದಿರುವುದು ಎಂದುಕೊಂಡು, ಆ ಕೋಪ ದುಃಖಗಳಲ್ಲಿ ತಾನು ತಂದಿದ್ದ ನೀರಿನ ಕೊಡವನ್ನು ಅದರ ತಲೆಯ ಮೇಲೆ ಕುಕ್ಕಿದಳು. ಅದು ಅಲ್ಲಿಯೇ ಸತ್ತುಬಿದ್ದಿತು.

ಬ್ರಾಹ್ಮಣಿಯು ಮನೆಗೆ ಬಂದು ನೋಡಿದಳು. ಮಗುವು ತೊಟ್ಟಿಲಲ್ಲಿ ಸುಖವಾಗಿ ಆಡಿಕೊಂಡಿತ್ತು. ತೊಟ್ಟಿಲಿನ ಮಗ್ಗುಲಲ್ಲಿಯೇ ನಾಗರ ಹಾವು ತುಂಡು ತುಂಡಾಗಿ ಬಿದ್ದಿತ್ತು. ಆ ವೇಳೆಗೆ ಗಂಡನೂ ಬಂದನು. ಬ್ರಾಹ್ಮಣಿಯು ಬಲವಾಗಿ ಅತ್ತಳು. '' ನಿಮ್ಮನ್ನು ಕಾದಿಕೊಂಡಿರಿ ಎಂದರೆ ನೀವು ಕೇಳಲಿಲ್ಲ. ದಾನದಮೇಲಿನ ಆಸೆ

ಯಿಂದ ನೀವು ಹೊರಟು ಹೋದಿರಿ. ಅದರ ಫಲವಾಗಿ ಇಷ್ಟು ಆಯಿತು. ನಾನು ಬರುವವರೆಗೂ ತಡೆಯಬಾರದಾಗಿತ್ತೇ? ಮುಗುವಂತಿದ್ದ ಮುಂಗುಸಿಯು ಅನ್ಯಾಯವಾಗಿ ಮೃತ್ಯುವಿನ ಪಾಲಾಯಿತು. ಅಷ್ಟಲ್ಲದೆ ಹೇಳಿದರೇ?

ಲೋಭ ಬಲಿತಕಿಯಾಗಬಾರದು । ಲೋಭವನು ಪೂರ್ಣ ಬಿಡಬಾರದು ॥
ಲೋಭವು ಅತಿಯಾಗಲು ಫಲವಾಗಿ । ಆಯಿತು ಚಕ್ರವು ಮಸ್ತಕದಲ್ಲಿ ॥ ೮ ॥

ಬ್ರಾಹ್ಮಣನು ಕೇಳಿದನು: "ಅದು ಹೇಗೆ?" ಎಂದು ಆಕೆಯು ಹೇಳಿದಳು:—

## ಚಕ್ರಧರನ ಕಥೆ

ಒಂದಾನೊಂದು ಊರಿನಲ್ಲಿ ನಾಲ್ವರು ಮಿತ್ರರು ಇದ್ದರು. ಅವರು ದರಿದ್ರರು. ಒಂದು ದಿನ ಅವರು ನಾಲ್ವರೂ ಸೇರಿ ತಮ್ಮ ಬಡತನದ ವಿಚಾರವಾಗಿ ಚರ್ಚೆ ಮಾಡಿದರು:— ಹುಲಿ ಕರಡಿಗಳಿರುವ ವನದಲ್ಲಿ, ಜನವೇ ಇಲ್ಲದೆ, ಮುಳ್ಳು ಹಿಡಿದು ಹೋಗಿರುವ ಕಾಡುಗಳಲ್ಲಿ, ಹುಲ್ಲುಹಾಸಿಕೊಂಡು ನಾರುಡೆ ಉಟ್ಟುಕೊಂಡು ಇದ್ದರೂ ಚಿಂತೆಯಿಲ್ಲ. ನೆಂಟರನಡುವೆ ಹಣವಿಲ್ಲದೆ ಬಾಳಬಾರದು. ಜೊತೆಗೆ

ಸಿರಿಯು ತೊಲಗಲು ನರನ ಸಾಹಸ ವಿಫಲವಾಗುವುದು ॥
ಸೇವೆ ಮಾಡಲು ತೃಪ್ತನಾಗದೆ ಒಡೆಯ ಒದೆಯುವನು ॥
ಬಂಧು ವರ್ಗವು ದೂರಗೈವುದು ಗುಣವು ಮರೆಯುವುದು ॥
ಮಗನು ದೂರಕೆ ಸರಿವನಾಪದ ತಾನೆ ತಾನಹುದು ॥
ಸಾಧು ಸತಿಯಳು ತಣ್ಣಗಿರುವಳು ಗೆಳೆಯ ಕೈ ಬಿಡುವ ॥ ೯ ॥

ಶೂರನಾಗಲಿ ರೂಪನಾಗಲಿ ವಾಗ್ಮಿಯಾಗಿರಲಿ ।
ಶಸ್ತ್ರ ಶಾಸ್ತ್ರವನೊಲಿಸಿಕೊಂಡವ ಧೀರನಾಗಿರಲಿ ॥
ಅರ್ಥವಿದ್ದರೆ ಮಾತ್ರ ಪಡೆವನು ಮಾನಕೀರ್ತಿಗಳ ।
ಅರ್ಥ ಮಹಿಮೆಯನೇನ ಹೇಳ್ವುದು ಚಿತ್ರಚಿತ್ರವದು ॥ ೧೦ ॥

ಅರ್ಥ ಕಳೆಯಲು ಪುರುಷನೆಂಥವನಾಗಲಿ |
ಬಿಡುವ ಸತ್ಯವ ಬಿಡುವ ಬಂಧುಬಾಂಧವರ ||
ಬಿಡುವ ತಾಯಿಯ ಬಿಡುವ ಜನ್ಮದ ಭೂಮಿಯ |
ಬಿಡುವ ನಿಷ್ಟುರ ನಡೆವ ನನ್ಯರದೇಶಕೆ || ೧೧ ||

ಅದರಿಂದ ನಾವು ಎಲ್ಲಾದರೂ ಹೋಗಿ ಹಣವನ್ನು ಸಂಪಾದಿಸಿಕೊಂಡೇ ಬರಬೇಕು." ಎಂದು ನಿಶ್ಚಯ ಮಾಡಿಕೊಂಡು ಮಿತ್ರಬಾಂಧವರನ್ನೆಲ್ಲ ಬಿಟ್ಟು ಪ್ರಯಾಣ ಹೊರಟು, ಅವಂತೀ ದೇಶಕ್ಕೆ ಬಂದರು. ಅಲ್ಲಿ ಸಿಪ್ರಾ ನದಿಯಲ್ಲಿ ಮಿಂದು ಮಡಿಯಾಗಿ, ಅಲ್ಲಿನ ದೇವರಾದ ಮಹಾಕಾಲೇಶ್ವರನ ದರ್ಶನ ಮಾಡಿ ಬರುತ್ತಿರುವಾಗ ಅವರಿಗೆ ಭೈರವಾನಂದನೆಂಬ ಯೋಗಿಯು ಸಿಕ್ಕಿದನು. ಆತನನ್ನು ಇವರು ಭಕ್ತಿಯಿಂದ ನಮಸ್ಕಾರ ಮಾಡಲು ಆತನು ಇವರನ್ನು ತನ್ನ ಮಠಕ್ಕೆ ಕರೆದುಕೊಂಡು ಹೋದನು: "ನೀವು ಎಲ್ಲಿಂದ ಬಂದಿರಿ? ಎಲ್ಲಿಗೆ ಹೊರಟಿರುವಿರಿ? ಏತಕ್ಕಾಗಿ ಹೋಗುತ್ತಿದ್ದೀರಿ?" ಎಂದು ಕೇಳಲು, ಇವರು ನಾವು "ಸಿದ್ಧಿಯನ್ನು ಸಂಪಾದಿಸಲು ಹೊರಟಿರುವೆವು. ನಮಗೆ ಧನವು ಬೇಕು. ಆ ಪ್ರಯತ್ನದಲ್ಲಿ ನಾವು ಸತ್ತರೂ ಚಿಂತೆಯಿಲ್ಲ. ಅದರಿಂದ ಧನಕ್ಕಾಗಿ ಬೇಕಾದ ಸಾಹಸ ಮಾಡಲು ಸಿದ್ಧರಾಗಿರುವೆವು: ಸಾಹಸಕ್ಕೆ ಸಿಕ್ಕದ್ದು ಯಾವುದು ತಾನೇ ಉಂಟು?

ಹಿಡಿದು ಮಾಡಿದೆ ಮಾನವನ ಹಿರಿದು ಯತ್ನ ||
ಸರಿದೂಗುವುದು ದೈವ ಮಾಡಿದ ಕಾರ್ಯವ || ೧೨ ||
ಬೇಕೆಂದುದ ಮಾಡುವ ಯತ್ನವ ಬಲ್ಲ ಪುರುಷ ||
ಮಾನವ ಮಾಡಿದ ಯತ್ನ | ಮೂಢರ ಕಣ್ಣಿನ ದೈವ || ೧೩ ||
ಕಷ್ಟವಿಲ್ಲದ ಸುಖವದಾವುದೀ ಲೋಕದೊಳು ದೊರೆಯುವುದು ||
ಪುರುಷೋತ್ತಮನು ಲಕ್ಷ್ಮಿಯನು ಪಡೆಯೆ ಮಥಿಸಿದನು ಸಾಗರವ ||೧೪||

ಅದರಿಂದ ತಾವು ಕೃಪೆಮಾಡಿ ನಮಗೆ ಧನವು ಲಭಿಸು[ವ] ಉಪಾಯವನ್ನು ಹೇಳಿಕೊಡಬೇಕು. ಗುಹೆಗೆ ನುಗ್ಗೆನ್ನು ವಿರಾ[...]

ಶಾಕಿನಿಯನ್ನು ಒಲಿಸಿಕೊಳ್ಳಬೇಕು ಎನ್ನುವಿರಾ? ಸ್ಮಶಾನದಲ್ಲಿ ವಾಸಮಾಡು ಎನ್ನುವಿರಾ? ನಮ್ಮ ಮೈಯ ಮಾಂಸವನ್ನೇ ಕಿತ್ತು ಮಾರು ಎನ್ನುವಿರಾ? ತಾವು ಬಹಳವಾದ ಯೋಗ ಸಿದ್ಧಿಯನ್ನು ಪಡೆದವರು ಎಂದು ತಮ್ಮ ಕೀರ್ತಿಯನ್ನು ಕೇಳಿರುವೆವು. ನಾವು ಎಂತಹ ಸಾಹಸವನ್ನಾದರೂ ಮಾಡಲು ಸಿದ್ಧರಾಗಿರುವೆವು.

ದೊಡ್ಡಾಸೆಯ ಗೆಲುವೊಡೆ| ದೊಡ್ಡವನಾಗೈಯ್ಯ॥
ಬಡಬಾಗ್ನಿಯ ಧರಿಸಲು ಕಡಲ| ಲ್ಲದೆ ಕೊಳನಾಗುವುದೇನಯ್ಯಾ ॥೧೫॥

ಆದರಿಂದ ನಮ್ಮನ್ನು ಅನುಗ್ರಹಿಸಿ ಉದ್ಧಾರ ಮಾಡಬೇಕು." ಎಂದು ನಮಸ್ಕಾರ ಮಾಡಿದರು. ಭೈರವಾನಂದರು ಇವರು ಯೋಗ್ಯರು ಎಂದು ತಿಳಿದು ಅವರಿಗೆ ನಾಲ್ಕು ಸಿದ್ಧವರ್ತಿಗಳನ್ನು ಮಾಡಿಕೊಟ್ಟು, "ಇವು ಸಿದ್ಧವರ್ತಿಗಳು. ಇದನ್ನು ತೆಗೆದುಕೊಂಡು ನೀವು ಹಿಮಾಲಯಕ್ಕೆ ಹೋಗಿ, ಅಲ್ಲಿ ಎಲ್ಲಿ ನಿಮ್ಮ ಕೈಯಲ್ಲಿರುವ ಬತ್ತಿಯು ಬೀಳುವುದೋ ಅಲ್ಲಿ ಅಗೆಯಿರಿ. ಸಂಶಯವಿಲ್ಲದೆ ಅಲ್ಲಿ ನಿಮಗೆ ಧನವು ಸಿಕ್ಕುವುದು." ಎಂದು ಹೇಳಿ ಆಶೀರ್ವಾದ ಮಾಡಿ ಕಳುಹಿಸಿಕೊಟ್ಟರು.

ಹಾಗೆಯೇ ಅವರು ಹಿಮಾಲಯದ ಭೂಮಿಗೆ ಹೋದರು. ಅಲ್ಲಿ ಹಾದಿ ಹಿಡಿದು ಹೋಗುತ್ತಿರುವಾಗ, ಒಬ್ಬನ ಕೈಯಲ್ಲಿದ್ದ ಬತ್ತಿಯು ನೆಲಕ್ಕೆಬಿತ್ತು. ಅವನು ಅಗೆದು ನೋಡಿದರೆ, ಅಲ್ಲಿ ತಾಮ್ರವು ಬೇಕಾದ ಹಾಗೆ ಸಿಕ್ಕಿತು. ಅವನು ಅದನ್ನು ತೆಗೆದುಕೊಳ್ಳೋಣ ಎನ್ನಲು ಮಿಕ್ಕವರು "ಬಿಡೋ, ಈ ತಾಮ್ರದಿಂದೇನು? ಎಷ್ಟು ತುಂಬಿಕೊಂಡು ಹೋದರೂ ನಮ್ಮ ಬಡತನ ಅಡಗುವುದಿಲ್ಲ. ಬೇಡ, ಬಿಡು. ಮುಂದೆ ಹೋಗೋಣ" ಎಂದು ತಡೆದರು. ಅವನು ಅದಕ್ಕೆ ಒಪ್ಪದೆ, "ನೀವು ಹೋಗಿ. ನನಗೆ ಇದೇ ಸಾಕು" ಎಂದು ತಾಮ್ರವನ್ನು ತನಗೆ ಬೇಕಾದಷ್ಟು ತೆಗೆದುಕೊಂಡು ಊರಿಗೆ ಹೋದನು.

ಮುಂದೆ ಹೋಗುತ್ತಿರಲು, ಇನ್ನೊಬ್ಬನ ಬತ್ತಿಯೂ ಬಿತ್ತು. ಅಲ್ಲಿ ಅಗೆದು ನೋಡಿದರೆ ಅದು ಬೆಳ್ಳಿಯ ನೆಲ. ಬತ್ತಿಯವನು "ಬನ್ನಿ, ಬೆಳ್ಳಿಯನ್ನು ತುಂಬಿಕೊಂಡು ಹೋಗೋಣ" ಎನ್ನಲು, ಇತರರು, "ಹಿಂದೆ ತಾಮ್ರ ಭೂಮಿಯಾಯಿತು. ಇದು ಬೆಳ್ಳಿಯ ಭೂಮಿ, ಮುಂದೆ ಚಿನ್ನದ ಭೂಮಿಯಿರಬೇಕು. ಇದು ಬೇಡ, ಬಾ. ಹೋಗೋಣ" ಎಂದರು. ಅವನು ಅದಕ್ಕೊಪ್ಪದೆ, "ನೀವು ಬೇಕಾದರೆ ಹೋಗಿ, ನಾನು ಬರುವುದಿಲ್ಲ." ಎಂದು ತನಗೆ ಬೇಕಾದಷ್ಟು ಬೆಳ್ಳಿಯನ್ನು ತೆಗೆದುಕೊಂಡು ಊರಿಗೆ ಹೋದನು.

ಉಳಿದಿಬ್ಬರೂ ಮುಂದೆ ಹೋದರು. ಅವರಲ್ಲಿ ಒಬ್ಬನ ಕೈಯಲ್ಲಿದ್ದ ಬತ್ತಿಯು ಒಂದು ಕಡೆ ಬಿತ್ತು. ಅಲ್ಲಿ ಅಗೆದು ನೋಡಿದರೆ ಚಿನ್ನವು ತಾನೇ ತಾನಾಗಿತ್ತು. ಬತ್ತಿಯವನು, "ಬಾ. ಚಿನ್ನಕ್ಕಿಂತ ಇನ್ನೇನು? ಇದನ್ನು ಬೇಕಾದಷ್ಟು ತುಂಬಿಕೊಂಡು ಹೋಗೋಣ." ಎಂದನು. ಇನ್ನೊಬ್ಬನು "ಅಯ್ಯೋ ಮೂಢ, ಕಾಣೆಯಾ? ಮೊದಲು ತಾಮ್ರ, ಆಮೇಲೆ ಬೆಳ್ಳಿ, ಈಗ ಚಿನ್ನ. ಇನ್ನು ಮುಂದೆ ಹೋದರೆ ರತ್ನಗಳು ಇರಲೇ ಬೇಕು. ರತ್ನವೊಂದರಿಂದಲೇ ದಾರಿದ್ರ್ಯವೆಲ್ಲ ಹೋಗುವುದು. ಅದರಿಂದ ನಡೆ, ಮುಂದೆ ಹೋಗೋಣ. ಈ ಚಿನ್ನದ ಭಾರ ಹೊರುವವರು ಯಾರು?" ಎಂದನು. ಅದಕ್ಕವನು "ನೀನು ಹೋಗು. ನೀನು ಬರುವವರೆಗೂ ನಾನಿಲ್ಲಿ ಕಾದಿರುವೆನು." ಎಂದು ಅಲ್ಲಿಯೇ ನಿಂತನು.

ಕೊನೆಯವನು ಮುಂದೆ ನಡೆದನು. ದಾರಿಯಲ್ಲಿ ಬಿಸಿಲಿನ ಝಳ ತಡೆಯಲಾರದಷ್ಟು ಆಯಿತು. ಬಾಯಾರಿಕೆ ತಾನೇ ತಾನಾಯಿತು. ಆ ಸಂಕಟದಲ್ಲಿ ದಾರಿಯು ತಪ್ಪಿಹೋಯಿತು. ಎಲ್ಲೆಲ್ಲೋ ಅಲೆಯುತ್ತ ಎದುರಿಗೆ ಒಬ್ಬನು ಬರುತ್ತಿರುವುದನ್ನು ಕಂಡನು. ಅವನಿಗೆ ತಲೆಯ ಮೇಲೆ ಸುತ್ತುತ್ತಿರುವ ಚಕ್ರ. ಅದರಿಂದ ನೆತ್ತಿಯಲ್ಲಿ ಆಗಿರುವ ಗಾಯದಿಂದ ರಕ್ತವು ಸುರಿದು ದೇಹವೆಲ್ಲಾ ರಕ್ತಮಯ

ವಾಗಿದೆ. ಅವನನ್ನು ಕಂಡು ಹೊಸಬನು "ಅಯ್ಯಾ, ನೀನಾರು? ಇದೇನು ನಿನ್ನ ನೆತ್ತಿಯಲ್ಲಿ ಈ ಸುತ್ತುತ್ತಿರುವ ಚಕ್ರ? ಇಲ್ಲಿಲ್ಲಿ ಯಾದರೂ ನೀರಿರುವುದೇ ಹೇಳು" ಎಂದು ಕೇಳಿದನು. ಅವನು ಮಾತು ಮುಗಿಯುತ್ತಿದ್ದ ಹಾಗೆಯೇ, ಆ ಚಕ್ರವು ಅವನ ತಲೆಯ ಮೇಲಿಂದ ಹೊಸಬನ ತಲೆಯ ಮೇಲಕ್ಕೆ ಹಾರಿತು. ಅವನು "ಅಯ್ಯೋ, ಇದೇನಿದು?" ಎಂದು ಕೇಳಿದನು.

"ನನಗೂ ಹೀಗೆಯೇ ಆಯಿತು."

"ಹಾಗಾದರೆ ಇದು ತೀರುವುದು ಎಂದಿಗೆ? ಬಹಳ ನೋವಾಗುತ್ತಿರುವುದಲ್ಲಾ!"

"ನಿನ್ನಂತೆಯೇ ಸಿದ್ಧವರ್ತಿಯನ್ನು ತಂದಿರುವವನು ಯಾವ ನಾದರೂ ಬಂದು ನಿನ್ನನ್ನು ಮಾತನಾಡಿಸಿದರೆ, ಆಗ ಇದು ನಿನ್ನ ತಲೆಮೇಲಿಂದ ಅವನ ತಲೆಯ ಮೇಲಕ್ಕೆ ನೆಗೆಯುವುದು."

"ಹಾಗಾದರೆ, ಇದು ನಿನ್ನ ತಲೆಯ ಮೇಲೆ ಎಷ್ಟು ದಿನದಿಂದ ಇತ್ತು?"

"ಈಗ ಭೂಮಿಯಲ್ಲಿ ಆಳುತ್ತಿರುವ ರಾಜನಾರು."?

"ವೀಣಾ ವತ್ಸರಾಜನು ಆಳುತ್ತಿರುವನು?"

"ನಾನು ಕಾಲದ ಲೆಕ್ಕವನ್ನು ಅರಿಯೆ. ನನಗೆ ಹೀಗಾದಾಗ ಶ್ರೀರಾಮನು ರಾಜ್ಯವಾಳುತ್ತಿದ್ದನು. ನಾನು ದಾರಿದ್ರ್ಯದ ಸಂಕಟ ವನ್ನು ತಡೆಯಲಾರದೆ, ಸಿದ್ಧವರ್ತಿಯನ್ನು ಪಡೆದುಕೊಂಡು ಇಲ್ಲಿಗೆ ಬಂದೆನು. ಆ ವೇಳೆಗೆ ಒಬ್ಬನು ಚಕ್ರಮಸ್ತಕನಾಗಿದ್ದನು. ನಾನು ಅವನನ್ನು ಕಂಡು ನೀನು ಕೇಳಿದಂತೆಯೇ ಕೇಳಿದೆನು. ನಿನಗೆ ಆದಂತೆ ನನಗೂ ಅಯಿತು."

"ಅಯಿತು. ಹೀಗೆ ನೆತ್ತಿಯಲ್ಲಿ ಚಕ್ರವನ್ನು ಹೊತ್ತು ತಿರುಗುತ್ತಿದ್ದ ನಿನಗೆ ಅನ್ನ ನೀರು ಎಲ್ಲಿಂದ ಬರುತ್ತಿತ್ತು?"

"ಅಯ್ಯಾ, ಇಲ್ಲಿರುವ ನಿಧಿಗಳನ್ನು ಸಿದ್ಧರು ಹೊತ್ತುಕೊಂಡು ಹೋಗುವರೆಂದು ಕುಬೇರನು ಇಲ್ಲಿ ಈ ಭಯವನ್ನು ಸೃಷ್ಟಿಸಿರುವನು. ಅದರಿಂದಲೇ ಇಲ್ಲಿಗೆ ಒಬ್ಬರೂ ಬರುವುದಿಲ್ಲ. ಯಾರಾದರೂ ಇಲ್ಲಿಗೆ ಅಪ್ಪಿತಪ್ಪಿ ಬಂದರೆ ಅವನಿಗೆ ಹಸಿವು ಬಾಯಾರಿಕೆ ನಿದ್ದೆಗಳು ತಪ್ಪುವುವು. ಮುಪ್ಪು ಮರಣಗಳು ಇಲ್ಲವಾಗುವುವು. ಹೀಗೆ ವೇದನೆಯನ್ನು ಮಾತ್ರ ಅನುಭವಿಸುತ್ತ ತಿರುಗುತ್ತಲಿರುವನು. ಅದರಿಂದ ಇನ್ನು ನನಗೆ ಅಪ್ಪಣೆಯನ್ನು ಕೊಡು. ನಾನು ಮನೆಗೆ ಹೋಗುವೆನು."

ಎಂದು ಹೇಳಿ ಹಳೆಬನು ಹೋದನು.

ಇತ್ತ ಚಿನ್ನವನ್ನು ಪಡೆದ ಮೂರನೆಯವನು ಬಹುಕಾಲವಾದರೂ ಮುಂದೆ ಹೋದ ಮಿತ್ರನು ಬರಲಿಲ್ಲವೆಂದು ಅವನನ್ನು ಹುಡುಕಿಕೊಂಡು ಬಂದನು. ಚಕ್ರಧರನು ನೋವಿನಿಂದ ಕುಯ್ಯೋ ಮೊರ್‍ರೋ ಎಂದು ಅಳುತ್ತಾ ತಿರುಗುತ್ತಿದ್ದನು. ಅದನ್ನು ಕಂಡು ಮೂರನೆಯವನು ಇದೇನೆಂದು ಕೇಳಲು "ನನ್ನ ಹಣೆಯ ಬರೆಹ" ಎಂದು ಎಲ್ಲವನ್ನೂ ಹೇಳಿದನು. ಅದನ್ನು ಕೇಳಿ ಅವನು, ಇವನನ್ನು ಚೆನ್ನಾಗಿ ಬಯ್ದು "ನಾನು ಬೇಡವೆಂದು ಎಷ್ಟು ಹೇಳಿದರೂ ಕೇಳದೆ ಬಂದು ಈ ಅವಸ್ಥೆಗೆ ಗುರಿಯಾದೆ. ಏನು ಮಾಡುವುದು? ನೀನು ವಿದ್ಯಾವಂತನಾದರೂ ಸತ್ಕುಲದಲ್ಲಿ ಹುಟ್ಟಿದವನಾದರೂ ಬುದ್ಧಿವಂತನಲ್ಲ! ಹಿರಿಯರು ಹೇಳುವುದಿಲ್ಲವೆ?

ದೊಡ್ಡದು ಬುದ್ಧಿಯು ವಿದ್ಯೆಯು ತಾನಲ್ಲ ||
ಬುದ್ಧಿಯ ಪಡೆಯದೆ ವಿದ್ಯೆಯ ಪಡೆದವ ||
ಆದನು ಸಿಂಹಕೆ ತಾ ತುತ್ತು || ೧೬ ||

ಚಕ್ರಧರನು ಕೇಳಿದನು: "ಅದು ಹೇಗೆ?" ಎಂದು. ಸುವರ್ಣಸಿದ್ಧಿಯು ಹೇಳಿದನು:–

# ಓದಿದ ದಡ್ಡರ ಕಥೆ

ಒಂದಾನೊಂದು ಊರಿನಲ್ಲಿ ನಾಲ್ವರು ಮಿತ್ರರು ಇದ್ದರು. ಅವರಲ್ಲಿ ಮೂವರು ಶಾಸ್ತ್ರವನ್ನು ಚೆನ್ನಾಗಿ ಓದಿದವರು. ಆದರೂ ಬುದ್ಧಿಯಿಲ್ಲದವರು. ಉಳಿದ ನಾಲ್ಕನೆಯವನು ಬುದ್ಧಿವಂತನಾದರೂ ಶಾಸ್ತ್ರವನ್ನು ಅರಿಯದವನು. ಅವರು ನಾಲ್ವರೂ ಒಂದು ದಿನ ಒಂದು ಕಡೆ ಸೇರಿ ಯೋಚಿಸಿದರು: "ವಿದ್ಯೆಯನ್ನು ಕಲಿತು ದಕ್ಕೆ ದೇಶಾಂತರಗಳಿಗೆ ಹೋಗಿ ನರಪತಿಗಳನ್ನು ಸಂತೋಷಪಡಿಸಿ ಬೇಕಾದ ಹಾಗೆ ಹಣವನ್ನು ಸಂಪಾದಿಸಬೇಕು. ಇಲ್ಲದಿದ್ದರೆ ಏನು ಫಲ?" ಎಂದು ಒಬ್ಬನು ಹೇಳಿದನು. ಹಾಗೇ ಆಗಲೆಂದು ಎಲ್ಲರೂ * ದೇಶಾಟನಕ್ಕೆ ಹೊರಟರು.

ಅಷ್ಟು ದೂರ ಹೋದಮೇಲೆ ಅವರಲ್ಲೆಲ್ಲಾ ದೊಡ್ಡವನು "ನಮ್ಮಲ್ಲಿ ಇವನು ಬುದ್ಧಿವಂತನಾದರೂ ವಿದ್ಯಾವಂತನಲ್ಲ. ವಿದ್ಯೆಯಿಲ್ಲದೆ ರಾಜರನ್ನು ಮೆಚ್ಚಿಸುವುದೆಂತು? ನಾನು ಸಂಪಾದಿಸುವುದರಲ್ಲಿ ಇವನಿಗೆ ನಾನು ಪಾಲು ಕೊಡುವುದಿಲ್ಲ. ಅದರಿಂದ, ಇವನು ಬೇಕಾದರೆ ಈಗಲೇ ಮನೆಗೆ ಹೋಗಲಿ" ಎಂದನು. ಎರಡನೆಯವನು "ನಿಜ, ಅಯ್ಯಾ ಸುಬುದ್ಧಿ, ನೀನು ಹಿಂತಿರುಗು. ನೀನು ವಿದ್ಯಾವಂತನಲ್ಲ." ಎಂದನು. ಮೂರನೆಯವನು "ಎಲಾ, ಇದು ಸರಿಯಲ್ಲ. ನಾವು ನಾಲ್ವರೂ ಬಾಲ್ಯದಿಂದಲೂ ಒಟ್ಟಿಗಿದ್ದು ಬಂದುದನ್ನೆಲ್ಲಾ ಸಮಸಮವಾಗಿ ಅನುಭವಿಸಿದವರು. ಅಲ್ಲದೆ,

ತನ್ನವನಿವನವ ಬೇರೆಂಬೆಣಿಕೆ | ನಿಜದಿಂ ನೋಡಲು ಸಣ್ಣದು ಮನಕೆ ||
ಎಲ್ಲರು ತನ್ನವರೆಂಬುವ ಎಣಿಕೆ | ಸತ್ಯವು ಕೇಳಾ ಹಿರಿಯಮನಕ್ಕೆ || ೧೭ ||

---

* ದೇಶಾಟನ=ದೇಶಗಳನ್ನು ತಿರುಗುವುದು.

ಆದರಿಂದ ಎಲ್ಲರೂ ಸೇರಿ ಹೊಗೋಣ'' ಎಂದನು. ಎಲ್ಲರೂ ಹಾಗೇ ಆಗಲಿ ಎಂದು ಮುಂದೆ ಹೋದರು.

ಹಾದಿಯು ಕಾಡಿನಲ್ಲಿ ಹಾದು ಹೋಗುವುದು. ದಾರಿಯಲ್ಲಿ ಒಂದು ಸಿಂಹದ ಮೂಳೆಗಳು ಚೆಲ್ಲಾಡಿದ್ದುವು. ಅದನ್ನು ಕಂಡು ಒಬ್ಬನು "ಇದೋ, ಇಲ್ಲಿ ಯಾವುದೋ ಪ್ರಾಣಿಯು ಸತ್ತು ಬಿದ್ದಿದೆ. ಇದಕ್ಕೆ ನಮ್ಮ ವಿದ್ಯಾ ಪ್ರಭಾವದಿಂದ ಜೀವವು ಬರುವಂತೆ ಮಾಡೋಣ. ನಾನು ಈ ಅಸ್ಥಿಗಳನ್ನು ಸರಿಯಾಗಿ ಜೋಡಿಸುವೆನು.'' ಎಂದು ಆ ಮೂಳೆಗಳನ್ನೆಲ್ಲ ಜೋಡಿಸಿದನು. ಎರಡನೆಯವನು ತನ್ನ ವಿದ್ಯಾಬಲದಿಂದ ಚರ್ಮ ಮಾಂಸ ರಕ್ತಗಳು ಬರುವಂತೆ ಮಾಡಿದನು. ಮೂರನೆಯವನು ಜೀವವನ್ನು ಬರಿಸುವೆನೆಂದು ಹೊರಟನು.

ಅಷ್ಟರಲ್ಲಿ ಸುಬುದ್ಧಿಯು ಮುಂದೆ ಬಂದು ತಡೆದು, "ಎಲೈ ನಿಲ್ಲು, ಇದು ಸಿಂಹ! ಇದನ್ನು ಬದುಕಿಸಿದರೆ ಇದು ನಮ್ಮೆಲ್ಲರನ್ನೂ ಸಂಹರಿಸುವುದು'' ಎಂದನು. ಅವನಿಗೆ ಕೋಪಬಂತು. ಅವನು "ಛೀ, ಮೂರ್ಖ! ನನ್ನ ವಿದ್ಯೆಯನ್ನು ತೋರಿಸಬೇಡ ಎನ್ನುವೆಯಾ?'' ಎಂದು ಅವನನ್ನು ಹೊಡೆಯುವುದಕ್ಕೆ ಹೋದನು. ಆದಕ್ಕವನು, "ಹಾಗಾದರೆ, ಕೊಂಚ ತಡೆ, ನಾನು ಮರವನ್ನು ಹತ್ತಿಕೊಳ್ಳುವೆನು'' ಎಂದು ಸರಸರನೆ ಮರವನ್ನು ಹತ್ತಿದನು.

ಅನಂತರ ಅವನು ಮಂತ್ರವನ್ನು ಹಾಕಿದನು. ಸಿಂಹಕ್ಕೆ ಜೀವವೂ ಬಂತು. ಅದು ಅವರ ಮೇಲೆಯೇ ಬಿದ್ದು ಅವರು ಮೂವರನ್ನೂ ಕೊಂದೂ ಹಾಕಿತು. ಆ ಸಿಂಹವು ಅವರನ್ನು ತಿಂದು ತೇಗಿ ಹೊರಟು ಹೋದಮೇಲೆ, ಸುಬುದ್ಧಿಯು ಮರದಿಂದಿಳಿದು ಮನೆಗೆ ಹೋದನು. "ಅದರಿಂದ ವಿದ್ಯೆಗಿಂತ ಬುದ್ಧಿಯು ಹೆಚ್ಚು.'' ಎಂದು ಹೇಳಿದೆನು. ಅಲ್ಲದೆ,

ಶಾಸ್ತ್ರವ ಬಲ್ಲೊಡೆ ಸಾಲದು ಕೇಳ್ಕೈ | ಲೋಕಾಚಾರವ ತಿಳಿದಿರಬೇಕ್ಕೈ ||
ಮೂರ್ಖರು ಪಂಡಿತರಾಗೇನಾಯಿತು ? ಅಪಹಾಸ್ಯವ ಪಡೆದರು ಸರ್ವತ್ರ
|| ೧೮ ||

ಎನ್ನಲು ಚಕ್ರಧರನು "ಅದೆಂತು?" ಎಂದು ಕೇಳಿದನು. ಸುವರ್ಣಸಿದ್ಧಿಯು ಹೇಳಿದನು:—



## ಮೂರ್ಖ ಪಂಡಿತರ ಕಥೆ

ಒಂದಾನೊಂದು ಊರಿನಲ್ಲಿ ನಾಲ್ವರು ಮಿತ್ರರು [illegible]ದ್ದರು. ಅವರಿನ್ನೂ ಹುಡುಗರಾಗಿರುವಾಗಲೇ ಅವರಿಗೆ ಒಳೆ[illegible] ಹುಟ್ಟಿ ದೇಶಾಂತರಕ್ಕೆ ಹೋಗಿ ವಿದ್ಯೆ[illegible] ಕಲಿಯ[illegible] ಎನ್ನಿಸಿತು. ಅದರಂತೆ ಅವರು ಕನ್ಯಕುಬ್ಜ (ಈಗಿನ ಕನೋಜ್) ದೇಶಕ್ಕೆ ಹೋಗಿ ಅಲ್ಲೊಬ್ಬ ವಿದ್ವಾಂಸನ ಬಳಿಯಲ್ಲಿ ಓದಿದರು. ಹನ್ನೆರಡು ವರ್ಷ ಒಂದೇ ಸಮನಾಗಿ ಓದಿ ವಿದ್ಯಾವಂತರಾದರು. ಗುರುವಿನ ಅಪ್ಪಣೆ ಪಡೆದು ಸ್ವದೇಶಕ್ಕೆ ಹಿಂತಿರುಗಿ ಬಂದರು.

ಅವರು ಅಷ್ಟುದೂರ ಬರುವುದರೊಳಗಾಗಿ ಅಲ್ಲೊಂದು ಕಾಡು ದಾರಿಯು ಸಿಕ್ಕಿತು. ಅವರೆಲ್ಲ ಅಲ್ಲಿಯೇ ಕುಳಿತು "ಯಾವ ಮಾರ್ಗವಾಗಿ ಹೋಗಬೇಕು ?" ಎಂದು ವಿಚಾರ ಮಾಡಿದರು. ಅವರಲ್ಲೊಬ್ಬನು "ಸಂದೇಹವೇಕೆ ? ಶಾಸ್ತ್ರವು ಹೇಳಿಲ್ಲವೆ, ಬಹುಜನ ನಡೆವುದೆ ಹಾದಿ" ಎಂದು ? ಅದರಿಂದ ಸಂಶಯ ಪಡಬೇಕಾಗಿಲ್ಲ." ಎಂದನು.

ಆ ವೇಳೆಗೆ ಸರಿಯಾಗಿ ಸಮೀಪದಲ್ಲಿದ್ದ ಊರಿನಲ್ಲಿ ಸತ್ತು ಹೋದ ಒಬ್ಬ ದೊಡ್ಡ ವ್ಯಾಪಾರಿಯ ಹೆಣವನ್ನು ಹೊತ್ತುಕೊಂಡು ಅತ್ತ ಬಂದರು. ಹೆಣದ ಜೊತೆಯಲ್ಲಿ ಬೇಕಾದಷ್ಟು ಜನರು ಇದ್ದ ಶಾಸ್ತ್ರಜ್ಞರು ಎಳ್ಳಷ್ಟೂ ಸಂದೇಹ ಪಡದೆ ಆ ಜನರ ಗುಂಪನ್ನು ಹಿಂಬಾಲಿಸಿ ಅವರೊಡನೆ ಸ್ಮಶಾನಕ್ಕೆ ಬಂದರು.

ಅಲ್ಲಿ ಒಂದು ಕತ್ತೆಯು ನಿಂತಿತ್ತು. ಅವರಲ್ಲೊಬ್ಬನು ಪುಸ್ತಕವನ್ನು ತೆಗೆದು ನೋಡಲು, ಅದರಲ್ಲಿ ಒಂದು ಶ್ಲೋಕವಿದ್ದುದನ್ನು ಓದಿದನು.

ಉತ್ಸವೇ ವ್ಯಸನೇ ಪ್ರಾಪ್ತೇ ದುರ್ಭಿಕ್ಷೇ ಶತ್ರು ಸಂಕಟೇ |
ರಾಜದ್ವಾರೇ ಸ್ಮಶಾನೇ ಚ ಯಸ್ತಿಷ್ಠತಿ ಸಬಾಂಧವಃ ||

ಅದಕ್ಕೆ ಇನ್ನೊಬ್ಬನು ಅರ್ಥವನ್ನು ಹೇಳಿದನು: "ಉತ್ಸವ ವ್ಯಸನ, ದುರ್ಭಿಕ್ಷ, ಶತ್ರುಗಳಿಂದ ಸಂಕಟ, ಇವುಗಳು ಬಂದಾಗಲೂ, ಅರಮನೆ ಸ್ಮಶಾನಗಳಲ್ಲಿಯೂ ಯಾವನು ಜೊತೆಯಲ್ಲಿರುವನೋ ಅವನೇ ಬಾಂಧವನು." ಮೂವರೂ ಸೇರಿ "ಸರಿ, ಇವನೇ ನಮ್ಮ ಬಾಂಧವನು" ಎಂದು ಅದರ ಕತ್ತಿಗೆ ಗಂಟು ಬಿದ್ದು ಅದಕ್ಕೆ ಕಾಲು ತೊಳೆದು ಉಪಚಾರ ಮಾಡಿದರು.

ಅಷ್ಟರಲ್ಲಿ ಒಬ್ಬನು ಅತ್ತ ಕಡೆ ತಿರುಗಿ ನೋಡಿದನು. ಅಲ್ಲಿ ಒಂದು ಒಂಟೆಯು ಬರುವುದು ಕಾಣಿಸಿತು. ಇದೇನು ಎನ್ನಿಸಲು, ಮೂರನೆಯವನು ಪುಸ್ತಕವನ್ನು ತೆಗೆದು "ಧರ್ಮಕ್ಕೆ ನಡೆ ಚುರ " ಎಂದು ಹೇಳಿದೆ. ಇದು ಚುರುಕಾಗಿ ನಡೆಯುತ್ತಿದೆ. ಅದ ಇದೇ ಧರ್ಮವಿರಬೇಕು." ಎಂದನು. ಕೊನೆಯವನು "ಹೌದು ಹೌದು, ಅಲ್ಲದೆ, ಗೆಳೆಯನ ಜೋಡಿಸು ಧರ್ಮದೊಳು



ಎಂದೂ ಹೇಳಿದೆ. ಅದರಿಂದ ಹಾಗೆ ಮಾಡೋಣ'' ಎಂದು ಕತ್ತೆಯನ್ನು ಎಳೆದು ಕೊಂಡು ಹೋಗಿ ಒಂಟೆಯ ಕತ್ತಿಗೆ ಬಿಗಿದರು.

ಇದು ಕತ್ತೆಯ ಒಡೆಯನಾದ ಅಗಸನಿಗೆ ತಿಳಿದು, ಅವನು ಇವರನ್ನು ಹೊಡೆಯಲು ಬಂದನು. ಇವರು ಅಲ್ಲಿಂದ ಕೆಟ್ಟೆವೋ ಎಂದು ಬಿದ್ದೋಡಿದರು. ದಾರಿಯಲ್ಲಿ ಒಂದು ನದಿಯು ಸಿಕ್ಕಿತು. ಆ ನದಿಯ ನೀರಿನ ನಡುವೆ ಒಂದು ಮುತ್ತುಗದ ಎಲೆಯು ಕೊಚ್ಚಿಕೊಂಡು ಹೋಗುತ್ತಿರಲು ಅದನ್ನು ಕಂಡು ಒಬ್ಬನು ‹‹ಬರುವ ಪತ್ರವು ನಮ್ಮ ದಾಟಿಪುದು'' ಎಂದು ಹೇಳಿದೆ ಎನ್ನುತ್ತಾ ಅದರ ಮೇಲೆ ಹಾರಿ ನೀರಿನಲ್ಲಿ ಕೊಚ್ಚಿ ಹೋದನು. ಅದನ್ನು ಕಂಡು ಇನ್ನೊಬ್ಬನು.

ಎಲ್ಲವು ಹೋಗುವ ಸಮಯದಲರ್ಧವನು |
ಬಿಟ್ಟರ್ಧವನುಳಿಸುವನೇ ಪಂಡಿತನು ||
ಅರೆಬರೆಯಾದರು ನಡೆವುದು ಕಾರ್ಯವು |
ಎಲ್ಲವು ಹೋದರೆ ದುಃಖವು ದುಸ್ಸಹವು || ೧೯ ||

ಅದರಿಂದ ಹಾಗೆಯಾದರೂ ಮಾಡಬೇಕು'' ಎಂದು ಕೊಚ್ಚಿ ಹೋಗುತ್ತಿದ್ದವನನ್ನು ಕೂದಲು ಹಿಡಿದುಕೊಂಡು ತಲೆಯನ್ನು ಕೊಯ್ದು ಕೊಂಡನು.

ಅಲ್ಲಿಂದವರು ಹಾಗೆಯೇ ಹೋಗುತ್ತ ಒಂದು ಗ್ರಾಮಕ್ಕೆ ಬಂದರು. ಪಂಡಿತರು ಬಂದರಲ್ಲಾ ಎಂದು ಗ್ರಾಮದವರು ಒಬ್ಬೊಬ್ಬರು ಒಬ್ಬೊಬ್ಬರನ್ನು ಊಟಕ್ಕೆ ಕರೆದರು. ಒಬ್ಬನಿಗೆ ಶ್ಯಾವಿಗೆಯನ್ನು ಬಡಿಸಿ ಬೇಕಾದ ಹಾಗೆ ತುಪ್ಪವನ್ನು ಹಾಕಿದರು. ಅವನಿಗೆ ಆಗ:—

"ಬೆಳದಷ್ಟೂ ನಾಶವು ನಿಜವು"

ಎಂಬ ಪಂಕ್ತಿಯು ನೆನಪಿಗೆ ಬಂದು, ಊಟವೇ ಬೇಡ ಎನ್ನಿಸಿ ಅವನು ಹೊರಟು ಬಂದನು. ಎರಡನೆಯವನು ಹೋಗಿದ್ದ ಕಡೆ ಅವನಿಗೆ ಅಗಲವಾದ ಮಂಡಿಗೆಯನ್ನು ಬಡಿಸಿದರು. ಅವನಿಗೆ ಆ ಅಗಲವಾದ ಮಂಡಿಗೆಯನ್ನು ಕಂಡು,

ಅಗಲವು ಅಗಲವು ಅಗಲವೆ ಆಗೆ |
ಬಂದಿತು ತಪ್ಪದೆ ಜೀವಕೆ ಬೇಗೆ ||

ಎಂಬ ಪಂಕ್ತಿಯು ನೆನೆಪಾಯಿತು. "ಛೀ, ಛೀ, ಇದನ್ನು ತಿಂದ ಜೀವಕ್ಕೆ ಸಂಚಕಾರ ತಂದುಕೊಳ್ಳುವುದು ಬೇಡ" ಎನ್ನಿಸಿ, ಅವನು ಊಟ ಬಿಟ್ಟು ಹೊರಟು ಬಂದನು. ಮೂರನೆಯವನಿಗೆ ಉದ್ದಿನ ವಡೆಯನ್ನು ಬಡಿಸಿದರು. ತೂತಿರುವ ವಡೆಯನ್ನು ಕಂಡು, ಅವನಿಗೆ

ತೂತು ತತಾ ತೂತಾದರೆ ನೋಡು ||
ತಪ್ಪದನರ್ಥವು ಅಲ್ಲಿಂದೋಡು ||

ಎಂಬ ಸಾಲು ನೆನೆಪಾಗಿ ಅಲ್ಲಿಂದ ಓಡಿದನು.

ಹೀಗೆ ಮೂವರೂ ಇಟ್ಟಿದ್ದ ಊಟವನ್ನು ಬಿಟ್ಟು ಬಂದು ಹಸಿವಿನಿಂದ ಕಂಗೆಟ್ಟು, ಎಲ್ಲರಿಂದಲೂ ಹಾಸ್ಯಮಾಡಿಸಿಕೊಳ್ಳುತ್ತಾ ಹೇಗೆ ಹೇಗೋ ಮಾಡಿ ಸ್ವದೇಶಕ್ಕೆ ಬಂದರು. ಹಾಗೆಯೇ ನೀನೂ ಕೂಡ ಲೋಕವ್ಯವಹಾರವನ್ನು ತಿಳಿಯದೆ, ನಾನು ಬೇಡ ಬೇಡವೆಂ

ದರೂ ಕೇಳದೆ ಈ ಸ್ಥಿತಿಗೆ ಬಂದೆ. ಆದರಿಂದ ನಾನು ಹಾಗೆ ಹೇಳಿದೆನು." ಎಂದನು. ಚಕ್ರಧರನು. " ನೀನು ಹೇಳುವುದು ಅಷ್ಟೇನೂ ಸರಿಯಲ್ಲ. ಬಹು ಬುದ್ಧಿಗಳಾದವರನ್ನು ದುಷ್ಟ.ದೈವವು ಕೆಡಿಸುವುದು. ಸ್ವಲ್ಪ ಬುದ್ಧಿಗಳಾದವರು ಸುಖವಾಗಿರುವರು, ಕೇಳು.

ನೆತ್ತಿಯೊಳು ಶತಬುದ್ಧಿ | ಕರದೊಳು ಸಹಸ್ರಬುದ್ಧಿ ||
ನಾನಾಡುವೆ ನಿರ್ಮಲ | ಜಲದಲ್ಲಿ ಏಕಬುದ್ಧಿ || ೨೦ ||

ಎಂದನು. ಸುವರ್ಣಸಿದ್ಧಿಯು " ಅದೇನು " ಎಂದು ಕೇಳಿದನು. ಅವನು ಹೇಳಿದನು:—



## ಮೂವರು ಬುದ್ಧಿಗಳ ಕಥೆ

ಒಂದಾನೊಂದು ಕೊಳದಲ್ಲಿ ಶತಬುದ್ಧಿ ಸಹಸ್ರಬುದ್ಧಿ, ಎಂಬ ಎರಡು ಮೀನುಗಳು ಇದ್ದುವು. ಅವಕ್ಕೆ ಸ್ನೇಹಿತನಾಗಿ ಏಕಬುದ್ಧಿ ಎಂಬ ಒಂದು ಕಪ್ಪೆಯು ಇತ್ತು. ಅವು ಮೂರೂ ಕೊಳದ ತೀರಕ್ಕೆ ಬಂದು ಬಂದು ಅಷ್ಟು ಹೊತ್ತು ಸುಖವಾಗಿ ಮಾತನಾಡುತ್ತ ಸ್ವಲ್ಪ ಹೊತ್ತು ಕುಳಿತಿದ್ದು ಹೋಗುವವು.



ಹೀಗೆ ಇರುತ್ತಿರಲು ಒಂದು ದಿನ ಬೆಸ್ತರು ಬಲೆಗಳನ್ನೂ ಮೀನಿನ ಬುಟ್ಟಿಗಳನ್ನೂ ಹೊತ್ತುಕೊಂಡು ಸಂಜೆಯ ಸುಮಾರಿನಲ್ಲಿ ಅತ್ತಕಡೆ

ಬಂದರು. ಅವರು ಆ ಕೊಳವನ್ನು ಕಂಡು, "ಇಲ್ಲಿ ಮೀನು ಬೇಕಾದಹಾಗೆ ಇದೆ, ನೀರೂ ಕೊಂಚವೇ ಇದೆ. ನಾಳೆ ಬೆಳಿಗ್ಗೆ ಇಲ್ಲಿಗೇ ಬರೋಣ" ಎಂದು ಮಾತನಾಡಿಕೊಂಡು ಹೋದರು.

ಅದನ್ನು ಕೇಳಿ ಮೀನುಗಳು ಇನ್ನೇನು ಗತಿ ಎಂದು ಹೆದರಿದುವು. ಕಪ್ಪೆಯು ಸ್ನೇಹಿತರನ್ನು ಕರೆದು, "ಬೆಸ್ತರು ಹೇಳಿದುದನ್ನು ಕೇಳಿದಿರಾ? ಮುಂದೇನು ಮಾಡಬೇಕೆಂದಿರುವಿರಿ? ಓಡಿಹೋಗುವುದೇ ಸರಿಎನ್ನಿಸುತ್ತದೆ. ನೀವೆಲ್ಲ ಯೋಚನೆ ಮಾಡಿ ಏನು ಮಾಡಬೇಕೋ ಹೇಳಿ" ಎಂದಿತು. ಸಹಸ್ರಬುದ್ಧಿಯು "ಮಿತ್ರ ಹೆದರಬೇಡ, ಮಾತಿಗೆ ಭೀತಿ ಪಟ್ಟರೆ ಹೇಗೆ? ಕೇಳಿಲ್ಲವೇ?

ಖಲರು ಸರ್ಪಗಳು ದುಷ್ಟ ಬುದ್ಧಿಗಳು |
ನೆನೆದ ಕಾರ್ಯಗಳು ನಿಜದಿ ಸಿದ್ಧಿಸವು ||
ಉಳಿದಿಹುದು ಲೋಕ ನೋಡು ಅದರಿಂದ || ೨೧ ||

ಅದರಿಂದ, ಅವರು ನಾಳೆ ಬರದೆಯೇ ಹೋಗಬಹುದು. ಹಾಗೆ ಬಂದರೂ ನನ್ನ ಬುದ್ಧಿಯ ಬಲದಿಂದ ನಿನ್ನನ್ನು ಕಾಪಾಡುವೆನು." ಎಂದಿತು. ಶತಬುದ್ಧಿಯೂ ಅದನ್ನೇ ಒಪ್ಪಿತು. ಮತ್ತೂ ಹೇಳಿತು. "ಕೇಳಿಲ್ಲವೇ?

ಬುದ್ಧಿವಂತಗೆ ಸಿದ್ಧಿಸದ ಕಾರ್ಯಮಿಲ್ಲ |
ಕತ್ತಿಯನ್ನು ಹಿಡದಿದ್ದ ನಂದರೆಲ್ಲ ||
ಚಾಣಕ್ಯ ಬುದ್ಧಿಗೇ ತುತ್ತಾದರಲ್ಲ || ೨೨ ||

ಅಲ್ಲದೆ, ಸೂರ್ಯನ ಕಿರಣಗಳಾಡದೆಡೆ । ಗಾಳಿಯು ಸುಳಿಯದೆಡೆ ||
ಫಲಿಪುದು ಧೀಮಂತರ ಬುದ್ಧಿಯು ತಪ್ಪದೆ ನೋಡುವೊಡೆ || ೨೩ ||

ಅದರಿಂದ, ಅವರಾಡಿದ ಮಾತಿಗಂಜಿ, ಹಿರಿಯರ ಕಾಲದಿಂದ ಬಂದಿರುವ ಜನ್ಮಭೂಮಿಯನ್ನು ಬಿಟ್ಟು ಹೋಗುವುದೆ? ಕೇಳಿಲ್ಲವೆ?

ದಿವ್ಯಸುಖವನ್ನು ಕೊಡುವ ಸ್ವರ್ಗಕ್ಕಿಂತ ಜನ್ಮವನ್ನು ಕೊಟ್ಟ ಪಾತಾಳವೇ ಮೇಲು ಎಂದು? ಅದರಿಂದ ಎಲ್ಲೂ ಹೋಗಬಾರದು. ನಾವಿರುವಾಗ ನಿನಗೇನು?'' ಎಂದಿತು.

ಕಪ್ಪೆಯು ಅದನ್ನು ಒಪ್ಪದೆ ''ಅಯ್ಯಾ, ನೀವೇನೇ ಹೇಳಿ, ನಾನು ಏಕ ಬುದ್ಧಿಯು. ನನಗೆ ಪಲಾಯನವೇ ಸರಿಯೆಂದು ತೋರುವುದು'' ಎಂದು ಹೇಳಿ, ಆ ರಾತ್ರಿಯೇ ಹೆಂಡತಿ ಮಕ್ಕಳನ್ನು ಕರೆದು ಕೊಂಡು ಎಲ್ಲಿಗೋ ಹೋಯಿತು.

ಬೆಳಗಾಗುತ್ತಲೂ ಬೆಸ್ತರು ಬಂದರು. ಶತಬುದ್ಧಿ ಸಹಸ್ರ ಬುದ್ಧಿಗಳು ತಮ್ಮ ಬುದ್ಧಿಯನ್ನೆಲ್ಲಾ ತೋರಿಸಿದರೂ ಫಲವಾಗಲಿಲ್ಲ: ಕೊನೆಗೆ ಬಲೆಯಲ್ಲಿ ಸಿಕ್ಕಿ ಸತ್ತುವು. ಒಬ್ಬನು ಶತಬುದ್ಧಿಯನ್ನು ತಲೆಯ ಮೇಲೆ ಹೊತ್ತುಕೊಂಡನು. ಇನ್ನೊಬ್ಬನು ಸಹಸ್ರ ಬುದ್ಧಿಯನ್ನು ಕೈಯಲ್ಲಿ ಹಿಡಿದುಕೊಂಡನು. ಅವರು ಹೋಗುತ್ತಿದ್ದಾಗ ಕಪ್ಪೆಯು ಹೆಂಡತಿಯನ್ನು ಕರೆದು ನೋಡು ಎಂದು ತೋರಿಸಿತು. ಆದರಿಂದ ಹಾಗೆ ಹೇಳಿದೆನೆಂದನು. ಅದನ್ನು ಕೇಳಿ ಸುವರ್ಣಸಿದ್ಧಿಯು ''ನಿನ್ನ ಮಾತನ್ನು ಒಪ್ಪಿಕೊಂಡು ಬುದ್ಧಿಯು ಮಾತ್ರವೇ ಸಾಲದು'' ಎಂದರೂ ಸ್ನೇಹಿತರ ಮಾತನ್ನಾದರೂ ಕೇಳಬೇಕು. ನೀನು ಲೋಭದಿಂದ ನನ್ನ ಮಾತನ್ನು ಕೇಳದೆ ಅಹಂಕಾರದಿಂದ ಕೆಟ್ಟೆ. ಕೇಳಿಲ್ಲವೆ?

ಬೇಡೆಂದರೆ ಬಿಡದೇ ಹಾಡಿದ ಮಾವನಿಗೆ |
ಬೀಸುವ ಕಲ್ಲಿನ ಸರವಾಯಿತು ಕೊರಳೊಳಗೆ || ೨೮ ||

ಚಕ್ರಧರನು ''ಅದೇನು?'' ಎಂದು ಕೇಳಿದನು. ಸುವರ್ಣ ಸಿದ್ಧಿಯು ಹೇಳಿದನು:

———

# ಹಾಡುವ ಕತ್ತೆಯ ಕಥೆ

ಒಂದೂರಿನಲ್ಲಿ ಒಂದು ಕತ್ತೆಯಿತ್ತು. ಅದು ಹಗಲುಹೊತ್ತು ಅಗಸನ ಮನೆಯಲ್ಲಿ ಭಾರಗಳನ್ನು ಹೊರುವುದು: ರಾತ್ರಿಯಹೊತ್ತು ಮನ ಬಂದಂತೆ ಅಲೆಯುವುದು: ಮತ್ತೆ ಬೆಳಗಾಗುತ್ತಲೂ ಅಗಸನ ಮನೆಗೇ ಬಂದುಬಿಡುವುದು.

ಹೀಗಿರಲು, ರಾತ್ರಿಯ ಹೊತ್ತು ಸ್ವೇಚ್ಛೆಯಾಗಿ ತಿರುಗುವ ಕತ್ತೆಗೂ ಒಂದು ನರಿಗೂ ಸ್ನೇಹವು ಬೆಳೆಯಿತು. ಅವೆರಡೂ ನಿತ್ಯವೂ ಇರುಳು ಎಲ್ಲೆಂದರಲ್ಲಿ ಮೇದುಕೊಂಡು ಸುಖವಾಗಿದ್ದುವು. ಒಂದು ದಿನ ಎರಡೂ ಸೌತೆಯಕಾಯಿ ಬೆಳೆದಿರುವ ಹೊಲಕ್ಕೆ ನುಗ್ಗಿವೆ: ಆನಂದವಾಗಿ ಮೆಯ್ದಿವೆ: ಆ ಹೊತ್ತಿಗೆ ಸರಿಯಾಗಿ ಚಂದ್ರನು ಹುಟ್ಟಿ ಬೆಳುದಿಂಗಳು ಎಲ್ಲೆಲ್ಲೂ ಹರಡಿತು. ತಂಗಾಳಿಯು ಬೀಸಿತು. ಆಗ ಕತ್ತೆಗೆ ಒಂದು ಹಾಡು ಹಾಡಬೇಕು ಎನ್ನಿಸಿತು. ನರಿಯನ್ನು ಕರೆದು, "ಮಿತ್ರ, ಹಾಡಬೇಕು ಎನ್ನಿಸುತ್ತಿದೆ. ಏನು ಮಾಡಲಿ?" ಎಂದು ಜಂಭವಾಗಿ ಕೇಳಿತು. ಅದಕ್ಕೆ ಆ ನರಿಯು "ಮಾವ, ಬಾಯಿಬಿಟ್ಟೀಯೇ! ಕದಿಯುವುದಕ್ಕೆ ಬಂದವರು ಬಾಯಿ ಹೊಲಿದುಕೊಂಡಿರಬೇಕು. ಅಲ್ಲದೆ, ನಿನ್ನ ಸ್ವರವೂ ಚೆನ್ನಾಗಿಲ್ಲ. ನೀನು ಕೂಗಿದರೆ ದೂರದಲ್ಲಿದ್ದವರಿಗೂ ಕೇಳಿಸಿ ನಿನ್ನ ಕೆಲಸವು ಮುಗಿಯುವುದು. ಸುಮ್ಮನಿದ್ದು ಬೇಕಾದಷ್ಟು ತಿಂದು ಹೋಗೋಣ." ಎಂದು ಎಷ್ಟೋ ಹೇಳಿತು.

ಕತ್ತೆಯು ಅದನ್ನು ಕೇಳಿ "ಎಷ್ಟೇ ಆಗಲಿ ನೀನು ಕಾಡಿನ ಜಂತು. ನಿನಗೆ ಸಂಗೀತದ ಸೊಗಸೇನು ಗೊತ್ತು?"

ಕತ್ತಲನು ಚಂದ್ರಿಕೆಯು ದೂಡಿದಂದು |
ಪ್ರಿಯ ಜನರು ಪ್ರೀತಿಯಿಂ ಸೇರಿದಂದು ||
ಸಂಗೀತ ಕೇಳದಿರೆ ಧನ್ಯತೆಂತು ? || ೨೫ ||



ಎಂದಿತು. ನರಿಯು "ಮಾವ ಅದಿರಲಿ, ನಿನಗೆ ಸಂಗೀತವೇನು ಗೊತ್ತು? ಸುಮ್ಮನೆ ಅರಚುವೆ. ಅದರಿಂದ ನಮ್ಮ ಕೆಲಸವು ಕೆಡುವುದು. ಅಷ್ಟೇ ಫಲ." ಎಂದಿತು. ಕತ್ತೆಗೆ ಕೋಪ ಬಂದು "ನನಗೆ ಸಂಗೀತವು ತಿಳಿಯದೆ? ಸಪ್ತ ಸ್ವರಗಳು, ತಾಳಗಳು ನಲವತ್ತೊಂಭತ್ತು, ಐವತ್ತಮೂರು ರಾಗಗಳು, ಭರತ ಮುನಿಯು ಇದರ ಕರ್ತೃ. ಇನ್ನೇನು ಬೇಕು ಕೇಳು" ಎಂದು ಗದರಿಸಿತು. ನರಿಯು "ಹಾಗಾದರೆ, ಮಾವ, ನಾನು ಕಾವಲಿನವನು ಬರುವುದನ್ನು ನೋಡಿಕೊಳ್ಳುತ್ತಾ ದೂರದಲ್ಲಿ ಕಾಯ್ದುಕೊಂಡಿರುವೆನು. ನಿನಗೆ ತೋರಿದ ಹಾಗೆ ಹಾಡಿಕೋ" ಎಂದು ತಾನು ದೂರವಾಗಿ ಹೋಯಿತು. ಕತ್ತೆಯೂ ಹಾಡಿತು.

ಅದನ್ನು ಕೇಳಿ ಹೊಲದ ಯಜಮಾನನು ದೊಣ್ಣೆಯನ್ನು ಎತ್ತಿಕೊಂಡು ಬಂದು ಚೆನ್ನಾಗಿ ಹೊಡೆದು ನೆಲಕ್ಕೆ ಕೆಡವಿ, ಒಂದು ಬೀಸುವ ಕಲ್ಲನ್ನು ಅದರ ಕತ್ತಿಗೆ ಕಟ್ಟಿದನು. ಕತ್ತೆಯೂ ಒಂದು ಘಳಿಗೆ ನೋವನ್ನು ಅನುಭವಿಸುತ್ತಿದ್ದು ಮತ್ತೆ ಎದ್ದು ಹೊರಟಿತು.

ನಾಯಿ ಕತ್ತೆಯು ಕುದುರೆ | ಎಲ್ಲಕಿಂತಲು ಕತ್ತೆ ||
ಹೊಡೆದ ಏಟಿನ ನೋವ | ಕಳೆದುಕೊಂಬುವು ಕೂಡಲೆ || ೨೬ ||

ನರಿಯು ದೂರದಿಂದ ಅದನ್ನು ನೋಡಿ ಹೇಳಿತು;

ಬೇಡೆಂದರೆ ಬಿಡದೇ ಹಾಡಿದ ಮಾವನಿಗೆ ।
ಬೀಸುವ ಕಲ್ಲಿನ ಸರವಾಯಿತು ಕೊರಳೊಳಗೆ ॥

"ನೀನೂ ಹಾಗೆಯೇ ಹೇಳಿದ ಮಾತು ಕೇಳದೆ ಹೀಗಾದೆ" ಎನ್ನಲು ಚಕ್ರಧರನು "ಹೌದು ಹೌದು" ಕೇಳಿಲ್ಲವೇ?

ತನಗುಂ ಮತಿಯಿಲ್ಲದೆ । ಮಿತ್ರನ ನುಡಿಕೇಳದೆ ॥
ನಡೆದರೆ ಮರಣವೆ ಫಲ । ಮಂಥರಗಾಹಂತೆ ॥ ೨೭ ॥

ಸುವರ್ಣಸಿದ್ಧಿಯು ಕೇಳಿದನು; "ಅದೆಂತು?" ಚಕ್ರಧರನು ಹೇಳಿದನು:—

## ಮಂಥರನ ಕಥೆ

ಒಂದೂರಿನಲ್ಲಿ ಮಂಥರನೆಂಬ ನೇಗೆಯವನಿದ್ದನು. ಒಂದು ದಿನ ಅವನ ಮಗ್ಗದ ಮರಮುಟ್ಟುಗಳೆಲ್ಲಾ ಮುರಿದು ಹೋಯಿತು. ಆದರಿಂದ ಮರವನ್ನು ತರಬೇಕೆಂದು ಒಂದು ಕೊಡಲಿ ತೆಗೆದು ಕೊಂಡು ಕಾಡಿಗೆ ಹೊರಟನು. ಹಾಗೆಯೇ ತಿರುಗುತ್ತಾ ಸಮುದ್ರ ತೀರಕ್ಕೆ ಬಂದು, ಅಲ್ಲೊಂದು ಮರವನ್ನು ಕಂಡು ಅದನ್ನು ಕತ್ತರಿಸಬೇಕು ಎಂದುಕೊಂಡನು. ಆ ಮರದಲ್ಲಿ ಒಂದು ಯಕ್ಷವು ಇತ್ತು. ಅದು ನೇಗೆಯವನ ಇಷ್ಟವನ್ನು ತಿಳಿದು ಅವನಿಗೆ ಕಾಣಿಸಿಕೊಂಡು "ಅಯ್ಯಾ, ಇದರಲ್ಲಿ ನಾನಿರುವೆನು. ಬೇರೆ ಮರವನ್ನು ನೋಡಿಕೊ. ಇಲ್ಲಿ ಸಮುದ್ರದ ಮೇಲಿನಿಂದ ಗಾಳಿಯು ಬೀಸುತ್ತ ನನಗೆ ಸುಖವಾಗಿರುವುದು." ಎಂದು ಕೇಳಿಕೊಂಡಿತು. ನೇಗೆಯವನು "ಅಯ್ಯಾ, ನಿಜ, ನಿನ್ನ ಸುಖ ನೋಡಿದರೆ ನನಗೇನು ಗತಿ? ದಿನವೂ ಮಗ್ಗ ನಡೆಯದಿದ್ದರೆ ನನ್ನ ಜೀವನ ಹೇಗೆ ಹೇಳು. ಇದೊಂದು ಮರ ಕಡಿದರೆ ನನಗೆ ಬೇಕಾದ ಪದಾರ್ಥಗಳೆಲ್ಲ ಆಗುವುವು." ಎಂದನು. ಯಕ್ಷವು "ಅಯ್ಯಾ, ಈ ಮರವನ್ನು ಬಿಡು. ನಿನಗೆ ಬೇಕಾದ ವರವನ್ನು ಕೊಡುವೆನು." ಎಂದಿತು. ನೇಗೆಯವನು "ಆಗಬಹುದು. ಆದರೆ ಹೋಗಿ ನನಗೆ ಬೇಕಾದ ವರವನ್ನು ಕೇಳಿಕೊಂಡು ಬಂದು ವರವನ್ನು ಕೇಳುವೆನು." ಎಂದನು. ಯಕ್ಷವು ಒಪ್ಪಿತು.

ಅವನು ಬರುತ್ತ ದಾರಿಯಲ್ಲಿ ಅವನ ಸ್ನೇಹಿತನಾದ ನಾಪಿತನು ಸಿಕ್ಕಿದನು. ಅವನಿಗೆ ಎಲ್ಲವನ್ನೂ ಹೇಳಿ "ಏನು ವರವನ್ನು ಕೇಳಲಿ?" ಎನ್ನಲು, ಅವನು "ಒಂದು ರಾಜ್ಯವನ್ನು ಕೇಳಿಕೊ. ನೀನು ಅರಸು, ನಾನು ಮಂತ್ರಿ, ಆಗಿ ಸುಖವಾಗಿರೋಣ." ಎಂದನು. ನೇಗೆಯವನು "ಆಗಲಿ, ನನ್ನ ಹೆಂಡತಿಯನ್ನೂ ಕೇಳುವೆನು. ಅವಳೇನು ಹೇಳುವಳೋ ನೋಡೋಣ." ಎಂದನು. ಅವನು ಬೇಡ ಬೇಡ ಎಂದು ಎಷ್ಟು ಹೇಳಿದರೂ ಕೇಳಲಿಲ್ಲ.

ಅವನು ಬಂದು ಹೆಂಡತಿಗೆ ಹೇಳಿದನು: ನಾಪಿತನು ಹೇಳಿದು ದನ್ನು ಕೇಳಿ, ಅವಳು "ಯಾರನ್ನು ಕೇಳಿದರೂ ಕೇಳಬಹುದು. ಅವನನ್ನು ಕೇಳುವುದೆ? ರಾಜ್ಯವೆಂದರೇನು? ಸುಮ್ಮನಾಯಿತೆ? ರಾಮನ ಗತಿ ಏನಾಯಿತು? ಪಾಂಡವರಿಗೇನಾಯಿತು? ರಾಜ ನಾದರೆ ಅಣ್ಣ ತಮ್ಮಂದಿರು, ಪುತ್ರ ಮಿತ್ರರು, ಕೂಡ ಅವನನ್ನು ರಾಜ್ಯಕ್ಕಾಗಿ ಕೊಲ್ಲುವುದಕ್ಕೆ ಸಿದ್ಧರಾಗಿರುವರು. ಅದರಿಂದ ರಾಜ್ಯ ಬೇಡ. ಈಗ ನಿನಗೆ ಒಂದು ತಲೆ ಎರಡು ತೋಳು ಇವೆ. ಇದ ರಿಂದ ಒಂದು ದುಪ್ಪಟಿಯನ್ನು ನೇಯುವೆ. ಹೋಗಿ ಇನ್ನೊಂದು ತಲೆ, ಇನ್ನೆರಡು ತೋಳು ಕೇಳಿಕೊ. ಆಗ ಎರಡು ದುಪ್ಪಟಿ ಗಳಾಗುವುವು. ಒಂದನ್ನು ಮಾರಿದರೆ ಮನೆಯ ವೆಚ್ಚಕ್ಕಾಗುವುದು: ಇನ್ನೊಂದು ಮಾರಿದರೆ ಸುಖಕ್ಕಾಗುವುದು. ನಮಗೆ ಅಷ್ಟು ಸಾಕು." ಎಂದಳು.

ನೇಗೆಯವನಿಗೆ ಹೆಂಡತಿಯ ಮಾತು ಸರಿ ಎನ್ನಿಸಿತು. ಅದ ರಂತೆ ಹೋಗಿ ಯಕ್ಷನನ್ನು ಕೇಳಲು, ಅದು ಹಾಗೆಯೇ ಆಗಲಿ ಎಂದು ವರವನ್ನು ಕೊಟ್ಟಿತು. ನೇಗೆಯವನಿಗೆ ಎರಡನೆಯ ತಲೆ ಇನ್ನೆರಡು ತೋಳು ಹುಟ್ಟಿದುವು. ವರವು ಸಿಕ್ಕಿತೆಂದು ಸಂತೋಷ ದಿಂದ ಅವನೂ ಊರಿಗೆ ಬಂದನು. ಆದರೆ ಊರಿನವರು "ಇದು ಯಾವುದೋ ಭೂತ, ನಮ್ಮ ಊರಿಗೆ ಬರುತ್ತಿದೆ" ಎಂದು ಕಲ್ಲು

ಹೊಡೆದು ಅವನನ್ನು ಕೊಂದರು. ಅದರಿಂದ "ತನಗುಂ ಮತಿ ಯಿಲ್ಲದೆ" ಎಂಬ ಗಾದೆಯನ್ನು ಹೇಳಿದೆನು. ನಿಜ, ಯಾರೇ ಆಗಲಿ, ಆಶಾ ಪಿಶಾಚಿಯು ಹಿಡಿದಾಗ ಅಪಹಾಸ್ಯಕ್ಕೆ ಗುರಿಯಾಗು ವರು. ಸಂದೇಹವೇನು ? ಕೇಳಿಲ್ಲವೆ ? :—

ಫಲಿಸದ ಕಾರ್ಯದ ಫಲವಂ ಚಿಂತಿಸಿ |
ಕೆಲಸವ ಮಾಡುವೆನೆನ್ನಲು ನಿಜವಾಗಿ ||
ಅಪಜಯ ತಪ್ಪದು ತಪ್ಪದು ನಗೆಪಾಡು |
ಸೋಮನ ತಂದೆಯು ಸಾಕ್ಷಿಯು ತಾನಿದಕೆ || ೨೮ ||

ಎಂದನು. ಸುವರ್ಣಸಿದ್ಧಿಯು "ಅದು ಹೇಗೆ?" ಎನ್ನಲು, ಚಕ್ರಧರನು ಹೇಳಿದನು.



## ಸೋಮನ ತಂದೆಯ ಕಥೆ

ಒಂದೂರಿನಲ್ಲಿ ಒಬ್ಬ ಬಡವನು ಇದ್ದನು. ಅವನು ದಿನವೂ ತಿರುಪಕ್ಕೆ ಹೋಗಿ ಹಿಟ್ಟನ್ನು ತರುವನು. ತನ್ನ ಹೊಟ್ಟೆ ಗಾಗಿ ಉಳಿದುದನ್ನು ಒಂದು ಮಡಿಕೆಯಲ್ಲಿ ಹಾಕಿ, ತನ್ನ ಮಲಗುವ ಕಡೆ ಅದನ್ನು ಒಂದು ಗೂಟಕ್ಕೆ ನೇತು ಹಾಕಿದ್ದನು. ಅದನ್ನು ಆಗಾಗ ನೋಡುತ್ತಿದ್ದರೆ ಅವನಿಗೆ ಏನೋ ಒಂದು ಸಂತೋಷ.

ಒಂದು ರಾತ್ರಿ ಅವನಿಗೆ ಹಿಟ್ಟಿನ ಮಡಿಕೆಯನ್ನು ನೋಡಿ ಹಾಗೆಯೇ ಒಂದು ಯೋಚನೆ ಬಂತು: "ಈ ಮಡಕೆಯೇನೋ ಹಿಟ್ಟಿನಿಂದ ತುಂಬಿತು. ಏನಾದರೂ ದುರ್ಭಿಕ್ಷ ಬಂದರೆ, ಇದಿಷ್ಟು ಹಿಟ್ಟಿಗೇ ಹೊನ್ನು ಸಿಕ್ಕೀತು. ಆ ಹಣವನ್ನು ಕೊಟ್ಟು ಎರಡು ಆಡುಗಳನ್ನು ಕೊಂಡುಕೊಳ್ಳುವುದು. ಅವು ಆರು ತಿಂಗಳಿಗೆ ಮರಿ ಹಾಕುವುದರಿಂದ ಕೆಲವು ವರ್ಷಗಳಲ್ಲಿ ಒಂದು ಹಿಂಡು ಆಗುತ್ತವೆ

ಆ ಹಿಂಡು ಮಾರಿ ಒಂದು ಒಳ್ಳೆಯ ದೊಡ್ಡ ಹಸುವನ್ನು ಕೊಂಡು ಕೊಳ್ಳುವುದು: ಜೊತೆಗೆ ಒಂದು ಎಮ್ಮೆಯನ್ನೂ ಕಟ್ಟಿಕೊಳ್ಳುವುದು. ಜೊತೆಗೆ ಒಂದು ಹೆಣ್ಣು ಕುದುರೆಯನ್ನು ಕೊಂಡುಕೊಳ್ಳುವುದು. ಇವೆಲ್ಲವೂ ಈದು ಅವೆಲ್ಲವೂ ದೊಡ್ಡವಾದ ಮೇಲೆ ಅವುಗಳನ್ನು ಮಾರಿದರೆ ಬೇಕಾದಷ್ಟು ಚಿನ್ನವು ಸಿಕ್ಕುವುದು. ಆ ಚಿನ್ನದಿಂದ ಒಂದು ತೊಟ್ಟಿಯ ಮನೆಯನ್ನು ಕೊಂಡುಕೊಳ್ಳುವುದು.

ಆಗ ಯಾವನಾದರೂ ಒಬ್ಬನು ಯೋಗ್ಯನು ಬಂದು ರೂಪವತಿಯಾದ ತನ್ನ ಮಗಳನ್ನು ಬಲವಂತ ಮಾಡಿ ನನಗೆ ಕೊಡುವನು. ಅವಳಲ್ಲಿ ಒಂದು ಗಂಡು ಮಗುವಾಗುವುದು. ಆ ಮಗುವಿಗೆ ಸೋಮಶರ್ಮ ಎಂದು ಹೆಸರು ಇಡುವೆನು. ಆ ಮಗವು ಅಂಬೆಗಾಲು ಇಡುವಷ್ಟು ಆಗುವುದು. ಅದು ನಾನು ಒಂದು ದಿವಸ ಅಶ್ವಶಾಲೆಯ ಬಳಿ ಪುಸ್ತಕವನ್ನು ಹಿಡಿದು ಓದುತ್ತಾ ಕುಳಿತಿದ್ದರೆ ನನ್ನನ್ನು ಕಂಡು ಅಂಬೆಗಾಲಿಕ್ಕಿಕೊಂಡು ನನ್ನ ಕಡೆಗೆ ಬರುವುದು. ಆಗ ನಾನು “ಮಗುವು ಕುದುರೆಯ ಕಾಲಿಗೆ ಸಿಕ್ಕಿದರೆ ಏನು ಗತಿ?” ಎಂದು ಕೋಪಗೊಂಡು, ಮಗುವಿನ ತಾಯನ್ನು ಕೂಗಿ, “ಮಗುವನ್ನು ಎತ್ತಿಕೋ” ಎಂದು ಗದರುವೆನು. ಅವಳು ಏನೋ ಮನೆ ಗೆಲಸ ಮಾಡುತ್ತಿದ್ದು ನನ್ನ ಮಾತು ಅವಳಿಗೆ ಕೇಳಿಸದೆ ಹೋಗುವುದು. ಆಗ ನಾನು ಎದ್ದು ಹೋಗಿ ಅವಳನ್ನು ಹೀಗೆ ಝಾಡಿಸಿ ಒದೆಯುವೆನು.”

ಹೀಗೆ ಯೋಚನೆ ಮಾಡುತ್ತ ಮಾಡುತ್ತ ಅವನಿಗೆ ಮೈಮರೆತು ಹೋಗಿತ್ತು. ನಿಜವಾಗಿಯೂ ಹೆಂಡತಿಯನ್ನು ಒದೆಯುವವನಂತೆ ಝಾಡಿಸಿ ಒದ್ದೇ ಒದ್ದನು. ಆ ಒದೆತವು ಮಡಿಕೆಗೆ ಬಿತ್ತು. ಆ ಮಡಿಕೆಯು ಒಡೆಯಿತು. ಅದರಲ್ಲಿದ್ದ ಹಿಟ್ಟೆಲ್ಲ ಅವನ ಮೇಲೆ ಬಿತ್ತು. ಅದರಿಂದ “ಫಲಿಸಿದ ಕಾರ್ಯದ ಫಲವಂ ಚಿಂತಿಸಿ ಮರುಳಾಗಿ ಹೋಳಿದನು. ಎಂದನು.

ಸುವರ್ಣಸಿದ್ಧಿಯು “ನಿಜ, ನಿಜ, ಇದು ನಿನ್ನ ದೋಷವಲ್ಲ ಸರ್ವರೂ ಲೋಭದಿಂದ ಹಾಗಾಗುವರು.– ಕೇಳಲಿಲ್ಲವೆ?

ಫಲವನೆಣಿಸದೆ ಚಪಲ ಮತಿಯಿಂ ।
ಕೆಲಸ ಮಾಡಲು ಕೇಡು ತಪ್ಪದು ॥
ಚಂದ್ರ ನರಪನ ನೋಡಿ ಕಲಿಯೈಯ್ಯಾ ॥ ೨೯ ॥

ಚಕ್ರಧರನು “ಅದೆಂತು?” ಎಂದು ಕೇಳಲು ಅವನು ಹೇಳಿದನು :—



## ಚಂದ್ರ ಭೂಪತಿಯ ಕಥೆ

ಒಂದೂರಿನಲ್ಲಿ ಒಬ್ಬ ಚಂದ್ರನೆಂಬ ಅರಸನಿದ್ದನು. ಅವನ ಮಕ್ಕಳಿಗೆ ಕಪಿಗಳೊಡನೆ ಆಟವಾಡುವುದು ಎಂದರೆ ಬಹಳ ಆಸೆ. ಅದರಿಂದ ಆ ರಾಜಪುತ್ರರು ಆ ಕಪಿಗಳಿಗೆ ಬೇಕಾದ ತಿಂಡಿಗಳನ್ನು ಕೊಡುತ್ತಿದ್ದರು.

ಆ ಅರಮನೆಯಲ್ಲಿಯೇ ಎಳೆಯ ಮಕ್ಕಳ ಗಾಡಿಗೆ ಕಟ್ಟುವ ಪಕ್ಕಿಂದು ಟಗರುಗಳನ್ನು ಸಾಕಿದ್ದರು. ಅವುಗಳಲ್ಲಿ ಒಂದು ನಿತ್ಯವೂ ಅಡುಗೆ ಮನೆಗೆ ನುಗ್ಗಿ ಅಲ್ಲಿದ್ದ ಹಸಿ ಬಿಸಿ ಪದಾರ್ಥಗಳನ್ನೆಲ್ಲ ತಿನ್ನುವುದು. ಅಡುಗೆಯವನು ಕಂಡರೆ ತಪ್ಪದೆ ಅವನ್ನು ಸಿಕ್ಕಿದ ಪಿಕ್ಕದು ಹನ್ನು ತೆಗೆದುಕೊಂಡು ಹೊಡೆದು ಓಡಿಸುವನು.

ಒಂದು ದಿವಸ ಆ ಟಗರು ಒಳಗೆ ನುಗ್ಗಿತು. ಅವನ್ನು ಹೊಡೆಯಲು ಥಟ್ಟನೆ ಏನೂ ಸಿಕ್ಕಲಿಲ್ಲ. ಆಗ ಅಡುಗೆಯವನು ಒಲೆಯಲ್ಲಿದ್ದ ಕೊಳ್ಳಿಯನ್ನು ತೆಗೆದುಕೊಂಡು ಅವರಿಂಸಲೇ ಆ ಟಗರನ್ನು ಹೊಡೆದನು. ಬೆಂಕಿಯು ತಗಲುತ್ತಲೇ, ಬೆಳೆದು ನಿಂತಿದ್ದ ತುಪ್ಪಟವು ಹತ್ತಿಕೊಂಡಿತು. ಅದು ಗಾಬರಿಯಲ್ಲಿ ಓಡಿಹೋಗಿ ಕುದುರೆಯ ಲಾಯದ ಮಗ್ಗುಲಲ್ಲಿದ್ದ ಹುಲ್ಲಿನ ಬಣಬೆಯ ಬಳಿ ಹೋಯಿತು

ಅದಕ್ಕೆ ಬೆಂಕಿಯು ಹತ್ತಿತು. ಅದೇ ಬೆಂಕಿಯು ಹರಡಿಕೊಂಡು ಕುದುರೆಗಳ ಲಾಯಕ್ಕೂ ಬೆಂಕಿ ಹೊತ್ತಿಕೊಂಡು ಕುದುರೆಗಳಿಗೆಲ್ಲ ಸುಟ್ಟ ಗಾಯಗಳಾಯಿತು.

ಆಗ ಅರಮನೆಯ ಕುದುರೆ ವೈದ್ಯರು ಬಂದು ಕುದುರೆಗಳ ಗಾಯಗಳಿಗೆ ಕಪಿಗಳ ಕೊಬ್ಬು ಬೇಕು ಎಂದು ಹೇಳಿದರು. ಅರಸನು ಅರಮನೆಯ ತೋಟದಲ್ಲಿದ್ದ ಕಪಿಗಳನ್ನೇ ಕೊಲ್ಲಿಸಿದನು. ಆ ಕಪಿಯ ಹಿಂಡಿನಲ್ಲಿ ಒಂದು ಗಡವನಿತ್ತು. ಅದು ತಪ್ಪಿಸಿಕೊಂಡು ಓಡಿ ಹೋಯಿತು.

ಆ ಗಡವನು ಕಾಡಿನಲ್ಲಿ ಸೇರಿಕೊಂಡು ತನ್ನ ಕುಲವನ್ನೇ ಕೊಲ್ಲಿಸಿದ ಆ ಅರಸಿನಿಗೆ ಏನಾದನೂ ಒಂದು ಕೇಡುಕು ಮಾಡಬೇಕೆಂದು ಸಮಯ ಕಾದಿತ್ತು.

ಒಂದು ದಿನ ಅದು ಬಾಯಾರಿ ನೀರು ಕುಡಿಯಲೆಂದು ಒಂದು ಕೊಳದ ಬಳಿಗೆ ಹೋಯಿತು. ಅಲ್ಲಿ ಹಜ್ಜೆಗಳೆಲ್ಲ ನೀರಬಳಿಗೆ ಹೋದವೇ ಹೊರತು ಒಂದೂ ಹಿಂತಿರುಗಿ ಬಂದಂತೆ ಇರಲಿಲ್ಲ ಅದರಿಂದ "ಈ ನೀರಿನಲ್ಲಿ ಮೊಸಳೆ ಇರಬೇಕು. ಅದು ಬಂದವರ ನ್ನೆಲ್ಲ ಹಿಡಿದು ಕೊಂದಿರಬೇಕು" ಎಂದು ಯೋಚಿಸಿ, ಒಂದು ನಾಳೆನನ್ನು ಸಂಪಾದಿಸಿಕೊಂಡು ಬಂದು, ದೂರದಲ್ಲಿ ನಿಂತು ಅದ ರಿಂದ ನೀರು ಕುಡಿಯಿತು.

ಆ ಕೊಳದಲ್ಲಿ ಒಬ್ಬ ರಾಕ್ಷಸನಿದ್ದನು. ಅವನು ಕಪಿಯು ಮಾಡಿದುದನ್ನು ನೋಡಿ ಸಂತೋಷಪಟ್ಟು ಅದಕ್ಕೆ ದರ್ಶನವನ್ನು ಕೊಟ್ಟು 'ಎಲೈ ಕಪಿಯೆ, ನಿನ್ನ ಬುದ್ಧಿಗೆ ಮೆಚ್ಚಿದೆನು. ನಾನು ಈ ಕೊಳದಲ್ಲಿ ಇರುವೆನು. ಈ ನೀರಿನೊಳಕ್ಕೆ ಇಳಿದವರೆಲ್ಲ ನನಗೆ ಭಕ್ಷ್ಯವು. ನಿನ್ನಂತೆ ಯಾರೂ ನೀರಿಗೆ ಇಳಿಯದೆ ನೀರು ಕುಡಿದ ವರಿಲ್ಲ. ಭಲೆ! ನಿನಗೆ ಒಂದು ವರವನ್ನು ಕೇಳು, ಕೊಡುವೆನು."

ಎಂದನು.

ಕಪಿಯು ಕೇಳಿತು: "ನೀನು ಎಷ್ಟು ಜನರನ್ನು ತಿನ್ನಬಲ್ಲೆ?"

"ನೂರು, ಸಾವಿರ, ಒಂದು ಲಕ್ಷವನ್ನಾದರೂ ತಿಂದು ಹಾಕಬಲ್ಲೆ;"

"ಹಾಗಾದರೆ ನನಗೆ ನಿನ್ನಿಂದ ಒಂದು ಕಾರ್ಯವಾಗ ಬೇಕಾಗಿದೆ. ನನಗೆ ಒಬ್ಬ ಅರಸಿನ ಮೇಲೆ ಕೋಪವಿದೆ. ಅವನ ಕುಲವನ್ನೆಲ್ಲ ಕರೆದು ತಂದರೆ ಅವರನ್ನೆಲ್ಲ ತಿಂದುಹಾಕಬಲ್ಲೆಯಾ?"

"ಅವರು ನೀರೊಳಗೆ ಹೊಕ್ಕರೆ ಸಾಕು. ಅವರು ನನ್ನ ಹೊಟ್ಟೆಯನ್ನೇ ಹೊಕ್ಕಹಾಗೆ ಎಂದುಕೊ."

"ಹಾಗಾದರೆ ನಿನ್ನ ಕತ್ತಿನಲ್ಲಿರುವ ಮುತ್ತಿನ ಸರವನ್ನು ನನಗೆ ಸಾಲವಾಗಿ ಕೊಟ್ಟರು. ನಾನು ನಿನಗೆ ನಿನ್ನ ಹೊಟ್ಟೆ ತುಂಬುವಷ್ಟು ಭೋಜನವನ್ನು ತರುವೆನು."

ರಾಕ್ಷಸನು ತನ್ನ ಕಂಠದಲ್ಲಿದ್ದ ಮಾಲೆಯನ್ನು ಸಂತೋಷವಾಗಿ ಕೊಟ್ಟನು. ಕಪಿಯು ಅದನ್ನು ಧರಿಸಿಕೊಂಡು ತಾನು ಹಿಂದಿದ್ದ ಅರಸನ ಉದ್ಯಾನಕ್ಕೆ ಹೋಯಿತು. ಅಲ್ಲಿದ್ದವರೆಲ್ಲಾ ಅದರ ಕತ್ತಿನಲ್ಲಿದ್ದ ಮುತ್ತಿನ ಸರವನ್ನು ಕಂಡು ಆಶ್ಚರ್ಯಪಟ್ಟರು.

ಈ ಸುದ್ದಿಯು ಅರಸನಿಗೂ ತಿಳಿಯಿತು. ಅರಸನು ಅದನ್ನು ನೋಡಲು ಬಗೆ ಬಗೆಯಾದ ತಿಂಡಿಗಳನ್ನು ತೆಗೆಸಿಕೊಂಡು ತೋಟಕ್ಕೆ ಬಂದನು "ಎಲೈ ಕಪಿರಾಜ, ನಿನಗೆ ಈ ಸರವು ಎಲ್ಲಿ ಸಿಕ್ಕಿತು?" ಎಂದು ಕೇಳಿದನು. ನಿಜವಾಗಿಯೂ ಆ ಸರದ ಮುತ್ತುಗಳು ದುಂಡಾಗಿ, ನುಣುಪಾಗಿ, ಇದ್ದು ಅರಸನೂ ಅಬ್ಬಾ ಎಂದು ಆಶ್ಚರ್ಯಪಡುವಂತಿತ್ತು.

ಕಪಿಯು ಹೇಳಿತು: "ಅರಸ, ಕಾಡಿನಲ್ಲಿ ಒಂದು ಕೊಳವಿದೆ. ಅಲ್ಲಿ ಸ್ನಾನ ಮಾಡಿದವರಿಗೆಲ್ಲ ಒಂದೊಂದು ಮುತ್ತಿನ ಸರವು ಸಿಕ್ಕುತ್ತದೆ. ನನಗೂ ಅಲ್ಲಿ ಸ್ನಾನ ಮಾಡಿದಾಗ ಇದು ಸಿಕ್ಕಿತು."

" ಯಾರು ಸ್ನಾನ ಮಾಡಿದರೂ ಸಿಕ್ಕುತ್ತದೆಯೇ ? "

" ಹೌದು, ನಾನು ನೋಡಿದೆ. ಆದರೆ ಆ ಕೊಳ ಕಾಡಿನಲ್ಲಿದೆ ಯಾಗಿ ಅನೇಕರಿಗೆ ತಿಳಿಯದು."

" ಹಾಗಾದರೆ, ನಾನು ಬಂದರೆ ಆ ಕೊಳವನ್ನು ತೋರಿಸು ವೆಯಾ ? "

" ಅಗತ್ಯವಾಗಿ ತೋರಿಸುವೆನು. ಬಾ. "

ಆ ಸರವನ್ನು ನೋಡಿದ ಹಾಗೆಲ್ಲ, ಅದರ ಮುತ್ತುಗಳ ಮೇಲಿನ ಆಸೆಯು ಹೆಚ್ಚಾಯಿತು. " ಇದು ಭೂಲೋಕದ ಮುತ್ತು ಗಳಲ್ಲ. ಇಂತಹ ಸರಗಳು ನಮ್ಮವರಿಗೆಲ್ಲಾ ಇರಲಿ. " ಎಂದು ತನ್ನ ಬಂಧುಬಳಗ ಮಿತ್ರ ಭೃತ್ಯ ಪತ್ನೀ ಪುತ್ರಾದಿಗಳನೆಲ್ಲ ಕರೆದುಕೊಂಡು ಅಲ್ಲಿಗೆ ಹೊರಟನು. ಆಸೆಯು ಯಾರನ್ನು ಬಿಡು ವುದು ? ಕೇಳಿಲ್ಲವೆ ?

ನೂರಿರೆ ಸಾಸಿರಬೇಕೆಂಬ । ಸಾಸಿರವಿರೆ ಲಕ್ಷವು ಬೇಕೆಂಬ॥
ಲಕ್ಷವು ಇರೆ ರಾಜ್ಯವು ಬೇಕೆಂಬ । ರಾಜ್ಯವೆ ಇರೆ ನಾಕವು ಬೇಕೆಂಬ ||೩೦||

ಮುದಿತನ ಬರಲಂಗವು ಕಂಗೆಡುವುದು ।
ಕಂಗಳು ಕಾಣವು ಕಿವಿಗಳು ಕೇಳವು॥
ಯೌವನ ಬರುವುದು ಆಸೆಗೆ ಮಾತ್ರ ॥ ೩೧ ॥

ವಾನರವು ಅವರನ್ನೆಲ್ಲ ರಾಕ್ಷಸನಿದ್ದ ಸರಸ್ಸಿನ ಬಳಿಗೆ ಕರೆದು ಕೊಂಡು ಹೋಯಿತು. ಕೈಮುಗಿದುಕೊಂಡು ಅರಸನಿಗೆ ಹೇಳಿತು :— " ದೇವ, ಸೂರ್ಯನು ಅರ್ಧಾರ್ಧವಾಗಿ ಉದಯಿಸಿರುವ ವೇಳೆಯಲ್ಲ ಈ ಸರೋವರದಲ್ಲಿ ಸ್ನಾನ ಮಾಡಿದವರಿಗೆ ಸಿದ್ಧಿಯು ಲಭಿಸುವುದು. ಆದರಿಂದ ಎಲ್ಲರೂ ಒಂದೇ ವೇಳೆಯಲ್ಲಿ ನೀರಿಗೆ ಇಳಿಯಲಿ "ಎಂದಿತು. ರಾಜನು ಹಾಗೆಯೇ ಆಜ್ಞೆ ಮಾಡಿದನು. ಎಲ್ಲರೂ ಒಟ್ಟಿಗೇ ನೀರಿಗೆ ಇಳಿದರು ಕೋತಿಯು ರಾಜನನ್ನು " ದೇವ, ನಾವು ಅತ್ತಕಡೆ

ಇಳಿಯೋಣ. ಅಲ್ಲಿ ರತ್ನ ಹಾರಗಳು ಬಹಳವಾಗಿವೆ.'' ಎಂದು ತಡೆಯಿತು.

ಇತ್ತ ನೀರಿಗೆ ಇಳಿದ ಜನರನ್ನೆಲ್ಲ ರಾಕ್ಷಸನು ತಿಂದು ಬಿಟ್ಟನು ಅವರು ಎಷ್ಟು ಹೊತ್ತಾದರೂ ನೀರಿನಿಂದ ಎದ್ದು ಬರದಿರಲು ಅರಸನು ಇದೇಕೆಂದು ಕೇಳಿದನು. ಕಪಿಯು ಥಟ್ಟನೆ ಎತ್ತರವಾಗಿರುವ ಒಂದು ಮರವನ್ನೇರಿಕೊಂಡು, ''ಅರಸಾ, ನೀನು ಕೆಟ್ಟೆ. ನೀರ ಒಳಗಿರುವ ರಾಕ್ಷಸನು ನಿನ್ನವರನ್ನೆಲ್ಲಾ ತಿಂದು ಹಾಕಿದನು. ನೀನು ಹಿಂದೆ ಕೊಲ್ಲಿಸಿದ ಕಪಿಗಳ ಹಿಂಡಿನಲ್ಲಿ ಇದ್ದವನು ನಾನು. ನಾನು ನನ್ನ ವೈರವನ್ನು ಸಾಧಿಸಿಕೊಂಡೆನು. ನೀನು ಎಷ್ಟಾಗಲೀ ಅರಸನೆಂದು ನಿನ್ನನ್ನು ಉಳಿಸಿದೆನು. ನೀನು ಹೋಗು. ನಿನ್ನ ಹಿಂಸೆಗೆ ನಾನೂ ಪ್ರತಿ ಹಿಂಸೆ ಮಾಡಿದೆನು. ದುಷ್ಟನಿಗೆ ದುಷ್ಟನೇ ಆದರೆ ತಪ್ಪೇನು? ನೀನು ನನ್ನ ಕುಲವನ್ನು ಕೊಂದೆ; ನಾನು ನಿನ್ನ ಕುಲವನ್ನು ಕೊಂದೆ.'' ಎಂದು ಹೇಳಿತು.

ಅರಸನು ತನ್ನ ಕೋಪವನ್ನೆಲ್ಲಾ ನುಂಗಿಕೊಂಡು ಹಿಂತಿರುಗಿ ಹೋದನು.

ಅದರಿಂದ ನಾನು ಹೇಳಿದ್ದು. ''ಚಪಲ ಮತಿಯಿಂ ಕೆಲಸ ಮಾಡಲು ಕೇಡು ತಪ್ಪದು'' ಎಂದು ''ಇನ್ನು ನಾನು ಹೋಗಿ ಬರುವೆನು ಕಳುಹಿಸಿಕೊಡು'' ಎಂದನು.

ಚಕ್ರಧರನು ''ಅಯ್ಯಾ'' ಆಪತ್ಕಾಲಕ್ಕೆ ಬೇಕೆಂದಲ್ಲವೆ, ಧನವನ್ನೂ ಮಿತ್ರರನ್ನೂ ಸಂಗ್ರಹಿಸುವುದು? ನಾನು ಹೀಗಿರುವಾಗ ನನ್ನನ್ನು ಬಿಟ್ಟು ಹೋಗುವುದು ತರವೆ? ಆಪತ್ತಿನಲ್ಲಿರುವ ಮಿತ್ರನನ್ನು ಬಿಟ್ಟು ಹೋದವನು ಕೃತಘ್ನನು. ಅಂಥವನಿಗೆ ನರಕವಾಗುವುದು. ಅಲ್ಲವೆ?'' ಎಂದು ಕೇಳಿದನು.

ಸುವರ್ಣಸಿದ್ಧಿಯು ಹೇಳಿದನು: "ನನ್ನಿಂದ ನಿನಗೆ ಏನಾದರೂ ಉಪಕಾರವಾಗುವುದಾದರೆ ನಾನು ಇದ್ದದ್ದೂ ಸಾರ್ಥಕ. ನಾನು ನಿನ್ನ ಬಾಧೆಯನ್ನು ನೀಗಲಾರೆ. ನಿನ್ನ ತಲೆಯ ಮೇಲೆ ಸುತ್ತುತ್ತಿರುವ ಚಕ್ರವನ್ನೂ, ಅದರಿಂದ ನಿನಗೆ ನೋವಾಗಿ ನೀನು ಮುಖವನ್ನು ವಿಕಾರ ಮಾಡಿಕೊಳ್ಳುವುದನ್ನೂ ನೋಡುತ್ತ ನಿನಗೆ ಆದ ಅನರ್ಥವು ನನಗೂ ಆದೀತೋ ಎಂದು ದಿಗಿಲಾಗುತ್ತದೆ. ಅದರಿಂದ, ಕೇಳಿಲ್ಲವೆ?

ಮುಸುಡಿ ನೋಡಲು ತಿಳಿಯದೆ | ನಿಜವಿಕಾಲನು ಹಿಡಿದಿದೆ ||
ದಿಟವ ಹೇಳುವೆ ತಿಳಿದುಕೋ | ಓಡಿ ಗೆದ್ದವ ಬದುಕಿದ || ೩೨ ||

ಚಕ್ರಧರನು "ಅದೆಂತು?" ಎಂದು ಕೇಳಿದನು ಅವನು ಹೇಳಿದನು:-

# ವಿಕಾಲನ ಕಥೆ

ಒಂದಾನೊಂದು ಊರಿನಲ್ಲಿ ಭದ್ರಸೇನನೆಂಬ ರಾಜನಿದ್ದನು. ಅವನಿಗೆ ರತ್ನವತಿ ಎಂಬ ಲಕ್ಷಣವತಿಯಾದ ಮಗಳಿದ್ದಳು. ಅವಳಿಗೆ ಒಬ್ಬ ರಾಕ್ಷಸನು ಹಿಡಿದಿದ್ದನು. ಆದರೆ ಅವಳು ರಕ್ಷಾಯಂತ್ರವನ್ನು ಕಟ್ಟಿಕೊಂಡಿದ್ದಳು. ಅದರಿಂದ ಅವಳನ್ನು ಹೊತ್ತುಕೊಂಡು ಹೋಗಲು ಆಗಲಿಲ್ಲ.

ಒಂದು ದಿನ ನಡುರಾತ್ರಿಯಲ್ಲಿ ರಾಕ್ಷಸನು ಅಂತಃಪುರದ ಮೂಲೆಯಲ್ಲಿ ನಿಂತಿದ್ದನು. ಆ ರಾಕ್ಷಸನನ್ನು ರಾಜಪುತ್ರಿಯು ಸಖಿಗೆ ತೋರಿಸಿ "ಇವೇ ಈ ವಿಕಾಲ. ಸಮಯದಲ್ಲಿ ನನ್ನನ್ನು ಗೋಳು ಹೊಯ್ದುಕೊಳ್ಳುವ ರಾಕ್ಷಸ. ಇದನ್ನು ತಪ್ಪಿಸಲು ಏನಾದರೂ ಮಾರ್ಗವನ್ನು ಹುಡುಕು" ಎಂದಳು.

ವಿಕಾಲಸಮಯ ಎಂದರೆ ಹೊತ್ತಲ್ಲದ ಹೊತ್ತು. ಅದನ್ನು ರಾಕ್ಷಸನು ವಿಕಾಲನು ಬರುವ ಸಮಯ ಎಂದುಕೊಂಡು, "ಆಃ, ವಿಕಾಲನೆಂಬ ಇನ್ನೊಬ್ಬನೂ ಇವಳನ್ನು ಹಿಡಿದಿರಬೇಕು. ಅವನಿಗೂ ನನ್ನಂತೆಯೇ ಇವಳನ್ನು ಹೊತ್ತುಕೊಂಡು ಹೋಗಲು ಅಸಾಧ್ಯ ವಾಗಿದೆ. ಇರಲಿ. ಆ ವಿಕಾಲನು ಯಾರೋ ನೋಡೋಣ" ಎಂದು ಕುದುರೆಯಾಗಿ ಲಾಯದಲ್ಲಿ ನಿಂತನು.

ಆ ವೇಳೆಗೆ ಒಬ್ಬ ಕುದುರೆ ಕಳ್ಳನು ಲಾಯದೊಳಕ್ಕೆ ನುಗ್ಗಿ ಬಂದು ದೀಪವನ್ನು ಆರಿಸಿ, ಕುದುರೆ ಕುದುರೆಯನ್ನು ಮುಟ್ಟಿ ನೋಡುತ್ತ ಬಂದನು. ರಾಕ್ಷಸ ಕುದುರೆಯು ಮಿಕ್ಕ ಕುದುರೆಗಳಿ ಗಿಂತ ಚೆನ್ನಾಗಿತ್ತು. ಅದರಿಂದ ಅವನು ಅದಕ್ಕೆ ಕಡಿವಾಣ, ಹಲ್ಲಣ ಗಳನ್ನು ಹಾಕಿ, ಅದರ ಮೇಲೆ ಕುಳಿತು ಓಡಿಸಿಕೊಂಡು ಹೋದನು. ರಾಕ್ಷಸನೂ "ಇವನೇ ವಿಕಾಲ ನಿರಬೇಕು. ಎಲ್ಲ ಕುದುರೆಗಳನ್ನೂ ಬಿಟ್ಟು ನನ್ನನ್ನೇ ಹಿಡಿದಿದ್ದಾನೆ. ಬಂತು ನನಗೆ ಮೃತ್ಯು. ಇನ್ನು ನಾನು ಬದುಕುವಂತಿಲ್ಲ." ಎಂದು ಹೆದರಿ ನಾಗಾಲೋಟ ಓಡಿತು.

ಹೊಡೆದರೂ, ಮುಳ್ಳು ಚುಚ್ಚಿದರೂ, ಕಡಿವಾಣ ಎಳೆದರೂ ನಿಲ್ಲದೆ ಓಡುತ್ತಿರುವ ಕುದುರೆಯನ್ನು ನೋಡಿ, "ನಿಜವಾಗಿಯೂ ಇದಕ್ಕೆಲ್ಲೋ ದೆವ್ವ ಹಿಡಿದಿದೆ. ಇದನ್ನು ಹಿಡಿಯುವುದು ಸಾಧ್ಯವಿಲ್ಲ ಇದೆಲ್ಲಾದರೂ ನನ್ನನ್ನು ಹೊತ್ತುಕೊಂಡು ಹೋಗಿ ಕೊಲ್ಲುವುದು. ತಪ್ಪಿಸಿಕೊಳ್ಳಬೇಕು." ಎಂದು ಆ ಕಳ್ಳನು ಯೋಚಿಸಿಕೊಂಡು, ಬೆಳಗಾಗುವ ವೇಳೆಗೆ ದಾರಿಯಲ್ಲಿ ಸಿಕ್ಕಿದ ಒಂದು ಆಲದ ಮರ ವನ್ನು ಹತ್ತಿಕೊಂಡನು.

ಆ ಮರದಲ್ಲಿ ಆ ರಾಕ್ಷಸನಿಗೆ ಪರಮ ಸ್ನೇಹಿತನಾದ ಒಂದು ಕಪಿ ಇತ್ತು. ಅದು ಓಡುತ್ತಿದ್ದ ರಾಕ್ಷಸನನ್ನು ನಿಲ್ಲಿಸಿ "ಏನು?" ಎಂದು ಕೇಳಿತು. ರಾಕ್ಷಸನು ವಿಕಾಲನ ಕಥೆಯನ್ನು ಹೇಳಲು, "ನಿನ

ವಿಕಾಲನು ಈ ಮರದಲ್ಲಿದ್ದಾನೆ. ನೋಡು. ಅವನು ಮನುಷ್ಯ ನಿನ್ನ ಆಹಾರ.'' ಎಂದಿತು. ಅದನ್ನು ಕಳ್ಳನು ಕೇಳಿ ಕಪಿಯ ಮೇಲೆ ಕೋಪಮಾಡಿಕೊಂಡು, ಅದರ ಬಾಲವನ್ನು ಹಿಡಿದು ಚೆನ್ನಾಗಿ ಕಚ್ಚಿ ಬಿಟ್ಟನು. ಕಪಿಯು ಕೊಂಬೆಗಳ ನಡುವೆ ಸಿಕ್ಕಿಕೊಂಡಿತ್ತು. ಅದು ಅತ್ತ ಇತ್ತ ತಿರುಗುವಂತೆ ಇಲ್ಲ. ಆ ನೋವೋ ಸಹಿಸಲಾರದಷ್ಟು. ಆಗ, ಅದು ನೋವಿನಿಂದ ಮುಸುಡಿ ಸೊಟ್ಟ ಮಾಡಿಕೊಂಡು ಅಯ್ಯೋ ಎಂದು ಕೂಗಿ ಕೊಂಡಿತು.

ರಾಕ್ಷಸನು ಆ ಕೂಗನ್ನೂ ಅದರ ಮುಸುಡನ್ನೂ ನೋಡಿ. ''ನೋಡಿದೆಯಾ ವಿಕಾಲನ ಮಹಿಮೆ? ನನಗೆ ಬೇಡ ಈ ಸಹವಾಸ'' ಎಂದು ಕಾಲಿಗೆ ಬುದ್ಧಿ ಹೇಳಿದನು.

ಆದರಿಂದ ಹೇಳಿದೆ, ''ಓಡಿಗೆದ್ದವ ಬದುಕಿದ'' ಎಂದು ಅದರಿಂದ ನನಗೆ ಅಪ್ಪಣೆಯನ್ನು ಕೊಡು. ನಾನು ಮನೆಗೆ ಹೋಗು ವೆನು. ನಿನ್ನ ಲೋಭದ ಫಲವನ್ನು ನೀನು ಅನುಭವಿಸು'' ಎಂದನು.

ಚಕ್ರಧರನು ''ಸತ್ಯ. ಆದದ್ದಾಯಿತು. ಹೋಗಿ ಬಾ. ನೀನೆ ಲ್ಲಾ ವರೂ ಚೆನ್ನಾಗಿರು.'' ಎಂದು ಆಶೀರ್ವಾದ ಮಾಡಿ ಕಳುಹಿಸಿ ಕೊಟ್ಟನು.

ಇಂತಿದು ಹೊಸಗನ್ನಡ ಪಂಚತಂತ್ರದಲ್ಲಿ
**"ನೋಡದೆ ಮಾಡಿದರೆ"** ಎಂಬ
ಎರಡನೆಯ ತಂತ್ರವು ಮುಗಿದುದು.

# ಹೊಸಗನ್ನಡ ಪಂಚತಂತ್ರ

## ವೈರ ಸಾಧಿಸುವುದು

ಹೊಸಗನ್ನಡ ಪಂಚತಂತ್ರದಲ್ಲಿ "ವೈರ ಸಾಧಿಸುವುದು" ಎಂಬ ಮೂರನೆಯ ತಂತ್ರವು. ಅದರ ಮೊದಲನೆಯ ಶ್ಲೋಕವಿದು :–

ನಂಬಲು ಬಾರದು ಪೂರ್ವ ವಿರೋಧಿಯ॥
ಗೆಳೆಗೊಂಡಿದ್ದರು ಹಿಂದಿನ ಹಗೆಯ॥
ನೋಡೈ ಗೂಗೆಗಳಿದ್ದಾ ಗುಹೆಯ॥
ಸುಟ್ಟುವು ಕಾಗೆಗಳಗ್ನಿಯನೊಟ್ಟಿ ॥೧॥

ಆ ಕಥೆ ಎಂತು ಎಂದರೆ:—

ದಕ್ಷಿಣದೇಶದಲ್ಲಿ ಮಹಿಲಾರೋಪ್ಯ ಎಂಬ ನಗರವೊಂದುಂಟು, ಅದರ ಸಮೀಪದಲ್ಲಿ ವಿಶಾಲವಾದ ಆಲದಮರವೊಂದುಂಟು. ಆ ಮರದಲ್ಲಿ ಮೇಘವರ್ಣನೆಂಬ ಕಾಗೆಗಳ ಅರಸು ತನ್ನ ಪರಿವಾರವನ್ನೆಲ್ಲ ಇಟ್ಟುಕೊಂಡು ಸುಖವಾಗಿದ್ದನು,

ಹಾಗೆಯೇ ಇನ್ನೊಬ್ಬ ಗೂಗೆಗಳ ಅರಸನು ಒಂದು ಬೆಟ್ಟದ ಗುಹೆಯಲ್ಲಿ ತನ್ನ ಪರಿವಾರದೊಂದಿಗೆ ಇದ್ದನು. ಅವನ ಹೆಸರು ಅರಿಮರ್ದನ. ಆ ಅರಿಮರ್ದನನು ತನ್ನ ಲೆಕ್ಕವಿಲ್ಲದಷ್ಟು ಪರಿವಾರದೊಂದಿಗೆ ರಾತ್ರಿ ರಾತ್ರಿಯೂ ಬಂದು ಆ ಆಲದ ಮರವನ್ನು [illegible]ತನು. ಆ ಅರಸನಿಗೆ ಕಾಗೆಗಳ ಮೇಲೆ ಮೊದಲಿನಿಂದಲೂ [illegible]ನೆಂದರೆ ವೈರ. ಅದರಿಂದ ಯಾವುದಾದರೂ ಒಂದು ಕಾಗೆಯು ಅಪ್ಪಿ ತಪ್ಪಿ ಕೈಗೆ ಸಿಕ್ಕಿದರೆ ಅದನ್ನು ಹತಮಾಡಿ ಬಿಡುವನು. ಹೀಗೆ [illegible]ಸ ದಿಸವೂ ಆಗುತ್ತಿದ್ದುದರಿಂದ ಆಲದ ಮರದ ಕಾಗೆಗಳ ಗುಂಪು ಬರ ಬರುತ್ತಾ ಕರಗಿಹೋಯಿತು. ಕೇಳಲಿಲ್ಲವೆ?

ವೈರಿಯನು ರೋಗವನು ತಡೆಯದೇ ಬಿಟ್ಟರೆ ||
ಸ್ವೇಚ್ಛೆಯಿಂ ಬೆಳೆ ಬೆಳೆದು ಕೊಲ್ಲುವುದು ಕೊನೆಗೆ || ೨ ||

ಒಂದು ದಿನ ವಾಯಸ (ಕಾಗೆ) ರಾಜನು ತನ್ನ ಮಂತ್ರಿಗಳನ್ನೆಲ್ಲ ಕರೆದು ಹೇಳಿದನು:—"ಎಲೈ ಮಿತ್ರರೆ, ಗೂಗೆಯು ನಮ್ಮ ಶತ್ರುವು. ಅವನು ದಿನ ದಿನವೂ ನಮ್ಮನ್ನು ಕೊಲ್ಲುತ್ತಿರುವನು. ಇದನ್ನು ತಪ್ಪಿಸುವುದು ಹೇಗೆ? ಅವನು ಬರುವುದು ರಾತ್ರಿಯಲ್ಲಿ. ನಮಗೆ ರಾತ್ರಿಯಲ್ಲಿ ಕಣ್ಣು ಕಾಣಿಸುವುದಿಲ್ಲ. ಅವನು ಎಲ್ಲಿರುವನೆಂಬುದು ನಮಗೆ ತಿಳಿಯುವುದಿಲ್ಲ. ನಾವು ಹೋಗಿ ಹಗೆಯನ್ನು ತೀರಿಸಿಕೊಳ್ಳುವಂತಿಲ್ಲ. ಆದರಿಂದ ಸಂಧಿ, ವಿಗ್ರಹ, ಯಾನ, ಆಸನ, ಸಂಶ್ರಯ, ದ್ವೈಧೀಭಾವ, ಎಂಬ ಈ ಆರು ಉಪಾಯಗಳಲ್ಲಿ ಯಾವುದನ್ನು ಮಾಡಬೇಕು ಎಂಬುದನ್ನು ಚೆನ್ನಾಗಿ ವಿಚಾರ ಮಾಡಿ ಹೇಳಿ."

ಅವರು ಹೇಳಿದರು:—"ದೇವ, ನೀನು ಕೇಳಿದ್ದು ಬಹಳ ಸರಿ. ಮಂತ್ರಿಗಳಾದವರು ಕೇಳದೆಯೇ ಈ ವಿಚಾರದಲ್ಲಿ ಸಲಹೆಯನ್ನು ಕೊಡಬೇಕು: ಕೇಳಿದಮೇಲಂತೂ ಯಾವುದು ಸರಿ, ಯಾವುದು ಪಥ್ಯ, ಯಾವುದು ಸಾಧ್ಯ, ಯಾವುದು ಪ್ರಿಯ, ಎಂಬುದನ್ನು ವಿಚಾರಿಸಿ ಹೇಳಬೇಕು. ಯಾವ ಮಂತ್ರಿಯು ಹಿತವೂ ಕೊನೆಗೆ ಸುಖವೂ ಆಗುವುದನ್ನು ಕೇಳಿದರೂ ಹೇಳುವುದಿಲ್ಲವೋ ಅವನು ಶತ್ರುವೇ ಹೊರತು ಮಂತ್ರಿಯಲ್ಲ. ಆದರೆ, ಈ ಕಾರ್ಯವು ಏಕಾಂತದಲ್ಲಿ ಆಗಬೇಕು. ಆದರಿಂದ ಯಾರೂ ಇಲ್ಲದೆಡೆಯಲ್ಲಿ ನಾವು ನಾವೇ ಕುಳಿತು ಗೋಷ್ಠಿ ಮಾಡಬೇಕು."

ಆದಂತೆ ಅರಸನು ಹಿಂದಿನಿಂದಲೂ ತನಗೆ ಮಂತ್ರಿಗಳಾಗಿದ್ದ - ಉಜ್ಜೀವಿ, ಸಂಜೀವಿ, ಅನುಜೀವಿ, ಪ್ರಜೀವಿ, ಚಿರಂಜೀವಿ, ಎಂಬ ಐದು ಮಂತ್ರಿಗಳನ್ನು ಕರೆಸಿಕೊಂಡು ಏಕಾಂತದಲ್ಲಿ ಕುಳಿತು ಮಂತ್ರಾಲೋಚನೆಯನ್ನು ಮಾಡಿದನು.

ಮೊದಲನೆಯ ಮಂತ್ರಿಯಾದ ಉಜ್ಜೀವಿಯು ಹೇಳಿದನು :-
ಅರಸಾ, ಶತ್ರುವು ಬಲವಂತನಾಗಿದ್ದರೆ ಅವನೊಡನೆ ಯುದ್ಧವನ್ನು ಮಾಡಬಾರದು. ಬಲವಂತನಿಗೆ ಕೈ ಮುಗಿದುಕೊಂಡು ಕಾಲಹರಣ ಮಾಡುತ್ತಿದ್ದರೆ, ಆಪತ್ತುಗಳು, ನದಿಯ ನೀರು ತಾನಾಗಿ ಹರಿದುಹೋಗುವಂತೆ ಹರಿದುಹೋಗುವುವು. ಶತ್ರುವು ಆರ್ಯನೂ ಧಾರ್ಮಿಕನೂ ಆಗಿದ್ದರಂತೂ ತಪ್ಪದೆ ಸಂಧಿಯನ್ನು ಮಾಡಿಕೊಳ್ಳಲೇಬೇಕು. ಶತ್ರುವು ಪ್ರಬಲನಾಗಿದ್ದು, ತನಗೆ ಪ್ರಾಣಕ್ಕೇ ಅಪಾಯವುಂಟಾಗಿದ್ದರೆ, ಶತ್ರುವು ಅನಾರ್ಯನಾಗಿದ್ದರೂ ಸಂಧಿಯೇ ಸರಿಯು. ಏಕೆಂದರೆ ಪ್ರಾಣವಿದ್ದರೆ ಎಲ್ಲವೂ ಇದ್ದಂತೆ. ಶತ್ರುವು ಹಲವು ಯುದ್ಧಗಳನ್ನು ಗೆದ್ದವನಾಗಿದ್ದರಂತೂ ತಪ್ಪದೆ ಸಂಧಿಯನ್ನು ಮಾಡಿಕೊಳ್ಳಲೇಬೇಕು. ಶತ್ರುಗಳು ಬಲವಾಗಿರುವಾಗ ಜೊಂಡಿನಂತೆ ಇರಬೇಕೇ ಹೊರತು ಹಾವಿನಂತೆ ಇರಬಾರದು. ಜೊಂಡು ನೀರು ಬಂದಾಗ ಬಗ್ಗುವುದು; ನೀರಿನ ಪ್ರವಾಹವು ಹೋದಮೇಲೆ ಎದ್ದು ನಿಂತುಕೊಳ್ಳುವುದು. ಅದರಿಂದ ಅದು ಬದುಕಿರುವುದು. ಹಾವು ಕೆಣಕಿದಕೂಡಲೆ ಹೆಡೆಯನ್ನು ಎತ್ತಿ ಹೊಡೆಸಿಕೊಂಡು ಸಾಯುವುದು. ಆಮೆಯು ಕೈಕಾಲುಗಳನ್ನು ಮುದುರಿಕೊಂಡು ಬಿದ್ದರೆ, ಎಂಥಹ ಏಟು ಬಿದ್ದರೂ ಸಹಿಸಿಕೊಳ್ಳುವುದು. ಅದರಿಂದ ಜೊಂಡಿನಂತೆ, ಆಮೆಯಂತೆ, ಬಂದ ಆಪತ್ತನ್ನು ಕಳೆದುಕೊಂಡು ಸಮಯ ಬಂದಾಗ ಕೃಷ್ಣ ಸರ್ಪದಂತೆ ಸಿಕ್ಕಿದುದನ್ನು ನುಂಗಿಬಿಟ್ಟು ತೆಪ್ಪಗಿರಬೇಕು.

ಇದಕ್ಕೆ ವಕರಘನ ಕಥೆಯೇ ಸಾಕ್ಷಿ ಎನ್ನಲು, ಅರಸನು ಅದೆಂತು ಎಂದು ಕೇಳಿದನು. ಮಂತ್ರಿಯು ಹೇಳಿದನು.

---

# ದಶರಥನ ಮದುವೆಯ ಕಥೆ

ಪುರಾತನ ಕಾಲದಲ್ಲಿ ಹೇಹಯರು, ಭಾರ್ಗವರು ಎಂದು ಎರಡು ಗುಂಪಿನರು ಇದ್ದರು. ಹೇಹಯರು ಕ್ಷತ್ರಿಯರು, ಅರಸುಗಳು. ಭಾರ್ಗವರು ಬ್ರಾಹ್ಮಣರು, ತಪಸ್ವಿಗಳು. ಹೇಹಯರಿಗೆ ತಮಗೆ ಬರಬೇಕಾದುದನ್ನೆಲ್ಲಾ ಭಾರ್ಗವರು ತೆಗೆದುಕೊಂಡರು ಎಂದು ಅವರಮೇಲೆ ಕೋಪ. ತಮಗೆ ದಾನವಾಗಿ ಬಂದಿರುವು ದನ್ನು ಮಾತ್ರ ತಾವು ತೆಗೆದುಕೊಂಡಿದ್ದೇವೆಂದು ಭಾರ್ಗವರ ವಾದ. ಹೇಹಯರು ರೇಗಿ ಭಾರ್ಗವರ ಮೇಲೆ ಬೀಳುವರು. ಭಾರ್ಗವರು ಅವಕ್ಕೆ ಪ್ರತಿಮಾಡುವರು. ಹೀಗೆಯೇ ನಡೆಯುತ್ತಿತ್ತು.

ಒಂದು ಸಲಹೇಹಯರು ಜಮದಗ್ನಿಯ ಮೇಲೆ ಬಿದ್ದು ಆತನನ್ನು ಕಡಿದುಹಾಕಿ ಆತನ ಕಾಮಧೇನುವನ್ನು [illegible]ಂಡು ಹೋದರು. ಅದು ಜಮದಗ್ನಿಯ [illegible] ತಿಳಿಯಿತು. ಅವನು ರೇಗಿ "ಈ ಕ್ಷತ್ರಿ[illegible] ಧ್ವಂಸ [illegible]ಸು" ಎಂದು ಹಟ ತೊಟ್ಟನು. ಒಂದು ಗಂಡು ಗೊಡಲಿಯನ್ನು ತೆಗೆದುಕೊಂಡು ಹೊರಟನು. ಹೇಹಯರ ಕುಲವೆಲ್ಲ ಧ್ವಂಸವಾಯಿತು.

ಆಗ ದಶರಥನು ಆಳುತ್ತಿದ್ದನು. ವಸಿಷ್ಠರು ಅವನ ಗುರುಗಳು. ಅವರಿಗೆ ಪರಶುರಾಮನು ಕಂಕಣವಿರುವವರೊಡನೆ ಯುದ್ಧ ಮಾಡುವುದಿಲ್ಲ ಎನ್ನುವುದು ಗೊತ್ತು. ಅದರಿಂದ ಪರಶುರಾಮನು ಬಂದನು ಎಂದರೆ ದಶರಥನಿಗೆ ಮದುವೆಯ ಕಂಕಣವನ್ನು ಕಟ್ಟುವರು. ಪರಶುರಾಮನು ಇನ್ನೊಂದು ಸಲ ಬರುವೆನು ಎಂದು ಹೊರಟುಹೋಗುವನು. ಹೀಗೆಯೇ ಮುನ್ನೂರು ಸಲ ಆಯಿತು. ಮುನ್ನೂರು ಸಲವೂ ಮದುವೆಯ ಕಂಕಣವು ದಶರಥನನ್ನು ಕಾಪಾಡಿತು.



ಆ ವೇಳೆಗೆ ಪರಶುರಾಮನ ಕೋಪವೂ ಶಾಂತವಾಯಿತು. ದಶರಥನಿಗೆ ರಾಮನೆಂಬ ಮಗನು ಹುಟ್ಟಿದನು. ಪರಶುರಾಮನು ಶ್ರೀರಾಮನ ಮೇಲೆ ಕೊನೆಯ ಸಲ ಯುದ್ಧಕ್ಕೆ ಬಂದನು. ಆಗ ಆತನಿಗೆ ಸೋಲಾಯಿತು. ತನ್ನ ಬಿಲ್ಲವನ್ನೂ ಶ್ರೀರಾ ... ಒಪ್ಪಿಸಿ ... ಸ್ಸಿಗೆ ಹೋದನು. ಆದರಿಂದ ಜೊಂಡಿನಂತೆ ಇದ್ದು ಬದುಕಬೇಕು. ಎಂದು ನಾನು ಹೇಳಿದೆನು.''

ಅದನ್ನು ಕೇಳಿದ ವಾಯಸ ರಾಜನು ಸಂಜೀವಿ ಎಂಬ ಮಂತ್ರಿಯನ್ನು ಏನು ಮಾಡಬೇಕು ಎಂದು ಕೇಳಿದನು. ಆತನು "ದೇವ, ನನಗೆ ಸಂಧಿಯು ಸಮ್ಮತವಿಲ್ಲ. ನೀರು ಕಾದು ಬಿಸಿಯಾಗಿದ್ದರೆ ತಾನೇ ಏನು, ಬೆಂಕಿಯನ್ನು ಆರಿಸುವುದಿಲ್ಲವೇನು? ಅಲ್ಲದೆ ಅರಿಮರ್ದನನು ಕ್ರೂರನು, ಲೋಭಿಯು, ಧರ್ಮವಿಲ್ಲದವನು. ಸತ್ಯಧರ್ಮಗಳಿಲ್ಲದವನೊಡನೆ ಸಂಧಿ ಮಾಡಿಕೊಂಡರೂ ಸಂಧಿಯು ಉಳಿಯುವುದೇನು? ಹೀಗೆ ಸತ್ಯಧರ್ಮಗಳಿಲ್ಲದ ಕ್ರೂರರನ್ನು ಸುಖವಾಗಿ ಗೆಲ್ಲಬಹುದು. ಅಲ್ಲದೆ, ಈಗ ನಾವು ಸೋತಿರುವೆ ... ಗ ನಾವು ಸಂಧಿಯನ್ನು ಕೋರಿದರೆ ಅವನು ಇನ್ನೂ ಬಿಗಿದು ... ವನು. ಕಾದ ಎಣ್ಣೆಯ ಮೇಲೆ ನೀರು ಚುಮುಕಿಸಿದಂತೆ ಉರಿದು ಉಪ್ಪಾಗುವನು. ಆದರಿಂದ ಚಿಕ್ಕ ಸಿಂಹವು ದೊಡ್ಡಾನೆಯ ಮೇಲೆ ಬೀಳುವಂತೆ ಬಿದ್ದು ಕೊಲ್ಲಬೇಕು. ಅವನು ಬಲಿಷ್ಠನಾದರೆ ಮಾಯೆಯನ್ನಾದರೂ ಮಾಡಬೇಕು. ಹೆಣ್ಣುವೇಶ ಹಾಕಿಕೊಂಡು ಭೀಮನು ಕೀಚಕನನ್ನು ಕೊಲ್ಲಲಿಲ್ಲವೆ? ಯಮನಂತೆ ಭಯಂಕರನಾದ ಅರಸನನ್ನು ಕಂಡರೆ ಶತ್ರುಗಳು ಹೆದರುವರು. ದಯಾಲುವಾದ ಅರಸ

ನನ್ನ ಶತ್ರುಗಳು ಹುಲ್ಲಿಗಿಂತ ಹಗುರನೆನ್ನುವರು. ಯಾವ ಅರಸನ ಭೂಮಿಯು ಶತ್ರುಗಳ ರಕ್ತದಿಂದಲೂ, ಶತ್ರು ಪತ್ನಿಯರ ಕಣ್ಣೀರು ಗಳಿಂದಲೂ ನೆನೆಯುವುದಿಲ್ಲವೋ ಅವನು ಬದುಕಿದ್ದರೆ ತಾನೇ ಏನು? ಆದರಿಂದ ವಿಗ್ರಹವೇ ಸರಿ. ಎಂದು ನನ್ನ ಅಭಿಮ ತವು " ಎಂದು ಹೇಳಿದನು.

ಅರಸನು ಅನುಜೀವಿಯನ್ನು ಕೇಳಿದನು. ಅವನು ಹೇಳಿ ದನು:—" ದೇವ, ಅರಿಮರ್ದನನು ದುಷ್ಟನು, ನಮಗಿಂತ ಬಲಾ ಢ್ಯನು. ಮರ್ಯಾದೆಯಿಲ್ಲದವನು. ಮರ್ಯಾದೆಯಿಲ್ಲದವನೊಡನೆ ಸಂಧಿಯು ಯೋಗ್ಯವಲ್ಲ. ಬಲಾಢ್ಯನೊಡನೆ ವಿಗ್ರಹವು ತಕ್ಕುದಲ್ಲ. ಅದರಿಂದ ಯಾನ ಎಂದರೆ, ನಾವು ಈ ಸ್ಥಲವನ್ನು ಬಿಟ್ಟು ಬೇರೊಂದು ಸ್ಥಲವನ್ನು ಆಶ್ರಯಿಸುವುದೇ ತಕ್ಕದ್ದು. ಯಾನವು ಎರಡು ವಿಧವಾಗಿರುವುದು. ಮೊದಲನೆಯದು ಹೆದರಿದವರು ತಮ್ಮನ್ನು ಕಾಪಾಡಿಕೊಳ್ಳಲು ಅವಲಂಬಿಸುವದು: ಎರಡನೆಯದು ಹಗೆಯವರನ್ನು ಗೆಲ್ಲುವುದಕ್ಕಾಗಿ ಧೀರರು ಆಶ್ರಯಿಸುವದು. ಮೊದಲ ನೆಯದು ಪಲಾಯನವು, ಎರಡನೆಯದು ಯಾತ್ರೆಯು ನಮ್ಮ ಸ್ಥಳವು ಇತರರಿಗೆ ಸಿಕ್ಕದಂತೆ ಭದ್ರಪಡಿಸಿ, ಅನಂತರ ನಾವು ಇತರ ಸ್ಥಳಕ್ಕೆ ಹೋಗಿ, ಸಮಯ ಕಾದಿದ್ದು ಬಂದು ಶತ್ರುವಿನ ಮೇಲೆ ಬೀಳಬೇಕು. ಟಗರು ಹಿಂದಕ್ಕೆ ಹೋಗುವುದು ಏಕೆ? ಓಡಿಬಂದು ಗುದ್ದುವುದಕ್ಕೆ. ಸಿಂಹವು ಮೈಯೆಲ್ಲ ಅಡಗಿಸಿಕೊಳ್ಳುವು ದೇಕೆ? ಶತ್ರುವಿನ ಮೇಲೆ ಹಾರುವುದಕ್ಕೆ. ಹಾಗೆ ನಾನು ಹೇಳುವ ಈ ಯಾತ್ರೆಯೆಂಬುದು. ಶತ್ರುವು ಬಲವಾಗಿದ್ದಾಗ ಆ ದೇಶವನ್ನು ಬಿಟ್ಟು ದೇಶಾಂತರ ಹೋಗಬೇಕು. ಹಾಗಿಲ್ಲದೆ ನಮಗಿಂತ ಬಲ ವಾಗಿರುವವನ ಮೇಲೆ ಬಿದ್ದರೆ, ನಮ್ಮ ಕುಲವೇ ಕ್ಷಯವಾಗುವುದು."

ಆಗ ಅರಸನು ಪ್ರಜೀವಿಯನ್ನು ಕೇಳಿದನು. ಅವನು ಹೇಳಿದನು:—" ದೇವ, ಸಂಧಿ, ವಿಗ್ರಹ, ಯಾನ, ಎಂಬ ಈ ಮೂರೂ ನನಗೆ ಹಿಡಿಸವು. ನನಗೆ ಆಸನವೇ ಸರಿಯೆನ್ನಿಸುವುದು. (ಆಸನವೆಂದರೆ ಸ್ವಸ್ಥಾನದಲ್ಲಿಯೇ ಇರುವುದು.) ಕೇಳಿಲ್ಲವೇ ?

ನೀರಿನೊಳಿದ್ದಾ ಮೊಸಳೆಯು| ಆನೆಯನಾದರು ಹೊಡೆಯುವುದು ॥
ತನ್ನೆಡೆ ಬಿಟ್ಟೊಡೆ ಮೊಸಳೆಯ || ನಾಯಿಗಳೆಳೆದಾಡುವುವು || ೩ ||

" ತಿಳಿದವನು ಬಲವಂತರನ್ನು ಸೇರಿಸಿಕೊಂಡು ತನ್ನ ದುರ್ಗದಲ್ಲಿ ಇರಬೇಕು. ಶತ್ರುವಿಗೆ ಹೆದರಿಕೊಂಡು ತನ್ನ ಸ್ಥಾನವನ್ನು ಬಿಟ್ಟವನು ಮತ್ತೆ ಅಲ್ಲಿಗೆ ಬರುವುದಿಲ್ಲ. ಹಲ್ಲಿಲ್ಲದ ಹಾವು, ಮದವಿಲ್ಲದ ಆನೆ, ಸ್ಥಾನವಿಲ್ಲದ ಅರಸು, ಇವರನ್ನು ಯಾರುಬೇಕಾದರೂ ಆಡಿಸುವರು. ತನ್ನ ಸ್ಥಾನದಲ್ಲಿ ಇರುವ ಒಬ್ಬನು ನೂರು ಜನರೊಡನಾದರೂ ಹೋರಾಡಬಲ್ಲನು. ಅದರಿಂದ, ದುರ್ಗವನ್ನು ಬಲಪಡಿಸಿಕೊಂಡು, ಸುಭಟರನ್ನೂ ಬೇಕಾದ ಪದಾರ್ಥಗಳನ್ನೂ ತುಂಬಿಕೊಂಡು, ಯಾವಾಗಲೂ ಯುದ್ಧಕ್ಕೆ ಸಿದ್ಧನಾಗಿಯೇ ಇರಬೇಕು. ಬಳ್ಳಿಗಳೇ ಆಗಿರಲಿ, ಒಟ್ಟಗಿದ್ದರೆ, ಗಾಳಿಯು ಎಷ್ಟೇ ಬಲವಾಗಿದ್ದರೂ ಏನೂ ಮಾಡಲಾರದು. ಮರವು ಒಂದೇ ಒಂದಾದರೆ, ಅದೆಷ್ಟೇ ಬಲವಾಗಿದ್ದರೂ ಗಾಳಿಯನ್ನು ತಡೆದು ಬದುಕಲಾರದು. ಅದರಿಂದ ಸ್ಥಾನವನ್ನು ಬಿಡಬಾರದು. ಕೇಳಿಲ್ಲವೇ ? "

ಚಿಕ್ಕದು ಎಂದೆನೆ ಲಕ್ಷಿಸದೆ | ಮೂಷಕ ನುಗ್ಗಿತು ಗೂಡಿಂಗೆ ||
ಮುಳ್ಳನು ಚುಚ್ಚಲು ಬಲವಾಗಿ- ಕೆಳಗುರುಳಿತು ಇಲಿ ಮೃತವಾಗಿ || ೪ ||

ಅರಸನು ಅದೆಂತು ಎನಲು ಮಂತ್ರಿಯು ಹೇಳಿದನು:

# ಜೇನು ಗೂಡಿಗೆ ನುಗ್ಗಿದ ಇಲಿಯು ಕಥೆ

ಒಂದಾನೊಂದು ಕೊಳದ ತೀರದಲ್ಲಿ ಒಂದು ಛಾಯಾಪು ಸೀಗೆಯುಮೆಳೆಯಿತ್ತು. ಅದರಲ್ಲಿ ಜೇನುಗಳು ಒಂದು ಗೂಡು ಕಟ್ಟಿಕೊಂಡು ಸುಖವಾಗಿದ್ದುವು. ಆಗಾಗ ಗೂಡಿನಿಂದ ಜೇನುತುಪ್ಪವು ಸೋರುವುದು. ಒಂದು ಇಲ್ಲಿಯು ಬಂದು ಅದನ್ನು ನೆಕ್ಕಿಕೊಂಡು ಹೋಗುವುದು.

ಇಲಿಗೆ ಜೇನುತುಪ್ಪದ ಸವಿ ಹಲ್ಲಿಗಿಳಿಯಿತು. ಅದು ವಾಸನೆಯನ್ನು ಹಿಡಿದುಕೊಂಡು ಮೆಳೆಯ ಮಧ್ಯವಿದ್ದ ಗೂಡಿಗೆ ಹೋಯಿತು. ಅಲ್ಲಿ ಅಷ್ಟುಹೊತ್ತು ನಿಂತುಕೊಂಡು ನೋಡಿತು. ಸಣ್ಣ ಸಣ್ಣ ನೊಣಗಳು ಬಂದು ಬಂದು ಹೋಗುತ್ತಿರುವುದನ್ನು ಕಂಡು, "ಓ, ಸರಿ, ಇಲ್ಲಿರುವುದೆಲ್ಲಾ ಈ ನೊಣಗಳು. ಇವಕ್ಕೆ ನಾನು ಹೆದರಬೇಕೆ?" ಎಂದು ಗೂಡಿನೊಳಕ್ಕೆ ನುಗ್ಗಿಯೇ ಬಿಟ್ಟಿತು.



ಜೇನು ನೊಣಗಳೆಲ್ಲವು ಶತ್ರುವು ಬಂದನೆಂದು ಭರ್ರನೆ ಮೇಲಕ್ಕೆ ಎದ್ದುವು. ಇಲಿಯು ತನಗೆ ಹೆದರಿಕೊಂಡು ಓಡಿಹೋದುವು ಎಂದು

ಆನಂದದಿಂದ ಜೇನಿನ ಹೆಕ್ಕೆಗೆ ಬಾಯಿ ಹಾಕಿತು. ಅದು ಒಂದು ಸಲ ಕಚ್ಚಿತ್ತೋ ಇಲ್ಲವೋ? ಅಷ್ಟರೊಳಗಾಗಿಯೇ ಮತ್ತೆ ನೊಣಗಳೆಲ್ಲ ಹಿಂತಿರುಗಿ ಬಂದು ಅದನ್ನು ಮುಚ್ಚಿದುವು. ಮೂತಿಯಿಂದ ಹಿಡಿದು ಬಾಲದವರೆಗೆ ಕಣ್ಣು ಮೂಗೂ ಕೂಡ ಬಿಡದೆ ತಮ್ಮ ಮುಳ್ಳುನಿಂದ ಚುಚ್ಚಿ ಚುಚ್ಚಿ ಚುಚ್ಚಿದುವು. ಆ ನೋವು ತಡೆಯಲಾರದೆ ಇಲಿಯು ಒದ್ದಾಡಿ ಅಲ್ಲಿಂದ ಕೆಳಗೆ ಬಿತ್ತು. ಮೇಲಿನಿಂದ ಬೀಳುವಾಗ ಸೀಗೆಯ ಮುಳ್ಳುಗಳೂ ಗೋರಿದುವು. ಕೆಳಗೆ ಬೀಳುವುದಲ್ಲಿಯೇ ಇಲಿಯು ಸತ್ತು ಹೋಗಿತ್ತು. ಅದರಿಂದ ಸ್ಥಾನದಲ್ಲಿರುವವನನ್ನು ಶತ್ರುಗಳು ಏನೂ ಮಾಡಲಾರರು.''

ಮೇಘವರ್ಣನು ಚಿರಂಜೀವಿಯನ್ನು ಕರೆದು ಕೇಳಿದನು. ಚಿರಂಜೀವಿಯು ಹೇಳಿದನು :—ದೇವಾ, ನನಗೆ ಸಂಶ್ರಯವು ಸಮ್ಮತವು. (ಸಂಶ್ರಯವೆಂದರೆ ಸ್ನೇಹಿತರನ್ನು ಕಟ್ಟಿಕೊಳ್ಳುವುದು.) ಕೇಳಿಲ್ಲವೇ ?

ಶಕ್ತನಾದರು ಶೂರನಾದರು ಒಂಟಿಯಾದರೆ ಸಾಲದು ||
ಗಾಳಿಯಿಲ್ಲದೆ ಉರಿವ ಬೆಂಕಿಯು ಉರಿದುರಿದಾರಿ ಹೋಗುವುದು ||೫||

ಜೊತೆಯು ಬೇಕೈ ಎಲ್ಲ ಕಾರ್ಯಕು ಸಂಗವಿಲ್ಲದೆ ಗೆಲ್ಲದು॥
ಹೊಟ್ಟು ಬಿಟ್ಟರೆ ಕೆಟ್ಟುಹೋಯಿತು. ಭತ್ತ ಬೆಳೆಯದು ನೋಡಿಕೋ ||೬||

ಅದರಿಂದ ಮಹಾಪಾದವು ಇಲ್ಲಿಯೇ ಇರಬೇಕು. ಬಲವಾದ ಮಿತ್ರನನ್ನು ಸಂಪಾದಿಸಬೇಕು. ಅವನಿಂದ ಅರಿಮರ್ದನನಿಗೆ ತಕ್ಕ ಬದ್ಧಿ ಕಲಿಸಬೇಕು. ಹಾಗಿಲ್ಲದೆ ಸ್ವಾಮಿಯು ಈ ದುರ್ಗವನ್ನು ಬಿಟ್ಟು ಇನ್ನೆಲ್ಲಿಗಾದರೂ ಹೋದರೆ, ಯಾರೂ ಬಾಯಿಮಾತಿನಿಂದಲೂ ಸಹಾಯ ಮಾಡುವುದಿಲ್ಲ. ಕೇಳಿಲ್ಲವೆ ?

ಗಾಳಿಯು ಗೆಳೆಯನು ಬೆಂಕಿಗೆ ವನಗಳ ಸುಡುವಾಗ|
ಗಾಳಿಯೆ ಸೊಡರನೆ ಕೆಡಿಪನು ದೀಪವು ಉರಿವಾಗ ॥ ೭ ॥

ಅದರಿಂದ, ಕೈಲಾಗದವನಲ್ಲಿ ಯಾರಿಗೂ ವಿಶ್ವಾಸವಿರುವುದಿಲ್ಲ. ಬೊಳ್ಳು ಬಿದಿರೇ ಆಗಲಿ, ಒಟ್ಟಿಗೆ ಮೆಳೆಯಾಗಿದ್ದರೆ ಕಡಿಯುವುದು ಕಷ್ಟವಾಗುವುದು. ತಾವರೆಯೆಲೆಯ ಮೇಲೆ ನಿಂತ ನೀರು ಮುತ್ತಿನ ಹಾಗೆ ಕಾಣುವಂತೆ, ಜೊತೆಗೂಡಿದ್ದವನು ದುರ್ಬಲನಾದರೂ ಶತ್ರುಗಳಿಗೆ ಭಯಂಕರನಾಗುವನು. ಅದರಿಂದ ಸಂಶ್ರಯವೇ ಸರಿ.''

ಅನಂತರ ಮೇಘವರ್ಣನು ಮುದುಕನೂ ತನ್ನ ತಂದೆಗೂ ಮಂತ್ರಿಯಾಗಿದ್ದವನೂ, ಸಕಲ ನೀತಿಶಾಸ್ತ್ರಗಳನ್ನೂ ಬಲ್ಲವನೂ ಆದ ಸ್ಥಿರಜೀವಿಯನ್ನು ನಮಸ್ಕರಿಸಿ ಕೇಳಿದನು:—'' ತಾತ, ನೀನು ಇದ್ದರೂ ನಿನ್ನನ್ನು ಬಿಟ್ಟು ಇವರನ್ನೆಲ್ಲ ಕೇಳಿದ್ದು ಪರೀಕ್ಷಾರ್ಥವಾಗಿ. ಇವರು ಹೇಳಿರುವುದನ್ನೆಲ್ಲ ಕೇಳಿದೆ. ಇನ್ನು ಏನು ಮಾಡಬೇಕು ಎಂಬುದನ್ನು ಹೇಳು. ನಮಗೆ ಉಪದೇಶ ಮಾಡು'' ಎಂದನು. ಸ್ಥಿರಜೀವಿಯು ಹೇಳಿದನು:—ವತ್ಸ, ಈ ನಿನ್ನ ಸಚಿವರೆಲ್ಲರೂ ನೀತಿಶಾಸ್ತ್ರವನ್ನು ಹಿಡಿದೇ ಮಾತನಾಡಿದ್ದಾರೆ. ಅವರು ಹೇಳುವುದೂ ಆಯಾ ಕಾಲಕ್ಕೆ ತಕ್ಕಂತಿದೆ. ಆದರೂ ಈಗ ಮಾಡಬೇಕಾದುದು ದ್ವೈದೀಭಾವವು. (ಮೋಸವು) ಸಂಧಿ ವಿಗ್ರಹಗಳೆರಡನ್ನೂ ನೆಚ್ಚಬಾರದು. ಶತ್ರುವು ಬಲವಾಗಿರುವಾಗ ಮೋಸಮಾಡಿಯೇ ಗೆಲ್ಲಬೇಕು. ಶತ್ರುವಿಗೆ ನಂಬಿಕೆ ಹುಟ್ಟಿಸಬೇಕು. ನಾವು ನಂಬದಿರಬೇಕು. ಅವರಿಗೆ ಲೋಭವನ್ನು ಹುಟ್ಟಿಸಬೇಕು. ಹೀಗಾದರೆ ಶತ್ರುವನ್ನು ಹಾದಿಹಿಡಿಸಬಹುದು. ವೈದ್ಯರು ಬೆಲ್ಲವನ್ನು ತಿನ್ನಿಸಿ ಶ್ಲೇಷ್ಮವನ್ನು ಬೆಳೆಸಿಅನಂತರ ಅದನ್ನು ಕತ್ತರಿಸುವಂತೆ ಚಿಕಿತ್ಸೆಯಬಹುದಾದ ಶತ್ರುವನ್ನೂ ಬಲ್ಲವರು ಕೆಲವು ಕಾಲ ಬೆಳೆಸುವರು. ಏಕಭಾವವು ಆತ್ಮಜ್ಞಾನ ಸಂಪನ್ನರಾದ ಯತಿಗಳಿಗೆ ಮಾತ್ರವೇ ಹೊರತು ಮಿಕ್ಕವರಿಗೆಲ್ಲ ಅದರಲ್ಲಿಯೂ ಅರಸುಗಳಿಗೆ ಅನೇಕ ಭಾವವೇ ಹೊರತು ಏಕಭಾವವು ಕೂಡದು. ಈ ದ್ವೈಧೀ

ಭಾವವನ್ನು ಆಶ್ರಯಿಸಿ, ನೀನು ಸ್ವಸ್ಥಾನದಲ್ಲಿಯೇ ಇರಬೇಕು. ಲೋಭವನ್ನು ಹುಟ್ಟಿಸಿ ಅವನ ಮರ್ಮವನ್ನು ತಿಳಿದು ಸಾಧಿಸಲು ಶಕ್ತನಾಗುವೆ.''

ಮೇಘವರ್ಣನು "ತಾತ, ಆ ಶತ್ರುವು ಎಲ್ಲಿರುವನೆಂಬುದೇ ತಿಳಿಯುದಲ್ಲ. ಹಾಗಿರಲು ಅವನ ಮರ್ಮವನ್ನೆಂತು ತಿಳಿಯುವುದು?'' ಎಂದು ಕೇಳಿದನು. ಸ್ಥಿರಜೀವಿಯು ಹೇಳಿದನು:—"ವತ್ಸ, ಅವನೆಲ್ಲಿರುವನು, ಅವನ ಮರ್ಮವೇನು ಎನ್ನುವುದನ್ನು ಗೂಢಚಾರರು ತಿಳಿದು ಬರುವರು. ಕೇಳಿಲ್ಲವೆ?

ಗೋವು ತಿಳಿವುದುಗಂಧದಿಂ| ಪಾರ್ವ ತಿಳಿವನು ಶಾಸ್ತ್ರದಿಂ ||
ಅರಸು ತಿಳಿವನು ದೂತರಿಂ| ನರರು ತಿಳಿವರು ಕಣ್ಗಳಿಂ || ೮ ||

ತನ್ನವರಲ್ಲಿಯೂ ಶತ್ರುಗಳಲ್ಲಿಯೂ ಇರುವ ಮರ್ಮಗಳನ್ನು ಚಾರರನ್ನು ಬಿಟ್ಟು ಅರಿಯುತ್ತಿರುವ ಅರಸನು ಎಂದಿಗೂ ದುರ್ಗತಿಯನ್ನು ಹೊಂದುವುದಿಲ್ಲ. ವೈದ್ಯ, ಜೋಯಿಸ, ವಿದ್ವಾಂಸರು ನಮ್ಮಲ್ಲಿರುವವರ ಮರ್ಮಗಳನ್ನು ಭೇದಿಸುವರು. ಹಾವಾಡಿಗ, ಹುಚ್ಚರು ಶತ್ರುಗಳ ಮರ್ಮವನ್ನು ಭೇದಿಸುವರು.'' ಆಗ ಮೇಘವರ್ಣನು ಸ್ಥಿರಜೀವಿಯನ್ನು ಕುರಿತು, "ತಾತ, ನಮಗೂ ಈ ಗೂಗೆಗಳಿಗೂ ಇಷ್ಟು ಬಲವಾದ ವೈರವು ಹುಟ್ಟುವುದಕ್ಕೆ ಕಾರಣವೇನು?'' ಎಂದು ಕೇಳಿದನು. ಅದಕ್ಕೆ ಮಂತ್ರಿಯು ಹೇಳಿದನು:—



## ವೈರವು ಬಂದ ಕಥೆ

ಹಿಂದೆ, ಹಂಸ, ಗಿಣಿ, ಕೊಕ್ಕರೆ, ಕೋಗಿಲೆ, ಗೂಗೆ, ನವಿಲು, ಪಾರಿವಾಳ, ಮೊದಲಾದ ಹಕ್ಕಿಗಳೆಲ್ಲವೂ ಒಂದು ಕಡೆ ಸಭೆ ಸೇರಿ

ಯೋಚಿಸಿದುವು:-"ನಮಗೆ ಗರುಡನು ಅರಸನಾಗಿರುವನು. ಆತನೋ ವಿಷ್ಣುವಿಗೆ ಪರಮ ಭಕ್ತನು. ನಮ್ಮನ್ನು ಕುರಿತು ಅವನು ಯೋಚಿಸುವುದೂ ಇಲ್ಲ. ಹೀಗೆ ಕೇವಲ ಹೆಸರಿಗೆ ಮಾತ್ರ ಸ್ವಾಮಿಯಾಗಿರುವ ಅರಸನಿಂದ ನಮಗೇನು ಪ್ರಯೋಜನ? ದಿನದಿನವೂ ನಮ್ಮನ್ನು ಮನುಷ್ಯರು ಸಾವಿರಾರುಗಳಿ ಕೊಲ್ಲುತ್ತಿದ್ದರೂ ಆತನು ಏನಾದರೂ ಮಾಡಿದ್ದಾನೆಯೇ? ಕೇಳಿಲ್ಲವೆ?

ಓದು ಹೇಳದ ಗುರುವು| ಮಂತ್ರ ಬರದರ್ಚಕನು ||
ರಕ್ಷೆ ನೀಡದ ನೃಪನು| ನಲವು ನುಡಿಯದ ಭಾರ್ಯೆ ||
ಮುರಿದ ನಾವೆಯು ತೆರದೊಳಿವರ ಬಿಡಬೇಕು ||೯||



ಅದರಿಂದ ನಮ್ಮ ಕಷ್ಟಸುಖಗಳನ್ನು ನೋಡುವ ರಾಜನೊಬ್ಬನನ್ನು ಮಾಡಿಕೊಳ್ಳೋಣ." ಎಂದು ಚಿಂತಿಸಿ, ನೋಡುವುದಕ್ಕೆ ಚೆನ್ನಾಗಿರುವನೆಂದು ಗೂಗೆಯನ್ನು ಅರಸನಾಗಿ ಆರಸಿಕೊಂಡರು

ಅರಸುತನದ ಅಭಿಷೇಕಕ್ಕಾಗಿ ಬೇಕುಬೇಕಾದ ಪದಾರ್ಥಗಳೆಲ್ಲವೂ ಸಿದ್ಧವಾದುವು. ಸಿಂಹಾಸನವನ್ನು ಹಾಕಿ, ಅದರ ಮೇಲೆ ಹುಲಿಯ ಚರ್ಮವನ್ನು ಹಾಸಿ, ಮಂತ್ರಗಳನ್ನೂ ಹಾಡುಗಳನ್ನೂ ಹೇಳುತ್ತಿರುವ ವೇಳೆಯಲ್ಲಿ ಒಂದು ಕಾಗೆಯು ಎಲ್ಲಿಂದಲೋ ಬಂತು.

"ಇದೇನು ಪಕ್ಷಿ ಕುಲವೆಲ್ಲ ಇಲ್ಲಿ ಸೇರಿದೆ. ಏನೋ ದೊಡ್ಡ ಉತ್ಸವ ನಡೆಯುತ್ತಿದೆ" ಎಂದುಕೊಂಡಿತು. ಪಕ್ಷಿಗಳೂ ಆ ಕಾಗೆಯನ್ನು ನೋಡಿ "ಪ್ರಾಣಿಗಳಲ್ಲಿ ನರಿಯು ಹೇಗೋ ಹಕ್ಕಿಗಳಲ್ಲಿ ಈ ಕಾಗೆಯು ಹಾಗೆ ಬುದ್ಧಿವಂತನು. ಇದನ್ನೂ ಕೇಳಬೇಕಾಗಿತ್ತು" ಎಂದು ಕೊಂಡುವು. ಆ ವೇಳೆಗೆ ಕಾಗೆಯು "ಇದೇನಿದು ?" ಎಂದು ಕೇಳಿತು. ಅವು "ನಮಗೆ ರಾಜನಿಲ್ಲ ಅದರಿಂದ ಒಬ್ಬ ರಾಜನನ್ನು ಆರಿಸುತ್ತಿದ್ದೇವೆ. ಈ ಗೂಗೆಯನ್ನು ಅರಸನನ್ನು ಮಾಡಬೇಕೆಂದು ಇದ್ದೇವೆ. ನೀನೇನು ಹೇಳುವೆ?" ಎಂದುವು. ಕಾಗೆಯು ನಕ್ಕು "ನವಿಲು, ಹಂಸ, ಮೊದಲಾದ ಬೇಕುಬೇಕಾದ ಹಕ್ಕಿಗಳೆಲ್ಲ ಇರು ವಾಗ ಈ ಹಗಲು ಕುರುಡನಿಗೆ ಅರಸುತನವೆ? ಈ ಸೊಟ್ಟ ಮೂತಿಗೆ ಸಿಂಹಾಸನವೆ? ಚೆನ್ನಾಯಿತು. ನಾನು ಒಪ್ಪುವುದಿಲ್ಲ. ಕೇಳಿಲ್ಲವೆ ?

ಅರಸು ಕೀಳನಾದರೆ ಧರ್ಮ ಮರೆತು ಹೋಹುದು ॥
ಧರಣಿ ಬೆಳೆಯ ಬೆಳೆಯದು| ನರರ ಗೋಳು ಬೆಳೆವುದು || ೧೦ ||

ಅಲ್ಲದೆ ಒಬ್ಬ ರಾಜನಿರುವಾಗ ಇನ್ನೊಬ್ಬ ರಾಜನನ್ನು ಮಾಡು ವುದೆಂಬುದೇನು ? ಆಕಾಶಕ್ಕೆ ಒಬ್ಬ ಸೂರ್ಯ ಎನ್ನುವ ಹಾಗೆ ಪ್ರಜೆಗ ಳಿಗೆ ಒಬ್ಬನೇ ರಾಜ. ಅಲ್ಲದೆ ಗರುಡನು ಸಾಮಾನ್ಯನೇ? ಕೇಳಿಲ್ಲವೆ ?

ಮಹಿಮರಾ ಹೆಸರಿನಿಂದಲೆ ಸಿದ್ಧಿಯಹುದು|
ಚಂದ್ರಮನ ಹೆಸರೆತ್ತಿ ಬದುಕಿದುವು ಮೊಲಗಳು || ೧೧ ||

ಆ ಹಕ್ಕಿಗಳು ಅದು ಹೇಗೆ ಎಂದು ಕೇಳಲು ಕಾಗೆಯು ಹೇಳಿತು:—



# ಚತುರ್ದಂತನ ಕಥೆ



ಒಂದಾನೊಂದು ಕಾಡಿನಲ್ಲಿ ಚತುರ್ದಂತನೆಂಬ ಮಹಾ ಗಜವಿತ್ತು. ಅದು ಒಂದು ಹಿಂಡಿಗೆ ಸಲಗವಾಗಿ ಸುಖವಾಗಿತ್ತು. ಆ ಆನೆಯ ಕಾಡಿನಲ್ಲಿ ಒಂದು ಸಲ ದೊಡ್ಡ ಅನಾವೃಷ್ಟಿಯು ಬಂದು, ಮಳೆಗಳು ಇಲ್ಲದೆ ಹೋದುವು. ಕೆರೆಗಳು, ಮಡುಗಳು, ಸರೋವರಗಳು ಒಣಗಿ ಹೋದುವು. ಆಗ ಆನೆಗಳೆಲ್ಲ ಆ ಸಲಗನನ್ನು ಕುರಿತು "ದೇವಾ, ಮರಿಗಳೆಲ್ಲ ಬಾಯಾರಿಕೆಯಿಂದ ಸಾಯುವಂತಾಗಿವೆ: ಕೆಲವು ಸತ್ತೂ ಹೋಗಿವೆ. ಅದರಿಂದ ಎಲ್ಲಾದರೂ ನೀರಿರುವ ಕಡೆಯನ್ನು ನೋಡಬೇಕು. ಸದ್ಯಕ್ಕೆ ನೀರು ಕುಡಿದು ಬದುಕೋಣ" ಎಂದುವು. ಆಗ ಆನೆಯು ಹಾಗೇ ನಿಂತುಕೊಂಡು ಬಹುವಾಗಿ ಯೋಚನೆಮಾಡಿ ಕೊನೆಗೆ ಹೇಳಿತು: "ಜನಗಳು ಹೋಗುವುದಕ್ಕೆ ಆಗದಿರುವ ಕಡೆಯಲ್ಲಿ ಒಂದು ದೊಡ್ಡ ಮಡುವಿದೆ. ಅದು ಯಾವಾಗಲೂ ಪಾತಾಲ ಗಂಗಾಜಲದಿಂದ ಪೂರ್ಣವಾಗಿಯೇ ಇರುತ್ತದೆ. ಅಲ್ಲಿಗೆ ಹೋಗೋಣ" ಎಂದು ಹೇಳಿ ಆನೆಗಳ ಹಿಂಡನ್ನು ಕರೆದುಕೊಂಡು ಐದು ರಾತ್ರಿಗಳು ನಡೆದು ಅಲ್ಲಿಗೆ ಹೋಯಿತು. ಆನೆಗಳೂ

ಅಲ್ಲಿ ಬೆಳಗಿನಿಂದ ಸಂಜೆಯುವರೆಗೂ ತಮಗೆ ಮನಬಂದಂತೆ ನೀರಿನಲ್ಲಿ ಆಡುತ್ತಿದ್ದು ಹೋದುವು.

ಆ ಸರೋವರದ ಸುತ್ತಲೂ ಮೊಲಗಳು ಮನೆಮಾಡಿ ಕೊಂಡಿದ್ದುವು. ಆ ಆನೆಗಳು ಬಂದು ಹೋಗುವಾಗ ಅವುಗಳ ಕಾಲಿಗೆ ಸಿಕ್ಕಿ ಎಷ್ಟೋ ಮೊಲಗಳು ಹತವಾದುವು. ಮೊಲಗಳ ಬಿಲಗಳಂತೂ ಹೇಳಲು ಹೆಸರಿಲ್ಲದೆ ಹೋದುವು. ಅವುಗಳಿಗೆ ಸಿಕ್ಕಿ ಬದುಕಿಕೊಂಡರೂ ಅಂಗಭಂಗವನ್ನು ಹೊಂದಿ ಸತ್ತಂತೆ ಆದುವು. ಅವೆಷ್ಟೋ ಹೀಗೆ ಆಗಲು, ಕೊನೆಗೆ ಅವುಗಳೆಲ್ಲಾ, ಆನೆಗಳು ಹೋದ ಮೇಲೆ ಸಭೆ ಮಾಡಿದುವು: "ಹೀಗಾದರೆ ನಾವು ಬದುಕುವಂತಿಲ್ಲ. ಆ ಆನೆಗಳ ಹಿಂಡು ದಿನವೂ ಬರುವುದು. ಅದಕ್ಕೆ ಇನ್ನೆಲ್ಲೂ ನೀರಿಲ್ಲ. ಅವು ಒಂದು ಸಲ ಬಂದು ಹೋದರೇನೇ ನಮಗೆ ಇಷ್ಟು ಅವಸ್ಥೆಯೆಂದ ಮೇಲೆ, ದಿನ ದಿನವೂ ಬಂದರೆ ನಮ್ಮ ಗತಿಯೇನು? ನಾವು ಉಳಿಯುವಂತೆಯೇ ಇಲ್ಲ. ಕೇಳಿಲ್ಲವೆ ?

ಮುಟ್ಟಿ ಮುಟ್ಟುತಲೆ ಕೊಲ್ಲುವುದು ಆನೆ ॥
ಮೂಸಿ ಮೂಸುತಲೆ ಕೊಲ್ಲುವುದು ಹಾವು ॥
ನಗುತ ನಗುತಲೇ ಕೊಲ್ಲುವನು ಅರಸು ॥
ಮಾನ ತೋರುತಲೆ ಕೊಲ್ಲುವನು ದುಷ್ಟ ॥ ೧೨ ॥

ಅದರಿಂದ ಏನಾದರೊಂದುಪಾಯ ಮಾಡಲೇಬೇಕು" ಎಂದು ಎಲ್ಲವೂ ಏಕ ಕಂಠದಿಂದ ಹೇಳಿದುವು. ಒಂದು ಹೇಳಿತು; "ಈ ದೇಶವನ್ನು ಬಿಟ್ಟು ಬೇರೆ ದೇಶಕ್ಕೆ ಹೋಗೋಣ. ಮನುವೂ ವ್ಯಾಸನೂ ಹೇಳಿಲ್ಲವೆ ?

ಕುಲಕಾಗಿ ಬಿಡುವುದೊಬ್ಬನನು। ಕುಲವನೇ ಬಿಡು ಗ್ರಾಮಕಾಗಿ॥
ಗ್ರಾಮವನು ಬಿಡು ದೇಶಕಾಗಿ। ಧರೆಯ ಬಿಡಬೇಕ ತನಗಾಗಿ ॥೧೩॥

ಕ್ಷೇಮವನು ತಪ್ಪದೆಯೆ ಕೊಟ್ಟು। ಸಸ್ಯಗಳ ಚೆನ್ನಾಗಿ ಬೆಳೆವ।
ಪಶುವೃದ್ಧಿಗೈವ ಭೂಮಿಯನು। ನೃಪತಿ ಬಿಡಬೇಕು ತನಗಾಗಿ ॥೧೪॥

ಆಪದಕೆ ಧನವ ನಿಡಬೇಕು| ಧನವ ಬಿಡಬೇಕು ಸತಿಗಾಗಿ ॥
ಧನವನಾಗಲಿ ಸತಿಯನಾಗಲಿ | ಸತತ ಬಿಡಬೇಕು ತನಗಾಗಿ ॥೧೫॥

ಇನ್ನು ಕೆಲವರು ಹೇಳಿದರು:- ಉಂಟೆ, ತಾತ ಮುತ್ತಾತ ರಿಂದ ಇದ್ದುಕೊಂಡಿರುವ ಈ ಸ್ಥಾನವನ್ನು ಥಟ್ಟನೆ ಬಿಡುವುದು ಎಂದರೆ ಹೇಗೆ? ಆ ಆನೆಗಳು ಮತ್ತೆ ಬರುವುದಕ್ಕಿಂತ ಮುಂಚೆಯೇ ಅವುಗಳನ್ನು ಹೆದರಿಸುವುದಕ್ಕೆ ಏನಾದರೊಂದು ಉಪಾಯವನ್ನು ಮಾಡಿ. ಕೇಳಿಲ್ಲವೆ?

ವಿಷವಿಲ್ಲದಿದ್ದರೂ ಹಾವು ಹೆಡೆಯೆತ್ತಬೇಕು ||
ವಿಷವಿರಲಿ ಇರದಿರಲಿ ಹೆಡೆ ನೋಡೆ ಭೀತಿಯಹುದು || ೧೬ ||

ಮಿಕ್ಕವರು ಅದಕ್ಕೆ ಒಪ್ಪಿದರು. ಒಂದು ಉಪಾಯವನ್ನೂ ಒಬ್ಬರು ಹೇಳಿದರು:— ಅವರನ್ನು ಹೆದರಿಸುವುದಕ್ಕೆ ಒಂದು ಒಂದು ಉಪಾಯವಿದೆ. ನಮ್ಮ ರಾಜನಾದ ವಿಜಯದತ್ತನೆಂಬುವನು ಚಂದ್ರ ಮಂಡಲದಲ್ಲಿ ಇದ್ದಾನೆ. ಅವನು ಕಳುಹಿಸಿದನೆಂದು ಒಬ್ಬ ದೂತ ನನ್ನು ಈ ಸಲಗನ ಹತ್ತಿರಕ್ಕೆ ಕಳುಹಿಸೋಣ. ಆ ದೂತನು ''ಚಂದ್ರ ನು ನೀವು ಇಲ್ಲಿಗೆ ಬರುವುದನ್ನು ನಿಷೇಧಿಸಿದ್ದಾನೆ'' ಎಂದು ಹೇಳಲಿ. ಆಗ ಚಂದ್ರನು ಬೇಡವೆಂದನೆಂದು ಹೆದರಿ ಅವು ನಿಂತು ಹೋಗು ವುವು.''

ಇತರರು ಹೇಳಿದರು:-''ಉಪಾಯವೇನೋ ಚೆನ್ನಾಗಿದೆ. ನಮ್ಮ ಲಂಬಕರ್ಣನು ದೂತನಾಗಿ ಹೋಗಲಿ. ಅವನು ರಚನೆ ರಚನೆಯಾಗಿ ಮಾತು ಆಡಬಲ್ಲವನು. ದೂತನು ಏನು ಮಾಡಬೇಕೆಂದು ಅರಿತ ವನು.'' ಎಂದರು. ಅದರಂತೆಯೇ ಲಂಬಕರ್ಣನು ಚಂದ್ರದೂತ ನಾಗಿ ಹೋಗುವುದು ಎಂದಾಯಿತು.

ಲಂಬಕರ್ಣನು ಆನೆಗಳ ಹಿಂಡು ಬರುವ ಮಾರ್ಗದಲ್ಲಿ ಎತ್ತರ ವಾದ ಬಂಡೆಯ ಮೇಲೆ ಕುಳಿತು, ಆ ಸಲಗನನ್ನು ಮಾತನಾಡಿಸಿ ದನು: ''ಎಲೆ ದುಷ್ಟಗಜ, ಏನೂ ಲಕ್ಷ್ಯವಿಲ್ಲದೆ, ಕೊಂಚವೂ ಹೆದರಿಕೆ

ಯಿಲ್ಲದೆ ಚಂದ್ರನ ಸರೋವರಕ್ಕೆ ಬರುತ್ತಿದ್ದೀಯೇ? ನೀನು ಬರ ಕೂಡದು. ಹಿಂತಿರುಗಿ ಹೋಗು.'' ಎಂದುದನ್ನು ಕೇಳಿ, ಆನೆಯು ಆಶ್ಚರ್ಯಪಟ್ಟು, ''ಅಯ್ಯಾ, ನೀನು ಯಾರು ?'' ಎಂದಿತು. ಅದಕ್ಕೆ ಆ ಮೊಲವು ''ನಾನು ಚಂದ್ರ ಮಂಡಲದಲ್ಲಿರುವ ಲಂಬಕರ್ಣನು. ಭಗವಾನ್ ಚಂದ್ರನು ನಿನ್ನ ಬಳಿಗೆ ಅಟ್ಟಿದ ದೂತನು.'' ಎಂದಿತು. ಆನೆಯು ''ಭಗವಾನ್ ಚಂದ್ರನು ಏನು ಅಪ್ಪಣೆ ಮಾಡಿರುವನೋ ಹೇಳು.'' ಎನ್ನಲು, ಮೊಲವು ''ಹಿಂದಿನ ದಿವಸ ನೀನು ನಿನ್ನ ಹಿಂಡಿನೊಡನೆ ಇಲ್ಲಿಗೆ ಬಂದಾಗ ಎಷ್ಟು ಸಾವಿರ ಮೊಲಗಳಿಗೆ ಕೇಡಾಯಿತು ಬಲ್ಲೆಯಾ? ಮೊಲಗಳು ನಮ್ಮವರೆಂದು ಕಾಣೆಯಾ? ಅದರಿಂದ ಬದುಕಬೇಕೆಂದಿದ್ದರೆ ಹಿಂತಿರುಗು. ಇನ್ನು ಇಲ್ಲಿಗೆ ಬರಬೇಡ. ಎಂದು ಭಗವಾನ್ ಚಂದ್ರನ ಅಪ್ಪಣೆಯಾಗಿರುವುದು. ಈಗ ಚಂದ್ರನೂ ತನ್ನ ಕಡೆಯವರ ದುಃಖವನ್ನು ವಿಚಾರಿಸಲು ಈ ಸರೋವರಕ್ಕೆ ಬಂದಿರುವನು. ನೋಡು,'' ಎಂದು ನೀರಿನಲ್ಲಿ ಪ್ರತಿಬಿಂಬಿಸಿದ್ದ ಚಂದ್ರನ ಬಿಂಬವನ್ನು ತೋರಿಸಿತು.

ಆನೆಯು ನೀರಿನಲ್ಲಿರುವ ಚಂದ್ರನ ಪ್ರತಿಬಿಂಬವನ್ನು ನೋಡಿತು. ಅದು ಅಲೆಗಳಿಗೆ ಸಿಕ್ಕಿ ಕುಣಿಯುತ್ತಿರಲು, ಆನೆಗೆ ಚಂದ್ರನು ಕೋಪಗೊಂಡು ಹಾರಾಡುತ್ತಿರುವನು ಎನ್ನಿಸಿತು. ಆ ಬಿಂಬಕ್ಕೆ ಕೈ ಮುಗಿದು ''ದೇವ, ಅಪರಾಧವನ್ನು ಮನ್ನಿಸು. ಇನ್ನೂ ಇತ್ತ ಕಡೆ ಬರುವುದಿಲ್ಲ.'' ಎಂದು ತನ್ನವರನ್ನು ಕರೆದುಕೊಂಡು ಹೊರಟು ಹೋಯಿತು. ಮೊಲಗಳು ಸುಖವಾಗಿದ್ದುವು. ಅದರಿಂದ ನಾನು ''ಚಂದ್ರಮನ ಹೆಸರೆತ್ತಿ ಬದುಕಿದುವು ಮೊಲಗಳು'' ಎಂದು ಹೇಳಿದುದು. ಹಾಗಿಲ್ಲದೆ, ಕೀಳಾದವನನ್ನು ಕಟ್ಟಿಕೊಂಡರೆ ಆದೀತೆ? ಕೇಳಿಲ್ಲವೆ ?

ಮೊಲವು ಹಕ್ಕಿಯು ಕಾದಿದುವು। ನ್ಯಾಯ ಕೇಳಲು ಹೋದುವು ॥
ಬೆಕ್ಕು ಹೇಳಿತು ನ್ಯಾಯವಾ। ತಿಂದು ಬಿಟ್ಟಿತು ಇಬ್ಬರಾ ॥ ೧೩ ||

ಹಕ್ಕಿಗಳು "ಅದು ಹೇಗೆ ?" ಎಂದು ಕೇಳಿದುವು. ಕಾಗೆಯು ಹೇಳಿತು:–

ನಾನು ಹಿಂದೆ ಒಂದು ಮರದಲ್ಲಿ ವಾಸವಾಗಿದ್ದೆನು. ಅದೇ ಮರದಲ್ಲಿ ಕೆಳಗೆ ಒಂದು ಗುಬ್ಬಿಯು ಒಂದು ಪೊಟರೆಯಲ್ಲಿ ಇತ್ತು ನಾವಿಬ್ಬರೂ ಆಗಾಗ ಅಷ್ಟು ಹೊತ್ತು ಸೇರುವೆವು: ದೇವರ್ಷಿ ಬ್ರಹ್ಮರ್ಷಿಗಳ ಪುರಾಣ ಕಥೆಗಳನ್ನೂ ನಾವು ಹೋಗಿ ಬಂದ ಕಡೆಯಲ್ಲಿ ಕಂಡ ವಿಚಿತ್ರಗಳನ್ನೂ ಹೇಳಿಕೊಳ್ಳುತ್ತ ವಿನೋದವಾಗಿ ಅಷ್ಟು ಹೊತ್ತು ಕಳೆಯುವೆವು.

ಹೀಗೆ ಇರಲು, ಒಂದು ಆ ಗುಬ್ಬಿಯು ಸ್ನೇಹಿತಿನೊಡನೆ ಭತ್ತವು ಕಳಿತಿದ್ದ ಇನ್ನೊಂದು ಗ್ರಾಮಕ್ಕೆ ಹೋಯಿತು. ಅಲ್ಲಿ ಕೆಲವು ದಿನ ವಿದ್ದು ಹಿಂತಿರುಗಿ ಬರುವ ವೇಳೆಗೆ ಆ ಗುಬ್ಬಿಯಿದ್ದ ಪೊಟರೆಗೆ ಒಂದು ಮೊಲವು ಬಂದು ಸೇರಿಕೊಂಡಿತ್ತು. ನಾನು "ಎಷ್ಟು ದಿನವಾದರೂ ಈ ಗುಬ್ಬಿಯು ಬರಲಿಲ್ಲ. ಪಾಪ, ಏನಾಯಿತೋ?" ಎಂದು ವ್ಯಥೆಪಡುತ್ತ ಅದನ್ನೇ ಅಲ್ಲಿಂದ ಓಡಿಸಲಿಲ್ಲ.

ಕೆಲವು ದಿನವಾದಮೇಲೆ ಭತ್ತವನ್ನು ಚೆನ್ನಾಗಿ ತಿಂದು ಕೊಬ್ಬಿದ ಗುಬ್ಬಿಯು ಹಿಂತಿರುಗಿ ಬಂತು. ಕೇಳಿಲ್ಲವೆ ?

ಸ್ವರ್ಗಕೆ ಹೋದರು ಸುಖವಿಲ್ಲ ||
ಬಗ್ಗಿದ ಮನೆ ಬಿಟ್ಟನ್ನಿಲ್ಲ || ೧೮ ||

ಅದು ಬಂದು ಪೊಟರೆಯಲ್ಲಿರುವ ಮೊಲವನ್ನು ನೋಡಿ "ಎಲೆ ಮೊಲವೆ, ನೀನು ಮಾಡಿರುವುದು ಸರಿಯಲ್ಲ. ನನ್ನ ಮನೆಗೆ ನುಗ್ಗಿರುವುದು ನ್ಯಾಯವಲ್ಲ. ಬಿಟ್ಟು ಹೋಗು" ಎಂದಿತು. ಮೊಲವು, " ಈ ಮನೆಯು ನಿನ್ನದಲ್ಲ. ಬಾವಿ, ಕೊಳ, ಗುಡಿ, ಮೊದಲಾದವುಗಳಲ್ಲಿ ಯಾರು ಇದ್ದರೆ ಅವು ಅವರವು. ಮನುಷ್ಯರಾದರೆ ಹತ್ತು ವರ್ಷ ಇದ್ದರೆ ಆ ಸ್ಥಳವು ಅವರದಾಗುವುದು. ಮೃಗಗಳಿಗೂ

ಪಕ್ಷಿಗಳಿಗೂ ಯಾರು ಯಾರು ಎಲ್ಲಿ ಎಲ್ಲಿ ಇದ್ದರೆ ಆಯಾ ಸ್ಥಾನವು ಅವರವರದು. ಅದರಿಂದ ಇದು ನನ್ನದೇ! ನಿನ್ನದಲ್ಲ" ಎಂದಿತು,

"ನೀನು ಧರ್ಮಶಾಸ್ತ್ರವನ್ನು ಹೇಳುವುದಾದರೆ ಬಲ್ಲವರಹತ್ತಿರ ಹೋಗೋಣ, ಬಾ. ಅವರು ಹೇಳಿದಂತೆ ಇಬ್ಬರೂ ಕೇಳೋಣ" ಎಂದು ಗುಬ್ಬಿಯು ಹೇಳಿತು. ಅದೂ ಸರಿಯೆಂದು ಒಪ್ಪಿಕೊಂಡಿತು. ಇಬ್ಬರೂ ನ್ಯಾಯವನ್ನು ಹುಡುಕಿಕೊಂಡು ಹೊರಟವು. ನಾನೂ ಇದು ಏನಾಗುವುದೋ ನೋಡೋಣ ಎಂದು ಹಿಂದೆಯೇ ಹೋದೆನು.

ಇಷ್ಟರಲ್ಲಿ ಇವರಿಬ್ಬರ ಜಗಳವನ್ನು ಕೇಳಿದ ಒಂದು ಕಾಡು ಬೆಕ್ಕು, ದಾರಿಯಲ್ಲಿ ದರ್ಭೆಯನ್ನು ಕೈಯಲ್ಲಿ ಹಿಡಿದುಕೊಂಡು, ಕಣ್ಣು ಮುಚ್ಚಿಕೊಂಡು, ಕೈಗಳನ್ನೆತ್ತಿಕೊಂಡು, ಕಾಲು ಅರ್ಧ ಊರಿ ನಿಂತು, ಸೂರ್ಯನನ್ನು ನೋಡುತ್ತ ಧರ್ಮೋಪದೇಶವನ್ನು ಆರಂಭಿಸಿತ್ತು: " ಈ ಸಂಸಾರವೆಂಬುದು ಅಸಾರವು. ಪ್ರಾಣಗಳು ಯಾವ ಕ್ಷಣದಲ್ಲಿ ಹಾರಿ ಹೋಗುವುವೋ ಯಾರೂ ತಿಳಿಯರು. ನೆಂಟರಿಷ್ಟರು ಸೇರುವುದೆಲ್ಲ ಕನಸಿನಂತೆ. ಮನೆ ಮಠ ಇವುಗಳೆಲ್ಲ ಇಂದ್ರ ಜಾಲದಂತೆ, ಅದರಿಂದ ಧರ್ಮವನ್ನು ಹಿಡಿಯಿರಿ. ಬೇರೆ ಗತಿಯಿಲ್ಲ. ಕೇಳಿಲ್ಲವೇ?

ರಾಗ – ಕೇದಾರಗೌಳ

ದೇಹ, ನಿತ್ಯವಲ್ಲ | ವಿಭವವು ಶಾಶ್ವತವಲ್ಲ ‖ ಪ ‖
ಮರಣ, ಬೆನ್ನಹಿಂದಿದೆ | ಮಾಡಿರಿ ಧರ್ಮ ‖ ಅ ‖
ಧರ್ಮವ ಬಿಟ್ಟವ | ಬದುಕಿದರೇನಂತೆ ‖
ಕಮ್ಮಾರ ನಂಗಡಿ | ತಿದಿಯಂತೆ ಉಸಿರಾಡಿ ‖ ೧ ‖
ಹೂವಿಗಿಂತಲು ಹಣ್ಣು | ಮೊಸರಿಗಿಂತಲು ತುಪ್ಪ ‖
ಹಿಂಡಿಗಿಂತಲು ಎಣ್ಣೆ | ಮಿಗಿಲು ಭೋಗಕೆ ಧರ್ಮ ‖ ೨ ‖
ನುಡಿಯೊಂದರಲ್ಲಿಯೆ | ಹೇಳುವೆ ಧರ್ಮವ ‖
ಉಪಕಾರವೇ ಪುಣ್ಯ | ಹಿಂಸೆಯೇ ಪಾಪ ‖ ೩ ‖

ತನಗೆ ಬಲ್ಲದುದೊಂದೂ| ಅನ್ಯರಿಗೇಕೆಂದು ||
ತನ್ನಂತೆ ಇತರರ| ಭಾವಿಸುವುದೇ ಧರ್ಮ || ೪ || ||೧೯ ||

ಹೀಗೆ ಧರ್ಮೋಪದೇಶ ಮಾಡುತ್ತಿರುವ ಬೆಕ್ಕನ್ನು ಕಂಡು ಮೊಲವು ಹೇಳಿತು: "ಎಲೈ ಗುಬ್ಬಿಯೇ, ಈ ನದೀ ತೀರದಲ್ಲಿ ಯಾವನೋ ಒಬ್ಬ ತಪಸ್ವಿಯು ಧರ್ಮವನ್ನು ಹೇಳುತ್ತಿರುವನು. ಈತನನ್ನು ಕೇಳೋಣ" ಎನ್ನಲು, ಗುಬ್ಬಿಯು, "ಇದು ಬೆಕ್ಕು, ಹುಟ್ಟುತ್ತಲೇ ಇದು ನಮಗೆ ಶತ್ರುವು. ಅದರಿಂದ ದೂರದಲ್ಲಿಯೇ ಇರೋಣ. ನಮ್ಮನ್ನು ನೋಡಿ ಇದಕ್ಕೆ ಆಸೆ ಹುಟ್ಟಿ ಇದರ ವ್ರತವು ಕೆಟ್ಟೀತು." ಎಂದಿತು.

ಅದರಂತೆಯೇ, ಅವೆರಡೂ ದೂರದಿಂದಲೇ ಆ ತಪಸ್ವಿಗೆ ನಮಸ್ಕಾರ ಮಾಡಿ "ಎಲೈ ಧರ್ಮೋಪದೇಶಕನೆ, ನಮ್ಮದೊಂದು ವಿವಾದವುಂಟು. ಅದನ್ನು ಶಾಸ್ತ್ರಕ್ಕೆ ಸಮ್ಮತವಾಗಿ ನಿರ್ಣಯಿಸಿ ಕೊಡು. ಸುಳ್ಳು ಹೇಳಿ ಅಧರ್ಮಮಾಡಿದವನನ್ನು ನೀನು ತಿಂದು ಬಿಡಬಹುದು." ಎಂದು ಹೇಳಿಕೊಂಡವು. ಅದಕ್ಕಾ ಬೆಕ್ಕು "ಹಾ, ಹಾ, ಹಾಗೆನ್ನಬೇಡಿ. ನರಕಕ್ಕೆ ಹೋಗುವ ಆ ಮಾರ್ಗವನ್ನು ನಾನು ಬಿಟ್ಟಿರುವೆನು. ನಾನೀಗ ಪ್ರಾಣಿಹಿಂಸೆ ಮಾಡುವುದಿಲ್ಲ. ಅಹಿಂಸೆಯೇ ಧರ್ಮವು, ಕೇಳಿಲ್ಲವೇ?, ಸೊಳ್ಳೆ, ಇಗಣೆ, ಹೇನು, ಮೊದಲಾದ ಪ್ರಾಣಿಗಳನ್ನೂ ಕೊಲ್ಲಬಾರದು ಎಂಬು ಬಲ್ಲವರು ಹೇಳುವರು. ಹಿಂಸೆ ಮಾಡುವ ಪ್ರಾಣಿಗಳನ್ನೂ ಹಿಂಸೆ ಮಾಡಬಾರದು ಪ್ರಾಣಿಹಿಂಸೆ ಮಾಡುವವನಿಗೆ ನರಕವು ತಪ್ಪುವುದಿಲ್ಲ. ಸ್ವರ್ಗವು ಸಿಕ್ಕು ವುದಿಲ್ಲ ಯಜ್ಞದಲ್ಲಿಯೂ ಪಶುಹಿಂಸೆ ಮಾಡಬಾರದು. ಹಾಗೆ ಮಾಡು ವವರು ವೇದಾರ್ಥವನ್ನು ಬಲ್ಲವರಲ್ಲ. ಯಜ್ಞದಲ್ಲಿ ಅಜವನ್ನು ಕೊಲ್ಲು ವರು ಎಂದು ಶಾಸ್ತ್ರವಿದೆ[illegible] ಎಂದರೆ, ಅಲ್ಲಿ ಅಜವೆಂದರೆ ಆಡಲ್ಲ. ಧಾನ್ಯಗಳು. ಏಳು ವರ್ಷ ಇರುವ ಧಾನ್ಯಕ್ಕೆ ಅಜ ಎಂದು ಹೆಸರು. ಕೇಳಿಲ್ಲವೆ?

ಕಡಿದು ಮರಗಳ ಕೊಂದು ಪಶುಗಳ |
ಹರಸಿ ನೆಲದೊಳು ರಕ್ತಕೋಡಿಗಳ ॥
ಸಾರುವೆವು ನಾವು ಸ್ವರ್ಗಕೆನಲಾಗಿ ||
ಹೋಗುವರು ಯಾರು ನರಕಕ್ಕೆ ಪೇಳು ||೨೦||

ಅದರಿಂದ ನಾನು ಯಾರನ್ನೂ ತಿನ್ನುವುದಿಲ್ಲ. ಕೇವಲ ಜಯ, ಪರಾಜಯಗಳನ್ನು ನಿರ್ಣಯಿಸುವೆನು. ನಾನು ಮುದುಕನು. ನನಗೆ ಕಿವಿಯು ಚೆನ್ನಾಗಿ ಕೇಳುವುದಿಲ್ಲ. ಅದರಿಂದ ನನ್ನ ಹತ್ತಿರ, ಮೊಖದ ಹತ್ತಿರ ಬಂದು ನಿಮ್ಮ ಜಗಳವನ್ನು ಹೇಳಿ. ಜಗಳದ ಕಾರಣವನ್ನು ತಿಳಿದು ಧರ್ಮವನ್ನು ಹೇಳಬೇಕು. ಇಲ್ಲದಿದ್ದರೆ ಪರಲೋಕವು ಇಲ್ಲವಾಗುವುದು. ಹಾಗಾಗದಿರಲಿ. ಕೇಳಿಲ್ಲವೇ?

ಮಾನದಿಂದಲೋ ಲೋಭದಿಂದಲೋ ಭೀತಿಯಿಂದಲೋ ॥
ನ್ಯಾಯ ಬಿಟ್ಟು ನ್ಯಾಯಮಾಡಲು ನರಕ ತಪ್ಪುವುದೇ || ೨೧ ||

ಅದರಿಂದ ನಿರ್ಭಯವಾಗಿ ನಿಮ್ಮ ವಾದವನ್ನು ನನ್ನ ಕಿವಿಯಲ್ಲಿ ಹೇಳಿ.'' ಎಂದು ಅವರಿಗೆ ಹೇಳಿತು.

ಕಥೆಯನ್ನು ಬೆಳೆಸಿ ಫಲವೇನು? ಹೀಗೆ ಆ ಕಪಟಿಯು ಅವರಿಬ್ಬರನ್ನೂ ನಂಬಿಸಿ ಹತ್ತಿರಕ್ಕೆ ಬರಮಾಡಿಕೊಂಡು ಒಂದನ್ನು ಪಂಜದಿಂದ ಹೊಡೆದು, ಇನ್ನೊಂದನ್ನು ಹಲ್ಲುಗಳಿಂದ ಹಿಡಿದು ಪ್ರಾಣ ತೆಗೆಯಿತು. ಹಾಗಾಗಬಾರದು ಎಂದು ನಾನು, '' ಅರಸು ಕೀಳನಾಗಬಾರದು '' ಎಂದು ಹೇಳಿದೆನು, ಹಕ್ಕಿಗಳಾದ ನಮಗೆ ರಾತ್ರಿ ಕಣ್ಣು ಕಾಣಿಸುವುದಿಲ್ಲ. ಈ ಗೂಗೆಯು ಹಗಲು ಕುರುಡನು. ನಾವು ಎದ್ದಿರುವಾಗ ಮಲಗಿದ್ದು ನಾವು ಮಲಗಿದಾಗ ಹೊರಗೆ ಹೊರಡುವನು. ಇವನು ನಮಗೆ ಬೆಕ್ಕು, ಮೊಲ, ಗುಬ್ಬಿಗಳಿಗೆ ಮಾಡಿದಂತೆ ಮಾಡುವುದಿಲ್ಲ ಎನ್ನುವುದಕ್ಕೆ ಏನು ನಂಬಿಕೆ? ಇದೆಲ್ಲವನ್ನೂ ಯೋಚಿಸಿ ಕೆಲಸಮಾಡಿ'' ಎಂದಿತು. ಹಕ್ಕಿಗಳು ''ಇದು ಹೇಳಿದ್ದು ಸರಿ. ಈ ಕೆಲಸ ಈಗ ಬೇಡ. ಇನ್ನೊಂದು ಸಲ ಮಾಡೋಣ.''

ಎಂದು ಹೇಳಿಕೊಂಡು ಎಲ್ಲವೂ ತಮ್ಮ ಮನ ಬಂದಂತೆ ಹೊರಟು ಹೋದುವು. ಭದ್ರಾಸನದಲ್ಲಿ ಕುಳಿತಿದ್ದ ಗೂಗೆಯು ಮಾತ್ರ ಉಳಿಯಿತು. ಅದು ಹಗಲು ಕುರುಡನಾದುದರಿಂದ ಅದಕ್ಕೆ ಹಕ್ಕಿಗಳು ಹೊರಟು ಹೋದುದೂ ತಿಳಿಯಲಿಲ್ಲ. ಅದು "ಯಾರಲ್ಲಿ? ಏಕೆ ಇನ್ನೂ ಅಭಿಷೇಕವಾಗಲಿಲ್ಲ?" ಎಂದು ಕೇಳಿತು. ಅದನ್ನು ಕೇಳಿ ಯಾರೋ "ಅಯ್ಯಾ, ನಿನ್ನ ಅಭಿಷೇಕವು ನಿಂತುಹೋಯಿತು, ಕಾಗೆಯು ಅಡ್ಡಿ ತಂದಿತು. ಹಕ್ಕಿಗಳೆಲ್ಲವೂ ಹೊರಟು ಹೋದುವು. ಕಾಗೆಯು ಮಾತ್ರ ಇದೆ. ನಡೆ. ಇನ್ನು ನಮ್ಮ ಮನೆಗೆ ಹೋಗೋಣ" ಎಂದು ಹೇಳಿದರು. ಅದನ್ನು ಕೇಳಿ ಗೂಗೆಯು "ಅಯ್ಯೋ, ಹಾಳು ಕಾಗೆಯೇ, ನಾನು ನಿನಗೆ ಏನು ಅಪರಾಧ ಮಾಡಿದ್ದೆ. ನನಗೆ ಆಗುತ್ತಿದ್ದ ರಾಜ್ಯಾಭಿಷೇಕವನ್ನು ತಪ್ಪಿಸಿದೆಯಲ್ಲ. ಇಕೋ, ಇದೇ ಮೊದಲು, ನಮ್ಮ ವಂಶದವರಿಗೂ ನಿನ್ನ ವಂಶದವರಿಗೂ ಶಾಶ್ವತವಾದ ವೈರವು ಇದ್ದು ಹೋಗಲಿ. ಕೊಡಲಿಯಿಂದ ಕಡಿದರೂ ಮರವು ಮತ್ತೆ ಚಿಗುರುವುದು. ಕೆಟ್ಟ ಮಾತಿನಿಂದ ಹೊಡೆದು ಮಾಡಿದ ಗಾಯವು ಮಾತ್ರ ಆರುವುದೇ ಇಲ್ಲ." ಎಂದು ಹೇಳಿ ಮನೆಗೆ ಹೋಯಿತು.

ಕಾಗೆಯೂ "ಏನು ಅನ್ಯಾಯವಾಯಿತು? ನಾನಾದರೂ ಏಕೆ ಹೀಗಾಡಿ ಇಲ್ಲದ ವೈರವನ್ನು ಕಟ್ಟಿಕೊಂಡೆ? ದೇಶ, ಕಾಲ, ಗಳನ್ನು ಅರಿಯದೆ. ಲಾಭವಿಲ್ಲದ ಅಪ್ರಿಯ ವಚನಗಳನ್ನು ಆಡಿ ನಾನು ಲಘುವಾದೆನು. ಕಾರಣವಿಲ್ಲದೆ ಮಾತನಾಡಿದರೆ ಅದು ವಿಷವಾಗುವುದರಲ್ಲಿ ಆಶ್ಚರ್ಯವೇನು? ಬಲವಂತನಾಗಲಿ, ಬುದ್ಧಿವಂತನಾಗಲಿ, ತಾನಾಗಿ ವೈರವನ್ನು ಹುಡುಕಿಕೊಂಡು ಹೋಗಬಾರದು. ವೈದ್ಯ ಸಿದ್ಧಾನೆಯೆಂದು ಯಾರಾದರೂ ವಿಷವನ್ನು ತಿನ್ನುವುದುಂಟೆ? ತುಂಬಿದ ಸಭೆಯಲ್ಲಿ ಒಬ್ಬರನ್ನು ತಿರಸ್ಕಾರ ಮಾಡಬಾರದು ಎಂಬ

ನೀತಿಯು ನನಗೆ ಮರೆತು ಹೋಯಿತಲ್ಲಾ! ಸ್ನೇಹಿತರು, ಆಪ್ತರು, ಮೊದಲಾದವರಲ್ಲಿ ಹೇಳಿ ಕೇಳಿ, ತಾನೂ ತನ್ನ ಬುದ್ಧಿಯಿಂದ ವಿಚಾರ ಮಾಡಿ ನೋಡಿ, ಕೆಲಸ ಮಾಡುವವನೇ ಬುದ್ಧಿವಂತನು. ಅಂಥವ ನಿಗೆ ಯಶಸ್ಸೂ ಐಶ್ವರ್ಯವೂ ದೊರಕುವುವು. "ಹುಂ ಮೀರಿ ಹೋಯಿತು." ಎಂದು ಕಾಗೆಯೂ ಹೊರಟು ಹೋಯಿತು. ಅಂದಿ ನಿಂದ ನಮಗೂ ಗೂಗೆಗಳಿಗೂ ಈ ವೈರವು ನಿಂತು ಹೋಗಿದೆ. ಎಂದು ಹೇಳಿತು.

ಆಗ ಮೇಘವರ್ಣನು ಕೇಳಿತು:–"ತಾತ, ಹಾಗಾದರೆ ಈಗ ನಾವು ಏನು ಮಾಡಬೇಕು?" ಸ್ಥಿರಜೀವಿಯು ಹೇಳಿತು:–"ವತ್ಸ, ಹೀಗೆ ಈ ಹಿಂದೆ ಹೇಳಿದ ರಾಜ ನೀತಿಗಳು ಆರೂ ಬಿಟ್ಟು, ಇನ್ನೊಂದು ಮಾರ್ಗವಿದೆ. ಅದನ್ನು ನಾನೇ ಆಚರಿಸಿ ನಿಮಗೆ ವಿಜಯವನ್ನು ಸಂಪಾದಿಸಿಕೊಡುವೆನು. ರಿಪುಗಳನ್ನು ವಂಚಿಸಿ ಸಂಹಾರ ಮಾಡು ವೆನು. ಬುದ್ಧಿವಂತರು ಮೂವರು ಸೇರಿಕೊಂಡು ಧೂರ್ತತನದಿಂದ ಬ್ರಾಹ್ಮಣನನ್ನು ವಂಚಿಸಿ ಆಡು ಹೊತ್ತುಕೊಂಡು ಹೋದಂತೆ ಮಾಡುವೆನು."

ಮೇಘವರ್ಣನು ಅದು ಹೇಗೆ ಎಂದು ಕೇಳಲು ಸ್ಥಿರಜೀವಿಯು ಹೇಳಿತು:–



## ಧೂರ್ತರು ವಂಚಿಸಿದ ಕಥೆ

ಒಂದಾನೊಂದು ಊರಿನಲ್ಲಿ ಒಬ್ಬ ಬ್ರಾಹ್ಮಣನಿದ್ದನು. ಆತನು ಅಗ್ನಿ ಹೋತ್ರವನ್ನು ಇಟ್ಟುಕೊಂಡು ತನ್ನ ಪಾಡಿಗೆ ತಾನಿದ್ದನು. ಒಂದು ಸಲ ಆತನಿಗೆ ಯಜ್ಞ ಮಾಡಬೇಕು. ಎನ್ನಿಸಿತು. ಅದಕ್ಕಾಗಿ

ಬಂದು ಆಡು ತರಬೇಕು ಎಂದು ಬೇರೊಂದು ಗ್ರಾಮಕ್ಕೆ ಹೋಗಿ ಅಲ್ಲಿ ಒಬ್ಬ ಧನಿಕನನ್ನು ಕೇಳಿ ಒಂದು ಆಡನ್ನು ತಂದನು. ಅದನ್ನು ಆತನು ಹೊತ್ತುಕೊಂಡು ಬರುತ್ತಿರುವಾಗ, ಮೂವರು ದುಷ್ಟರು ಅದನ್ನು ಕಂಡು "ಆಡು ಚೆನಾಗಿದೆ. ಏನಾದರೂ ಮಾಡಿ ಹಾರಿಸಬೇಕು" ಎಂದು ಆಲೋಚಿಸಿಕೊಂಡರು. ಅವರಲ್ಲಿ ಒಬ್ಬನು ಮುಂದೆ ಬಂದು "ಏನಿದು, ಬ್ರಾಹ್ಮಣ, ಹೀಗೆ ಮಾಡುವವನುಂಟೆ? ಈ ನಾಯನ್ನು ನಿಮ್ಮಂಥವರು ಮುಟ್ಟಲೂಬಾರದು.ಹೀಗಿರಲು, ಇದನ್ನು ಹೊತ್ತುಕೊಂಡು ಹೋಗುವುದು ಎಂಪರಿ ಏನನ್ಯಾಯ?" ಎಂದನು. ಆ ಬ್ರಾಹ್ಮಣನು ಅದನ್ನು ಕೇಳಿ "ಏನನ್ಯಾಯ್ಯಾ,ನಿನಗೇನು ಕಣ್ಣು ಕಾಣಿಸುತ್ತದೆಯೋ ಇಲ್ಲವೋ? ಆಡನ್ನು ನಾಯಿಯೆನ್ನುತ್ತೀಯೇ?" ಎಂದು ರೇಗಿದನು. ಅವನು "ಹೋಗಲಿ ಬಿಡಿ, ಸ್ವಾಮಿ ನಿಮ್ಮ ಹಣೆಯ ಬರೆಹ ನಮಗೇನು?" ಎಂದುಕೊಂಡು ಅತ್ತ ಹೋದನು.

ಬ್ರಾಹ್ಮಣನು ಅಷ್ಟುದೂರ ಹೋಗುವುದರೊಳಗಾಗಿ ಇನ್ನೊಬ್ಬ ಬಂದು "ಶಿವ ಶಿವಾ, ಏನನ್ಯಾಯ? ಈ ಸತ್ತ ಮಗುವನ್ನು ಹೀಗೆ ಹೊತ್ತುಕೊಂಡು ಹೋಗುತ್ತಿರುವರಲ್ಲ!" ಎಂದನು. ಬ್ರಾಹ್ಮಣನು "ಛೀ, ಏನು ಮಾತನಾಡುತ್ತೀಯೆ? ಬದುಕಿರುವ ಆಡನ್ನು ಸತ್ತ ಮಗುವೆನ್ನುತ್ತಿದ್ದೀಯೆ?" ಎಂದು ಗದರಿಸಿದನು. ಅದಕ್ಕೆ ಅವನು "ತಪ್ಪಾಯಿತು ಸ್ವಾಮಿ, ನನಗೆ ಹಾಗೆ ಕಂಡಿತು. ಹಾಗೆಂದೆ. ತಮ್ಮ ಇಷ್ಟ. ತಮಗೆ ತೋರಿದಂತೆ ಮಾಡಿ" ಎಂದು ಕೈ ಮುಗಿದು ಹೋದನು.

ಇನ್ನಷ್ಟು ದೂರ ಹೋಗುವುದರೊಳಗೆ ಇನ್ನೊಬ್ಬ ಧೂರ್ತನು ಎದುರಿಗೆ ಬಂದನು. ಅವನು ಬ್ರಾಹ್ಮಣನ ಕಡೆಗೆ ನೋಡಿ ಆಶ್ಚರ್ಯಪಡುತ್ತಾ, "ಕೈ ಮುಗಿದುಕೊಂಡು, ಸ್ವಾಮಿ, ಇದು ಸರ್ವಥಾ ಯುಕ್ತವಲ್ಲ. ಕತ್ತೆಯನ್ನು ಹೊತ್ತುಕೊಂಡು ಹೋಗುವುದು ಎಂದ

ರೇನು ? ಮೊದಲು ಇದನ್ನು ಬಿಡಿ. ಇನ್ನಿಬ್ಬರು ನೋಡುವುದಕ್ಕಿಂತ ಮುಂಚೆ ಬಿಡಿ.'' ಎಂದನು. ಬ್ರಾಹ್ಮಣನಿಗೆ ''ಇದೇನಿದು'' ಒಬ್ಬನಿಗೆ ನಾಯಿಯಾಗಿ ಕಂಡಿತು. ಇನ್ನೊಬ್ಬನಿಗೆ ಸತ್ತ ಮಗುವಾಗಿ ಕಾಣಿಸಿತು. ಮತ್ತೊಬ್ಬನಿಗೆ ಕತ್ತೆಯಾಗಿ ಕಾಣಿಸಿತು. ನನಗೆ ಈಗಲೂ ಆಡಾಗಿ ಕಾಣಿಸುತ್ತಿದೆ. ಇದು ಹೀಗೆ ಒಬ್ಬೊಬ್ಬರಿಗೆ ಒಂದೊಂದಾಗಿ ಕಾಣಿಸಬೇಕಾದರೆ, ನಿಜವಾಗಿಯೂ ಪಿಶಾಚಿಯೇ ಆಗಿರಬೇಕು.'' ಎನ್ನಿಸಿತು. ಆ ಕೂಡಲೇ ಅವನು ಅದನ್ನು ಧೊಪ್ಪನೆ ಎತ್ತಿಹಾಕಿ ಓಡಿ ಹೋದನು. ಧೂರ್ತರು ಅದನ್ನು ಹೊತ್ತು ಕೊಂಡು ಹೋಗಿ ಪೂರೈಸಿದರು. ನಾವು ಹಾಗೇ ಮಾಡಬೇಕು.

ಸೇವಕನಾಗಿ ವಿನಯದಿಂದ ಓಲೈಸಿದರೆ. ಅತಿಥಿಯಾಗಿ ಹೋಗಿ ಒಳ್ಳೆಯ ಮಾತುಗಳನ್ನಾಡಿದರೆ, ಹೆಂಗಸು ಅತ್ತು ಹೆದರಿಸಿದರೆ, ಮೋಸಗಾರರು ಸವಿಮಾತು ಆಡಿದರೆ, ಮೋಸ ಹೋಗದವರು ಯಾರು ? ದುರ್ಬಲರೇ ಆಗಿರಲಿ, ಹೆಚ್ಚಾಗಿದ್ದರೆ ಅವರ ಜೊತೆಯಲ್ಲೂ ವಿರೋಧ ಮಾಡಬಾರದು. ಕೇಳಿಲ್ಲವೆ ?

ಸಂಖ್ಯೆಯಲಿ ಹಿರಿದಾದ ಜನರೊಡನೆ ಹಗೆಯಾಗದು ||
ಹಾವು ಹಿರಿದಾದರೂ ಇರುವೆ ತಿಂದು ಹಾಕುವುದು || ೨೨ ||

---

## ಅತಿದರ್ಪನ ಕಥೆ



ಒಂದಾನೊಂದು ಹುತ್ತದಲ್ಲಿ ಅತಿದರ್ಪನೆಂಬ ಒಂದು ಕರಿಯ ನಾಗರ ಹಾವು ಇತ್ತು. ಅದು ಬಲು ದೊಡ್ಡದು, ತೊಲೆಯತುಂಡೋ ಎನ್ನುವಷ್ಟು ದೊಡ್ಡದು. ಒಂದು ದಿನ ಅದು ತಾನು ಎಂದೂ ಬಂದು

ಹೋಗುತ್ತಿದ್ದ ಮಾರ್ಗವನ್ನು ಬಿಟ್ಟು ಇನ್ನೊಂದು ಮಾರ್ಗದಿಂದ ಈಚೆ ಬಂತು. ಹಾಗೆ ಬಂದಾಗ, ದೈವವಶವಾಗಿ, ಆ ತೂತು ಸಣ್ಣಗಿದ್ದುದರಿಂದ, ಅದಕ್ಕೆ ಏನೋ ತಗುಲಿ ಒಂದು ಗಾಯವಾಯಿತು. ಗಾಯದಿಂದ ರಕ್ತವು ಸೋರಿತು. ಪದೇ ಪದೇ ತಗುಲಿ ತಗುಲಿ, ಅಲ್ಲಿ ಕೀವು ಕಟ್ಟಿಕೊಂಡಿತು. ಕೀವಿನ ವಾಸನೆಗೆ ಇರುವೆಗಳು ಬಂದು ಮುತ್ತಿಕೊಂಡುವು. ಹಾವು ಎಷ್ಟನ್ನೋ ಕೊಂದಿತು: ಎಷ್ಟನ್ನೋ ಹೊಡೆಯಿತು. ಅವು ಕಚ್ಚುತ್ತ ಕಚ್ಚುತ್ತ ಹುಣ್ಣು ದೊಡ್ಡದಾಗುತ್ತ ಬಂತು. ಕೊನೆಗೆ ಇರುವೆಗಳು ಕಚ್ಚಿ ಕಚ್ಚಿ ಅದನ್ನು ಕೊಂದೂ ಬಿಟ್ಟುವು. ಅದರಿಂದ "ಹಾವು ಹಿರಿದಾದರೂ ಇರುವೆ ತಿಂದು ಹಾಕುವುದು." ಎಂದು ಹೇಳಿದೆನು.

ಈ ಸಂದರ್ಭದಲ್ಲಿ ನಾನು ಹೇಳಬೇಕಾದುದು ಇಷ್ಟು ಇದೆ, ಕೇಳು. ನಾನು ಸಾಮ ದಾನ ಭೇದ ದಂಡಗಳೆಂಬ ನಾಲ್ಕು ಉಪಾಯಗಳನ್ನೂ ಬಿಟ್ಟು, ಐದನೆಯದೊಂದನ್ನು ಅವಲಂಬಿಸುವೆನು. ನೀವು ನನ್ನನ್ನು ಶತ್ರುವೆಂದು ಅಪಮಾನಗೊಳಿಸಿ, ನಿಷ್ಠುರ ವಾಕ್ಯಗಳಿಂದ ಚೆನ್ನಾಗಿ ತಿರಸ್ಕಾರಮಾಡಿ, ಶತ್ರುಗಳಿಗೆ ನಂಬಿಕೆಯಾಗುವಂತೆ ನನ್ನನ್ನು ರಕ್ತಮಯ ಶರೀರನನ್ನಾಗಿ ಮಾಡಿ, ಇಲ್ಲಿಯೇ, ಈ ಆಲದ ಮರದ ಕೆಳಗೆಯೇ ಹಾಕಿ, ನೀವೆಲ್ಲರೂ ಋಷ್ಯಮೂಕ ಪರ್ವತಕ್ಕೆ ಹೋಗಿ ಅಲ್ಲಿರಿ. ನಾನು ಶತ್ರುಗಳಿಗೆ ನಂಬಿಕೆ ಹುಟ್ಟುವಂತೆ ಮಾಡಿ ಅವರ ದುರ್ಗವೆಲ್ಲಿರುವುದು ಎಂಬುದನ್ನು ತಿಳಿದುಕೊಂಡು, ಹಗಲು ಕುರುಡರಾದ ಅವರನ್ನು ನಿರ್ಮೂಲ ಮಾಡುವೆನು. ಇನ್ನು ಯಾವ ತೆರದಲ್ಲೂ ನಾವು ಗೆಲ್ಲುವುದಿಲ್ಲ. ನಾನು ಅಲ್ಲಿಗೆ ಹೋದರೆ, ಅವರ ದುರ್ಗದ ಬಾಗಿಲುಗಳನ್ನೆಲ್ಲಾ ಮುಚ್ಚಿ ಹೊರಕ್ಕೆ ಹೋಗುವುದಕ್ಕೆ ಅವಕಾಶವಿಲ್ಲದಂತೆ ಮಾಡಿ, ಅವರ ವಧವನ್ನು ಸಾಧಿಸುವೆನು. ನನ್ನ ವಿಚಾರದಲ್ಲಿ ಅಭಿಮಾನವಿಟ್ಟುಕೊಂಡು, ನನ್ನನ್ನು ಇಲ್ಲಿ ಬಿಟ್ಟು

ಹೋಗುವುದು ಹೇಗೆ ಎಂದು ಯೋಚಿಸಬೇಡಿ. ಪ್ರಾಣಸಮರೆಂದು ವಿಶ್ವಾಸದಿಂದ ಕಾಣುತ್ತ ಕಾಪಾಡುತ್ತಿರುವ ಲಾಲಿಸುತ್ತಿರುವ ಭೃತ್ಯರನ್ನು ಅರಸುಗಳು ಯುದ್ಧದಲ್ಲಿ ಒಣಗಿದ ಕಡ್ಡಿಗಳಂತೆ ಕಾಣಬೇಕು. ಭೃತ್ಯರನ್ನು ಪ್ರಾಣಗಳಂತೆ ನೋಡಿಕೊಳ್ಳಬೇಕು: ತನ್ನ ದೇಹದಂತೆ ಪೋಷಿಸಬೇಕು: ಇಷ್ಟು ಏಕೆ ಎಂದರೆ ಶತ್ರುವಿನೊಡನೆ ಯುದ್ಧ ಬಂದಾಗ ತನ್ನನ್ನು ಕಾಪಾಡಲೆಂದು. ಆದರಿಂದ ನಾನು ಮಾಡಬೇಕೆಂದಿರುವ ಕೆಲಸಕ್ಕೆ ಅಡ್ಡಿ ಬರಬೇಡ'' ಎಂದು ಹೇಳಿ ಮೇಘವರ್ಣನನ್ನು ಒಪ್ಪಿಸಿ, ತಾನೇ ಒಣ ಜಗಳವನ್ನು ಆರಂಭಿಸಿತು.

ಅಡ್ಡಿಯಿಲ್ಲದೆ, ಮಿತಿಮೀರಿ, ಮಾತನಾಡುತ್ತಿರುವ ಸ್ಥಿರಜೀವಿಯನ್ನು ಕಂಡು ಅರಸನ ಆಳುಗಳು ಅದನ್ನು ಕೊಂದು ಹಾಕಿಬಿಡುವುದಕ್ಕೆ ಹೊರಟವು. ಆಗ ಮೇಘವರ್ಣನು ಅಡ್ಡಿಬಂದು, "ನಿಲ್ಲಿ, ನಿಲ್ಲಿ. ನಾನೇ ಈ ದುಷ್ಟನನ್ನು ನಿಗ್ರಹಿಸುವೆನು. ಇವನು ಶತ್ರುಗಳಲ್ಲಿ ಪಕ್ಷಪಾತಿಯಾಗಿರುವನು.'' ಎಂದು ಹೇಳಿ, ಅದರ ಮೇಲೆ ಬಿದ್ದು, ಮೆತ್ತ ಮೆತ್ತಗೆ ಕೊಕ್ಕುಗಳಿಂದ ಚುಚ್ಚಿ, ಮೈಯೆಲ್ಲ ರಕ್ತವಾಗುವಂತೆ ಮಾಡಿ, ಅದನ್ನು ಅಲ್ಲಿಯೇ ನೂಕಿ, ತನ್ನ ಪರಿವಾರವನ್ನೆಲ್ಲ ಕರೆದುಕೊಂಡು ಋಷ್ಯಮೂಕ ಪರ್ವತಕ್ಕೆ ಹೊರಟು ಹೋಯಿತು.

ಅಲ್ಲಿದ್ದ ಅರಿಮರ್ದನನ ಗೂಢಚಾರರು ಸ್ಥಿರಜೀವಿಯ ಕಥೆಯನ್ನು ಅದಕ್ಕೆ ತಿಳಿಸಿ, ''ನಿನ್ನ ಶತ್ರುವು ನಿನಗೆ ಹೆದರಿ ಸಪರಿವಾರನಾಗಿ ಎಲ್ಲಿಗೋ ಹೊರಟು ಹೋದನು.'' ಎಂದು ವರದಿ ಮಾಡಿದರು. ಗೂಗೆಗಳ ಅರಸನು ಸೂರ್ಯನು ಮುಳುಗುತ್ತಲೂ ವೈರವಧಕ್ಕೆಂದು ಸಪರಿವಾರನಾಗಿ ಹೊರಟಿತು: ''ಬೇಗ, ಬೇಗ, ಭೀತನಾಗಿ ಓಡಿಹೋಗುತ್ತಿರುವ ಶತ್ರುವು ಕೈಗೆ ಸಿಕ್ಕಿದರೆ ಅದು ನಮ್ಮ ಪುಣ್ಯ,'' ಎಂದು ಅತಿವೇಗದಿಂದ ವಾಯಸ ದುರ್ಗಕ್ಕೆ ಬಂತು. ಆದರೆ ಅಲ್ಲಿ ಕಾಗೆಗಳು ಇಲ್ಲದಿರುವುದನ್ನು ಕಂಡು, ಬಹು ಸಂತೋಷಪಟ್ಟು, ಆಲದ ಮರದ ಮೇಲೆ ಭದ್ರವಾಗಿ ಕುಳಿತಿತು. ಅರಸನನ್ನು ಹೊಗಳು

ಭಟರು "ಜಯ, ವಿಜಯ, ಅರಿಮರ್ದನ ಮಹಾರಾಜ, ನಿನ್ನ ಪ್ರತಾಪಕ್ಕೆ ಹೆದರಿ ಈ ಕಾಗಗಳು ನೆಲೆಬಿಟ್ಟು ಓಡಿಹೋದುವು. ಉಘೇ" ಎಂದು ಹೊಗಳಿದುವು. ಆಗ ಅರಿಮರ್ದನನು "ಎಲೈ, ಈ ಶತ್ರುಗಳು ಎಲ್ಲಿ ಹೋದರು, ಯಾವ ಮಾರ್ಗವಾಗಿ ಹೋದರು, ಎಂಬುದನ್ನು ಮೊದಲು ಗೊತ್ತುಮಾಡಿ, ಅವು ಹೋಗಿ ಬಂದು ದುರ್ಗವನ್ನು ಹಿಡಿದುಕೊಳ್ಳುವುದಕ್ಕೆ ಮೊದಲು ನಾವು ಅದನ್ನು ಹೊಡೆದು ಹಾಕಬೇಕು. ದುರ್ಗವನ್ನು ಹಿಡಿದುಕೊಂಡು, ಯುದ್ಧ ಸಾಮಗ್ರಿಗಳನ್ನೆಲ್ಲಾ ಸಿದ್ಧ ಮಾಡಿಕೊಂಡಮೇಲೆ ಅವನ್ನು ಗೆಲ್ಲುವುದು ಕಷ್ಟವಾಗುವುದು" ಎಂದು ಅಪ್ಪಣೆ ಮಾಡಿತು.

ಅದನ್ನು ಕೇಳಿ ಸ್ಥಿರ ಜೀವಿಯು ಯೋಚಿಸಿತು:– "ಈ ನಮ್ಮ ಶತ್ರುಗಳು ನಮ್ಮ ವೃತ್ತಾಂತವೇನು ಎಂಬುದನ್ನು ಅರಿಯದೆ ಬಂದಂತೆ ಹೊರಟು ಹೋಗುವರು. ಈಗ ನಾನು ಮಾಡಬೇಕಾದುದು ಒಂದಷ್ಟು ಇದೆ. ಕೇಳಿಲ್ಲವೆ?

ಕಾರ್ಯವನಾರಂಭಿಸದಿಹುದು | ಮೊದಲನೆ ಲಕ್ಷಣ ಬುದ್ಧಿಯದು ||
ಆರಂಭಿಸೆ ಅದು ಮುಗಿಸುವುದು || ಎರಡನೆ ಲಕ್ಷಣ ಬುದ್ಧಿಯದು ||೨೩||

ಅದರಿಂದ ಆರಂಭಿಸಿ, ಅವನ್ನು ಬಿಟ್ಟು ಬಿಡುವುದಕ್ಕಿಂತ ಆರಂಭಿಸದಿರುವುದು ಒಳ್ಳೆಯದು. ಅದರಿಂದ ಈಗ ಸದ್ದು ಕೊಟ್ಟು, ನಾನು ಇಲ್ಲಿರುವೆನೆಂದು ತೋರಿಸಿಕೊಳ್ಳುವೆನು" ಎಂದು ಗೊತ್ತು ಮಾಡಿಕೊಂಡು ಮೆತ್ತಗೆ ಕೊರಗಿದ ದನಿಯಲ್ಲಿ ಕೂಗಿತು. ಅದನ್ನು ಕೇಳಿ ಗೂಗೆಗಳು ಅದನ್ನು ಸಂಹರಿಸಲು ಎಲ್ಲವೂ ಅಲ್ಲಿಗೆ ಬಂದುವು.



ಆಗ ಕಾಗೆಯು ಅವನ್ನು ಕಂಡು "ಅಯ್ಯೋ, ನಾನು ಸ್ಥಿರಜೀವಿಯೆಂಬುವನು. ಮೇಘವರ್ಣನ ಮಂತ್ರಿಯಾಗಿದ್ದವನು. ಮೇಘವರ್ಣನೇ

ನನ್ನನ್ನು ಈ ಸಾಯುವ ಸ್ಥಿತಿಗೆ ತಂದನು. ಇದನ್ನು ನಿಮ್ಮ ಅರಸನಿಗೆ ತಿಳಿಸಿ. ನಾನು ಅರಸನಿಗೆ ಹೇಳಬೇಕಾದುದು ಬಹಳ ಇದೆ.'' ಎಂದಿತು.

ಅವು ಉಲೂಕ (ಗೂಗೆ) ರಾಜನಿಗೆ ಆ ಸುದ್ದಿಯನ್ನು ತಿಳಿಸಿದುವು. ಆ ಅರಸು ಅದನ್ನು ಕೇಳಿ ಆಶ್ಚರ್ಯಪಟ್ಟು ತಾನೇ ಅದರ ಬಳಿಗೆ ಹೋಗಿ "ಇದೇನು? ನಿನಗೆ ಇಂತಹ ಅವಸ್ಥೆಯು ಹೇಗೆ ಬಂತು?'' ಎಂದು ಕೇಳಿದನು. ಸ್ಥಿರಜೀವಿಯು ಹೇಳಿದನು:— ದೇವ, ಕೇಳಬೇಕು. ನಿನ್ನೆಯ ದಿನ ದುರಾತ್ಮನಾದ ಮೇಘವರ್ಣನು ತಾವು ಕಾಗೆಗಳ ಗುಂಪು ಗುಂಪುಗಳನ್ನೇ ಕೊಂದಿರೆಂದು ಕೋಪದಿಂದಲೂ ಶೋಕದಿಂದಲೂ ಕೂಡಿ ತಮ್ಮ ಮೇಲೆ ಯುದ್ಧಕ್ಕೆ ಹೊರಟನು. ಆಗ ನಾನು, ಸ್ವಾಮಿ, ಉಲೂಕರಾಜನ ಮೇಲೆ ಯುದ್ಧವು ನ್ಯಾಯವಲ್ಲ. ಅವರು ಬಲವಂತರು, ನಾವು ಬಲಹೀನರು, ಕೇಳಿಲ್ಲವೆ?

ಬಾರದೈ ವಿರೋಧಂ ಬಲಿಯೊಡನೆ ||
ಬಾಳಬೇಕೆಂದಿರಲು ದುರ್ಬಲಿಗೆ ||
ಅತಿಬಲನ ಕೊಲ್ಲುವುದಿರಲಿ ತಾನೆ |
ಬೆಂಕಿಗೆರಗಿದ ಚಿಟ್ಟೆಯಂತಹನು || ೨೪ ||

ಅದರಿಂದ ಬಲಿಷ್ಟನಾದ ಶತ್ರುವು ಬಂದಾಗ ಸರ್ವವನ್ನೂ ಕೊಟ್ಟಾದರೂ ಪ್ರಾಣವನ್ನು ಕಾಪಾಡಿಕೊಳ್ಳಬೇಕು. ಪ್ರಾಣವಿದ್ದರೆ ಮಿಕ್ಕೆಲ್ಲವನ್ನೂ ಸಂಪಾದಿಸಬಹುದು. ಅದರಿಂದ ಕಾಣಿಕೆ ಕೊಟ್ಟು ಸಂಧಿ ಮಾಡಿಕೊಳ್ಳುವುದು ಉತ್ತಮ.'' ಎಂದೆನು. ಅದನ್ನು ಕೇಳಿ ಅರಸೂ ಇತರ ಮಂತ್ರಿಗಳೂ ರೇಗಿದರು. ಹೀಗೆ ರೇಗಿದ ಅರಸನು ನನ್ನನ್ನು ತಮ್ಮಲ್ಲಿ ಅಭಿಮಾನವುಳ್ಳವನೆಂದುಕೊಂಡು ನನ್ನನ್ನು ಈ ಗತಿಗೆ ಈಡು ಮಾಡಿದನು. ಈಗ ನನಗೆ ತಮ್ಮ ಪಾದಗಳೇ ಗತಿ. ಬಹುವಾಗಿ ಏನು ಹೇಳಲಿ? ನನಗೆ ಕೊಂಚ ಬಲ ಬಂದು ಓಡಾಡುವದಕ್ಕೆ ಶಕ್ತಿ ಬಂದರೆ, ದೇವರ ಪಾದದಾಣೆ! ತಮ್ಮನ್ನು ಕರೆದು

ಕೊಂಡು ಹೋಗಿ ವಾಯಸ ಕುಲವನ್ನೇ ನಾಶ ಮಾಡುವೆನು'' ಎಂದನು.

ಅರಿಮರ್ದನನು ಅದನ್ನು ಕೇಳಿ, ತನ್ನ ತಂದೆ ತಾತ ಮುತ್ತಾತರ ಕಾಲದಿಂದಲೂ ಕುಲ ಕ್ರಮವಾಗಿ ಮಂತ್ರಿಗಳಾಗಿರುವವರನ್ನು ಕರೆದು ಅವರೊಡನೆ ಆಲೋಚನೆ ಮಾಡಿದನು. ಆತನ ಮಂತ್ರಿಗಳು, ರಕ್ತಾಕ್ಷ, ಕ್ರೂರಾಕ್ಷ, ದೀಪ್ತಾಕ್ಷ, ವಕ್ರನಾಸ, ಪ್ರಾಕಾರಕರ್ಣ, ಎಂದು ಐವರು. ಅವರಲ್ಲಿ ಮೊದಲನೆಯವನಾದ ರಕ್ತಾಕ್ಷನು ಹೇಳಿದನು:—''ದೇವ, ಈ ವಿಷಯದಲ್ಲಿ ಚಿಂತಿಸಬೇಕಾದುದು ಏನೂ ಇಲ್ಲ. ವಿಚಾರವೇ ಇಲ್ಲದೆ ಇವನನ್ನು ಕೊಂದುಬಿಡತಕ್ಕದ್ದೆ! ಬಲಹೀನನಾಗಿರುವ ಶತ್ರುವನ್ನು, ಅವನು ಬಲವಂತನಾಗುವುದಕ್ಕೆ ಮುಂಚೆಯೇ ಕೊಲ್ಲಬೇಕು. ಅವನು ಮತ್ತೆ ಬಲಿಷ್ಠನಾದರೆ, ಅವನನ್ನು ಗೆಲ್ಲುವುದು ಅಸಾಧ್ಯವಾಗುವುದು. ಹಾಗಾದರೆ, ಲೋಕದಲ್ಲಿ ''ತಾನಾಗಿ ಬಂದ ಲಕ್ಷ್ಮಿಯನ್ನು ತಿರಸ್ಕಾರ ಮಾಡಿದರೆ ಆ ಲಕ್ಷ್ಮಿಯು ಶಾಪ ಹಾಕುವಳು'' ಎನ್ನುವ ಮಾತು ನಿಜವಾಗುವುದು. ಜೀವನದಲ್ಲಿ ಕಾದಿರುವ ಮನುಷ್ಯನಿಗೆ ಒಂದೇ ಒಂದು ಸಲ ಅವಕಾಶವು ಒದಗುವುದು. ಆಗಲೇ ಅದನ್ನು ಉಪಯೋಗಿಸಿ ಕೊಳ್ಳಬೇಕು. ಕಾಲ ಬಂದಾಗ ಅದಕ್ಕೆ ತಕ್ಕ ಕರ್ಮವನ್ನು ಮಾಡದವನಿಗೆ ಮತ್ತೆ ಆ ಸುಕಾಲವು ಬರುವುದಿಲ್ಲ. ಕೇಳಿಲ್ಲವೆ?

ಬೆಂದ ಚಿತಿಯನು ನೋಡು | ಮುರಿದ ಹೆಡೆಯನು ನೋಡು ||
ಸ್ನೇಹ ಕೂಡಿಸಬಹುದೆ! ಒಡೆದ ಗೆಳೆತನವಾ ॥ ೨೫ ॥

ಅರಿಮರ್ದನನು ಅದು ಹೇಗೆ ಎಂದು ಕೇಳಲು, ರಕ್ತಾಕ್ಷನು ಹೇಳಿದನು:—



# ಹೊನ್ನು ಕೊಡುತ್ತಿದ್ದ ಹಾವಿನ ಕಥೆ



ಒಂದಾನೊಂದು ಊರಿನಲ್ಲಿ ಹರಿದತ್ತನೆಂಬ ಬ್ರಾಹ್ಮಣನಿದ್ದನು ಆತನು ಬೇಸಾಯ ಮಾಡುವನು. ಆ ಬೇಸಾಯವು ಯಾವಾಗಲೂ ಫಲವೇ ಆಗುತ್ತಿರಲಿಲ್ಲ. ಒಂದು ದಿನ ಆ ಬ್ರಾಹ್ಮಣನು ಸಂಜೆಯ ಹೊತ್ತಿನಲ್ಲಿ ತನ್ನ ಹೊಲದಲ್ಲಿ ಒಂದು ಮರದಡಿ ಆಗ ಕೊಂಚ ದೂರದಲ್ಲಿದ್ದ ಹುತ್ತದಿಂದ ಹೊರಕ್ಕೆ ಬಂದು ದೊಡ್ಡ ಹೆಡೆಯನ್ನು ಬಿಟ್ಟುಕೊಂಡು ಆಡುತ್ತಿದ್ದ ಹಾವು ಕಾಣಿಸಿತು. ಆಗ ಅವನು ಯೋಚಿಸಿದನು:– "ಆಹಾ, ಇದು ಈ ಕ್ಷೇತ್ರದ ದೇವತೆಯಾಗಿರಬೇಕು. ಇದನ್ನು ನಾನು ಇದುವರೆಗೂ ಪೂಜಿಸಿಲ್ಲ. ಅದರಿಂದಲೇ ಇರಬೇಕು, ನನ್ನ ಬೇಸಾಯವೆಲ್ಲ ನಿಷ್ಫಲವಾಗುತ್ತಿರುವುದು. ಇರಲಿ. ಇನ್ನು ಮೇಲಾದರೂ ಇದನ್ನು ಪೂಜಿಸುವೆನು." ಎಂದು ಕೊಂಡು, ಎಲ್ಲಿಂದಲೋ ಹಾಲು ತಂದು ಅದಕ್ಕೆ ಒಪ್ಪಿಸಿ, "ಕ್ಷೇತ್ರ ಪಾಲಕನೆ, ನೀನು ಇಲ್ಲಿರುವುದು ನನಗೆ ಇದುವರೆಗೂ ತಿಳಿದಿರಲಿಲ್ಲ. ಅದರಿಂದ ಪೂಜೆಯನ್ನು ಮಾಡಿರಲಿಲ್ಲ. ಕ್ಷಮಿಸು." ಎಂದು ನಮಸ್ಕಾರ ಮಾಡಿದನು.

ಆ ಬ್ರಾಹ್ಮಣನು ಮರುದಿವಸ ಬರುವ ವೇಳೆಗೆ ಹಾಲಿನ ಪಾತ್ರೆಯಲ್ಲಿ ಒಂದು ಹೊನ್ನು ಇತ್ತು. ಅಂದಿನಿಂದ ಅವನು ತಾನು ಒಬ್ಬನೇ ಬಂದು ಹಾಲಿಟ್ಟು ಹೋಗುವನು: ಬೆಳಿಗ್ಗೆ ಬಂದು ಹೊನ್ನನ್ನು ತೆಗೆದುಕೊಂಡು ಹೋಗುವನು.

ಹೀಗೆಯೇ ಇರುತ್ತಿರಲು ಒಂದು ದಿನ ಆ ಬ್ರಾಹ್ಮಣನು ಯಾವುದೋ ಊರಿಗೆ ಹೋಗಬೇಕಾಗಿ ಬಂತು. ಅದರಿಂದ ಹಾವಿಗೆ ಹಾಲಿಡುವ ಕೆಲಸವನ್ನು ಮಗನಿಗೆ ಒಪ್ಪಿಸಿ ಹೋದನು. ಮಗನು

ಹಾಲಿಟ್ಟು ಹೊನ್ನು ತೆಗೆದುಕೊಳ್ಳುವಾಗ ಅವನಿಗೆ ಒಂದು ಯೋಚನೆ ಬಂತು. ''ಈ ಹುತ್ತದಲ್ಲಿ ಹೊನ್ನು ಬೇಕಾದ ಹಾಗೆ ಇರಬೇಕು. ಈ ಹುತ್ತವನ್ನು ಅಗೆದು ಹಾವನ್ನು ಕೊಂದು ಎಲ್ಲವನ್ನೂ ತೆಗೆದು ಕೊಂಡು ಬಿಡೋಣ.'' ಎಂದುಕೊಂಡು, ಎರಡನೆಯದಿನ ಹಾಲು ಕುಡಿಯುವುದಕ್ಕೆ ಬಂದ ಹಾವನ್ನು ದೊಣ್ಣೆಯಿಂದ ಹೊಡೆದನು. ಅದು ಏನೋ ತಪ್ಪಿ ಹಾವು ಉಳಿದುಕೊಂಡು, ರೋಷದಿಂದ ಹಿಂ ತಿರುಗಿ ಅವನನ್ನು ಕಚ್ಚಿತು. ಆ ಹುಡುಗನು ಆ ಕೂಡಲೇ ಸತ್ತು ಹೋದನು. ನೆಂಟರು ಇಷ್ಟರು ಬಂದು ಅವನನ್ನು ತೆಗೆದುಕೊಂಡು ಹೋಗಿ ಸಮೀಪದಲ್ಲಿಯೇ ಚಿತಿಯನ್ನು ಮಾಡಿ ಸುಟ್ಟರು.

ತನಗೆ ಶರಣಾಗಿ ಬಂದ ಜಂತುಗಳ ।  
ಕಾಯದಿದ್ದಂಥ ಕರುಣ ಹೀನನಿಗೆ ॥  
ಇದ್ದ ಸತ್ಫಲವು ವಿಫಲವಾಗುವುದು ।  
ಕೇಳಿ ಕಾಣೆಯಾ ಪದ್ಮವನ ಕಥೆಯಾ ॥ ೨೬ ॥

ನೆಂಟರು ಅದು ಹೇಗೆ ಎಂದು ಕೇಳಲು, ಹರಿದತ್ತನು ಹೇಳಿ ದನು:-



# ಭದ್ರತೆಗೆ-ಲಾಭಕ್ಕೆ

ಮೈಸೂರು ಸರ್ಕಾರದ ವಿಮೆ
ಇಲಾಖೆಯಲ್ಲಿ
ಇಂದೇ ಇನ್ಷ್ಯೂರ್ ಮಾಡಿ

ಪಬ್ಲಿಕ್ ಬ್ರಾಂಚ್ ದೃಢವಾದ ನಂಬಿಕೆ
ಯನ್ನು ಹುಟ್ಟಿಸುತ್ತದೆ.
ಭದ್ರ ಎಂದರೆ ಇದಕ್ಕಿಂತ ಭದ್ರ ಇನ್ನಿಲ್ಲ
ನಿಮ್ಮ ಹಣಕ್ಕೆ ಸಂಸ್ಥಾನದ
ಗ್ಯಾರಂಟಿಯುಂಟು.

**ಇಂದೇ ಇನ್ಷ್ಯೂರ್ ಮಾಡಿ !**
**ನಾಳೆಯೆಂದರೆ ಹಾಳು !!**

**ಮೋಟಾರ್ ಇನ್ಷ್ಯೂರೆನ್ಸ್ ಕೂಡ ಉಂಟು.**

ಸೆಕ್ರೆಟರಿ, ಬೆಂಗಳೂರು ಅಥವಾ ತಮ್ಮ ಸಮೀಪದ ಏಜೆನ್ಸಿ
ಇವರಲ್ಲಿ ದಯವಿಟ್ಟು ವಿವರಗಳನ್ನು ವಿಚಾರಿಸಿ.

# ಹೊಸಗನ್ನಡ ಪಂಚತಂತ್ರ

## ಪದ್ಮವನದ ಹಂಸಗಳ ಕಥೆ

ಒಬ್ಬಾನೊಬ್ಬನು ಚಿತ್ರರಥನೆಂಬ ರಾಜನು ಇದ್ದನು. ಆತನು ಒಂದು ಸರೋವರವನ್ನು ಕಟ್ಟಿಸಿ ಅಲ್ಲಿ ತಾವರೆಗಳನ್ನು ಬೆಳೆಸಿ, ಅದಕ್ಕೆ ಪದ್ಮವನ ಎಂದು ಹೆಸರಿಟ್ಟನು. ಅಲ್ಲಿಗೆ ಯಾರಾದರೂ ಹೋಗಿ ಅದನ್ನು ಕೆಡಿಸಿಯಾರು ಎಂದು ಕಾವಲಿಟ್ಟನು. ಅಲ್ಲಿ ಚಿನ್ನದ ಹಂಸೆಗಳು ಬಂದು ನೆಲಸಿದುವು. ಅವು ಆರು ತಿಂಗಳಿಗೊಮ್ಮೆ ಒಂದೊಂದು ಗರಿಯನ್ನು ಕೊಡುತ್ತಿದ್ದುವು.

ಒಂದು ದಿನ ಅಲ್ಲಿಗೆ ಚಿನ್ನದ ಹಕ್ಕಿಯೊಂದು ಬಂತು. ಅದು ಅಲ್ಲಿ ಇರಬೇಕು ಎನ್ನಲು ಹಂಸಗಳು "ನಾವು ಆರು ತಿಂಗಳಿಗೊಂದು ಚಿನ್ನದ ಗರಿಯನ್ನು ಕೊಟ್ಟು ಈ ಪದ್ಮವನವನ್ನು ಗುತ್ತಿಗೆಗೆ ತೆಗೆದು ಕೊಂಡಿರುವೆವು." ಎಂದುವು. ಎರಡಕ್ಕೂ ಮಾತಿಗೆ ಮಾತು ನಡೆದು ಎರಡಕ್ಕೂ ಜಗಳವೂ ಆಯಿತು. ಆ ದೊಡ್ಡ ಹಕ್ಕಿಯು ನೇರವಾಗಿ ರಾಜನ ಬಳಿಗೆ ಹೋಯಿತು. "ದೇವ, ಈ ಹಕ್ಕಿಗಳಿಗೆ ತಾವು ಈ ಪದ್ಮವನ್ನು ಗುತ್ತಿಗೆಗೆ ಕೊಟ್ಟಿರುವಿರಾ? ನಮ್ಮನ್ನು ದೊರೆಯೂ ಏನೂ ಮಾಡುವಂತಿಲ್ಲ. ನಾವು ಯಾರನ್ನೂ ಇಲ್ಲಿ ಸೇರಿಸುವುದಿಲ್ಲ. ಎನ್ನುವವಲ್ಲಾ!" ಎಂದು ದೂರು ಹೇಳಿತು.

ಆಗ ರಾಜನು ದೂತರನ್ನು ಕರೆದು "ಹೋಗಿ, ಆ ಪಕ್ಷಿಗಳನ್ನೆಲ್ಲಾ ಕೊಂದು ತನ್ನಿ" ಎಂದು ಅಪ್ಪಣೆ ಮಾಡಿದನು. ಆಳುಗಳು ದೊಣ್ಣೆಗಳನ್ನು ತೆಗೆದುಕೊಂಡು ಅಲ್ಲಿಗೆ ಹೋದರು. ಅದನ್ನು ಕಂಡು ಆ ಹಂಸಗಳಲ್ಲಿ ವಯಸ್ಸಾದ ಹಿರಿಯ ಹಂಸವೊಂದು ಎಲ್ಲರನ್ನೂ ಕೂಗಿ, "ಏಳಿ, ಏಳಿ, ಎಲ್ಲರೂ ಹಾರಿ ಹೋಗೋಣ" ಎಂದು ಕೂಗಿ ಕೊಂಡಿತು. ಎಲ್ಲವೂ ಹಾರಿಯೂ ಹೊರಟು ಹೋದುವು. ಅರಸನಿಗೆ ಬರುತ್ತಿದ್ದ ಚಿನ್ನದ ಗರಿಗಳು ಇಲ್ಲವಾಯಿತು. ಅರಸನು ಹೀಗೆ ಕಾಯಬೇಕಾಗಿದ್ದ ಹಂಸಗಳನ್ನು ಕೊಲ್ಲಲು ಹೋಗಿ ನಷ್ಟ ಪಟ್ಟನು.

ಅದರಿಂದ ಹೇಳಿದೆನು "ಕೇಳಿ ಕಾಣೆಯಾ ಪದ್ಮನಸ ಕಥೆಯಾ" ಎಂದು ಅವರನ್ನೆಲ್ಲ ಕಳುಹಿಸಿಕೊಟ್ಟು ತಾನು ಮತ್ತೆ ಹುತ್ತದ ಬಳಿಗೆ ಹೋದನು. ಎಂದಿನಂತೆ ಹಾಲನ್ನು ಇಟ್ಟು, ಹಾವನ್ನು ಕರೆದು ಹಾಲನ್ನು ತೆಗೆದುಕೋ ಎಂದು ಕೇಳಿಕೊಂಡನು. ಹಾವು ಒಳಗಿನಿಂದಲೇ ಹೇಳಿತು:— "ನೀನು ಪುತ್ರ ಶೋಕವನ್ನೂ ಮರೆತು ಇಲ್ಲಿಗೆ ಬಂದಿರುವುದು ಲೋಭದಿಂದ. ಅದರಿಂದ ಇನ್ನು ಮೇಲೆ ನನಗೂ ನಿನಗೂ ಪ್ರೀತಿಯು ಉಚಿತವಲ್ಲ. ನಿನ್ನ ಮಗನು ನನ್ನನ್ನು ಹೊಡೆದನು. ನಾನು ಅವನನ್ನು ಕಚ್ಚಿದೆನು. ನಾನು ದೊಣ್ಣೆಯೇಟನ್ನು ಮರೆಯುವಂತಿಲ್ಲ ನೀನು ಪುತ್ರ ಶೋಕವನ್ನು ಮರೆಯುವಂತಿಲ್ಲ. ಆದರೂ ನೀನು ನನಗೆ ಮಿತ್ರನಾಗಿದ್ದನು, ಅದರಿಂದ ಈ ವಜ್ರವನ್ನು ತೆಗೆದುಕೊ ಇನ್ನು ಮೇಲೆ ಇಲ್ಲಿ ಬರಬೇಡ" ಎಂದು ವಜ್ರವನ್ನು ಕೊಟ್ಟು ಕಳುಹಿಸಿತು. ಬ್ರಾಹ್ಮಣನು "ನೋಡಿದೆಯಾ ? ಮಗನಿಂದ ಹೀಗಾಯಿತು." ಎಂದು ವ್ಯಥೆ ಪಟ್ಟುಕೊಂಡು ಮನೆಗೆ ಹೋದನು.

ಅದರಿಂದ "ಸ್ನೇಹ ಕೂಡಿಸಬಹುದೆ ಒಡೆದ ಗೆಳೆತನವಾ" ಎಂದು ಹೇಳಿದೆನು, ಇವನನ್ನು ಕೊಲ್ಲುವುದೇ ನ್ಯಾಯ. ಇವನನ್ನು ಕೊಂದರೆ ರಾಜ್ಯವು ಅಕಂಟಕ*ವಾಗುವುದು."

ಅರಿಮರ್ದನನು ಕ್ರೂರಾಕ್ಷನನ್ನು ಕೇಳಿದನು: ಅವನು ಹೇಳಿದನು: "ದೇವ, ಅವನು ಹೇಳಿದುದು ನಿರ್ದಯವು. ಅದು ಸರಿಯಲ್ಲ. ಶರಣಾಗತನನ್ನು ವಧಿಸಬಾರದು. ಕೇಳಿಲ್ಲವೆ?

ಶರಣು ಬಂದವ ಬೇಡನಾದರು | ಪಾರಿವಾಳವು ಪೂಜೆಗೈದುದು ||
ತನ್ನ ಮಾಂಸವನಿತ್ತು ಊಟಕೆ ಸಗ್ಗ ಕೈದಿತಲಾ || ೨೭ ||

ಅರಿಮರ್ದನನು ಅದೆಂತು ಎಂದು ಕೇಳಲು ಕ್ರೂರಾಕ್ಷನು ಹೇಳಿದನು:—

* (ಕಂಟಕ=ಮುಳ್ಳು, ಅಕಂಟಕ= ಮುಳ್ಳು ಇಲ್ಲದ್ದು.)

ಒಬ್ಬನು ಬೇಡನಿದ್ದನು. ಅವನು ಹಕ್ಕಿಗಳನ್ನು ಹಿಡಿಯುವನು ಸಿಕ್ಕಿದ ಮೃಗಗಳನ್ನು ಕೊಲ್ಲುವನು. ಅವನನ್ನು ನೋಡಿದರೇ ಭಯವಾಗುವುದು. ಅವನ ಕೈಯಲ್ಲಿ ಪಂಜರವೊಂದು, ದೊಣ್ಣೆಯೊಂದು ಯಾವಾಗಲೂ ಇರುವುದು. ಇಂಥಾ ನೀಚನು ಒಮ್ಮೆ ಅರಣ್ಯಕ್ಕೆ ಹೋದನು. ಅಲ್ಲಿ ಒಂದು ಹೆಣ್ಣು ಪಾರಿವಾಳವು ಸಿಕ್ಕಿತು. ಅದನ್ನು ಹಿಡಿದು ಪಂಜರಕ್ಕೆ ಕೂಡಿಕೊಂಡು ಹಾಗೆಯೇ ಮುಂದು ಹೋಗುತ್ತಿರಲು, ದೊಡ್ಡ ಮಳೆಯು ಬಂತು. ದಿಕ್ಕು ದಿಕ್ಕುಗಳೂ, ಮೋಡಗಳಿಂದ ಮುಚ್ಚಿ ಹೋದುವು. ಮಳೆಯಲ್ಲಿ ನೆನೆದು, ಗಾಳಿಯಲ್ಲಿ ನಡುಗುತ್ತಾ ಇರುವುದಕ್ಕೊಂದು ನೆಲೆಯನ್ನು ಕಾಣದೆ ಹೋಗಿ, ಒಂದು ಹೆಮ್ಮರವನ್ನು ಆಶ್ರಯಿಸಿದನು.

ಅಲ್ಲಿಯೂ ಅವನಿಗೆ ಚಳಿಯು ಬಿಡಲಿಲ್ಲ. ಹಸಿವು ತಾನೇ ತಾನಾಯಿತು. ಪ್ರಾಣವೂ ಉಳಿಯುವುದೋ ಇಲ್ಲವೋ ಎನ್ನಿಸಿ, ಕೇಳಿಕೊಂಡನು: ''ಈ ವೃಕ್ಷದಲ್ಲಿ ಯಾರು ಇರುವರೋ ಅವರಿಗೆ ನಾನು ಶರಣು ಬಂದಿರುವೆನು. ಅವರು ನನ್ನನ್ನು ಕಾಯಲಿ. ನನಗೆ ಚಳಿ, ಹಸಿವು. ಪ್ರಾಣಹೋಗುತ್ತಿದೆ.'' ಎಂದು ಕೂಗಿಕೊಂಡನು.

ಆ ಮರದಲ್ಲಿ ಒಂದು ಪಾರಿವಾಳವು ಬಹುಕಾಲದಿಂದ ಇತ್ತು. ಅದರ ಹೆಂಡತಿಯು ಆ ದಿನಬೆಳಗ್ಗೆಎದ್ದು ಹೊರಗೆ ಹೊಗಿದ್ದುದು ಮತ್ತೆ ಮರಳಿ ಬಂದಿರಲಿಲ್ಲ ಆ ಹೆಂಡತಿಯನ್ನು ನೆನೆದು ಅದುಇಂತಹ ದೊಡ್ಡ ಮಳೆಯಲ್ಲಿ ಅವಳು ಏನಾದಳೊ? ಇನ್ನೂ ಬರಲಿಲ್ಲವಲ್ಲ ಅವಳು ಬರದಿದ್ದರೇನುಗತಿ? ನನ್ನ ಮನೆಯೇ ಇಲ್ಲವಾಗುವುದು ನನ್ನ ಹೆಂಡತಿಯು ನನ್ನನ್ನೇ ತನ್ನ ಪ್ರಾಣವಾಗಿ ನಂಬಿರುವವಳು. ಯಾವಾಗಲೂ ನನಗೆ ಹಿತವನ್ನೇ ಆಚರಿಸುವವಳು ಅಂತಹ ಹೆಂಡತಿಯು ಸಿಕ್ಕಬೇಕಾದರೆ ಪುಣ್ಯವನ್ನು ಮಾಡಿರಬೇಕು. ಮನೆಯೆಂದರೆ ಕಲ್ಲುಮಣ್ಣಿನ ಮನೆಯು ಮನೆಯೇ? ಹೆಂಡತಿಯೇ ಮನೆಯು! ಅಂತಹ ಹೆಂಡತಿಯು ಇಲ್ಲದಿದ್ದರೆ ಮನೆಯೂ ಕಾಡೇ ಆಗುವುದು.'' ಎಂದು ಅಳುತ್ತಿತ್ತು.

ಆ ಅಳುವನ್ನು ಕೇಳಿದ ಪಂಜರದಲ್ಲಿದ್ದ ಹೆಣ್ಣು ಕಪೋತವು ಅದನ್ನು ಕೇಳಿ "ನನ್ನ ಗಂಡನು ನನ್ನ ಮೇಲೆ ಇಷ್ಟು ಪ್ರೀತಿಯನ್ನು



ಇಟ್ಟುಕೊಂಡಿರುವನಲ್ಲಾ! ನನಗಿಂತ ಇನ್ನು ಪುಣ್ಯವತಿ ಯಾರು? ಗಂಡನು ಮೆಚ್ಚಿಕೊಂಡ ಹೆಂಡತಿಯೇ ಪುಣ್ಯವತಿಯು. ಗಂಡನನ್ನು ಮೆಚ್ಚಿಸದ ಹೆಣ್ಣು ಬೆಂಕಿಯ ಪಾಲಾದರೆ ತಾನೇ ಏನು? ಹೆಂಗುಸಿಗೆ ತಂದೆಯಿಂದಲೂ, ಒಡಹುಟ್ಟುಗಳಿಂದಲೂ, ಮಕ್ಕಳಿಂದಲೂ ಆಗುವದೆಲ್ಲಕ್ಕಿಂತಲೂ ಹೆಚ್ಚಾದ ಸುಖವನ್ನು ಕೊಡುವ ಗಂಡನನ್ನು ಯಾರು ತಾನೇ ಪೂಜೆ ಮಾಡುವುದಿಲ್ಲ?" ಎಂದು ಸಂತೋಷಪಟ್ಟುಕೊಂಡು. ಗಂಡನಿಗೆ ಹೇಳಿತು: "ಎಲೈ ಪಕ್ಷಿಯೆ, ನಾನು ಹೇಳುವ ಹಿತವಚನವನ್ನು ಕೇಳು. ಈ ಹಕ್ಕಿ ಬೇಟೆಗಾರನು ನಿನ್ನ ಮನೆಯ ಬಾಗಿಲಿಗೆ ಬಂದಿರುವನು. ಚಳಿ, ಹಸಿವು, ಎಂದು ಅಳುತ್ತಿರುವನು. ನೀನು

ಇವನನ್ನು ಪೂಜಿಸಬೇಕು. ಈ ಶರಣಾಗತನನ್ನು ಪ್ರಾಣವನ್ನಾದರೂ ಕೊಟ್ಟು ಕಾಪಾಡು. ಇವನು ನನ್ನ ಹೆಂಡತಿಯನ್ನು ಹಿಡಿದು ಬಂಧಿಸಿರುವನೆಂದು ಇವನಲ್ಲಿ ಕೋಪ ಮಾಡಿಕೊಳ್ಳಬೇಡ. ದಾರಿದ್ರ್ಯ, ರೋಗ, ದುಃಖಗಳೂ ಬಂಧನವ್ಯಸನಗಳೂ ತನ್ನ ಪಾಪವೆಂಬ ಮರದ ಫಲಗಳು. ಅವರಿಂದ ಧರ್ಮವನ್ನು ನೋಡು, ಧರ್ಮವನ್ನು ಮಾಡು.''

ಹೆಂಡತಿಯ ಮಾತನ್ನು ಕೇಳಿ ಪಾರಿವಾಳವು ಬೇಡನಿಗೆ ಹೇಳಿತು. ''ಎಲೈ ನಿನಗೆ ಸ್ವಾಗತವು. ನೀನು ದುಃಖ ಪಡಬೇಡ. ನಿನ್ನ ಮನೆಯಲ್ಲಿಯೇ ಇರುವಂತೆ ಭಾವಿಸಿಕೊ. ನಾನು ಏನು ಮಾಡಬೇಕು ಹೇಳು'' ಎಂದು ಕೇಳಿತು. ಬೇಡನು ಅದನ್ನು ಕೇಳಿ ''ನನಗೆ ಬಹಳ ಚಳಿಯಾಗುತ್ತಿದೆ. ಅದಕ್ಕೇನಾದರೂ ಮಾಡು'' ಎಂದು ಕೇಳಿಕೊಂಡನು. ಪಾರಿವಾಳವು ಹಾರಿಹೋಗಿ ಎಲ್ಲಿಂದಲೋ ಉರಿಯುತ್ತಿದ್ದ ಕಡ್ಡಿಯನ್ನು ಕಚ್ಚಿಕೊಂಡು ಬಂದು ಅವನ ಮುಂದೆ ಹಾಕಿತು. ಅದರ ಮೇಲೆ ಒಣಗಿದ ಎಲೆಗಳನ್ನು ಹುಡುಕಿಕೊಂಡು ಬಂದು ಹಾಕಿ ಅದನ್ನು ತನ್ನ ರೆಕ್ಕೆಗಳಿಂದ ಬೀಸಿ ಉರಿಮಾಡಿತು. ''ನೀನು ಈ ಬೆಂಕಿಯಲ್ಲಿ ಮೈಕಾಯಿಸಿಕೊ. ನಾನು ಬಡವನು. ನಾನು ನಿನಗೆ ಏನೂ ಕೊಡಲಾರೆ. ಒಬ್ಬ ಅತಿಥಿಗಾದರೂ ಅನ್ನವನ್ನು ಕೊಡಲಾರದ ಗೃಹಸ್ಥನಿದ್ದರೇನು? ಹೋದರೇನು? ಅದರಿಂದ ಈ ದೇಹವನ್ನೇ ನಿ[illegible] ಕೊಡುವೆನು. ಒಂ[illegible] ಗಳಿಗೆ [illegible]'' [illegible]. ಆ ಬೆಂಕಿಯನ್ನು [illegible]ಕ್ಷಿಣ ಮಾಡಿ, ತನ್ನ ಗೂಡಿಗೆ ಹೋಗುವಷ್ಟು ಸುಖವಾಗಿ ಹೊಕ್ಕಿತು.

ಅದನ್ನು ಕಂಡು ಬೇ[illegible] ನಾಚಿಕೆಯಾಯಿತು. ''ಅಹಾ, ನೋಡಿದೆಯಾ? ಇದಕ್ಕೆ ಇರುವಷ್ಟು ತಿಳಿವಳಿಕೆಯೂ ನನಗೆ ಇಲ್ಲವಾಯಿತಲ್ಲಾ! ನಾನೆಂತಹ ಪಾಪಿಯು. ನನಗೆ ನರಕವು ತಪ್ಪಿದ್ದಲ್ಲ. ಈ [illegible]ಪೋತವೇ ನನಗೆ ಗುರುವಾಯಿತು. ಇಂದು ಮೊದಲು ಎಲ್ಲಾ ಭೋಗಗಳನ್ನು ಬಿಡುವೆನು. ಬೇಸಿಗೆಯಲ್ಲಿ ಒಣಗಿಹೋಗುವ ನೀರ

ನಂತೆ ಈ ದೇಹವು ಒಣಗಿ ಹೋಗಲಿ. ಇನ್ನುಮುಂದೆ ಚಳಿ, ಗಾಳಿ ಬಿಸಿಲು, ಮಳೆಗಳನ್ನು ಲಕ್ಷಿಸದೆ, ದೇಹದ ಸುಖವನ್ನು ಗಮನಿಸದೆ, ಉಪವಾಸಾದಿಗಳನ್ನು ಮಾಡುತ್ತ ಧರ್ಮವನ್ನು ಆಚರಿಸುವೆನು'' ಎಂದು ನಿಶ್ಚಯ ಮಾಡಿಕೊಂಡು, ತನ್ನಲ್ಲಿದ್ದ ದೊಣ್ಣೆ, ಪಂಜರ ಮೊದಲಾದವುಗಳನ್ನು ಮುರಿದು ಹಾಕಿದನು. ಪಂಜರದಲ್ಲಿದ್ದ ಹೆಣ್ಣು ಹಕ್ಕಿಯನ್ನು ಬಿಟ್ಟು ಬಿಟ್ಟನು.

ಆ ಹಕ್ಕಿಯು ಬೆಂಕಿಗೆ ಬಿದ್ದ ಗಂಡನನ್ನು ಕಂಡು ಆಯ್ಯೋ ಎಂದು ಬಹುವಾಗಿ ಅತ್ತುಕೊಂಡು, ನೀನಿಲ್ಲದೆ ನಾನು ಇರುವುದಿಲ್ಲ.'' ಎಂದು ನಿಶ್ಚಯಿಸಿ, ತಾನೂ ಬೆಂಕಿಗೆ ಬಿದ್ದು ಹೋಯಿತು.

ಹೀಗೆ ಅತಿಥಿಪೂಜೆಯನ್ನು ಸಲ್ಲಿಸಿ ಶರಣಾಗತನನ್ನು ಕಾಪಾಡಿದ ಆ ಎರಡು ಹಕ್ಕಿಗಳೂ ವಿಮಾನದಲ್ಲಿ ಕುಳಿತುಕೊಂಡು ಸ್ವರ್ಗಕ್ಕೆ ಹೋದುವು.ಬೇಡನು ಅದನ್ನು ಕಂಡುಸಂತೋಷಪಟ್ಟು ಪ್ರಾಣಿಹಿಂಸೆಯನ್ನು ಬಿಟ್ಟು, ವನದಲ್ಲಿ ತಪಸ್ಸುಮಾಡಿಕೊಂಡಿದ್ದು ಕೊನೆಗೆಕಾಡು ಕಿಚ್ಚಿನಲ್ಲಿ ಬಿದ್ದು ಪ್ರಾಣವನ್ನು ಬಿಟ್ಟು ಒಳ್ಳೆಯ ಗತಿಯನ್ನು ಹೊಂದಿದನು. ಅದರಿಂದ ''ಪಾರಿವಾಳವು ಸಗ್ಗಕ್ಕೈದಿತಲಾ'' ಎಂದು ಹೇಳಿದೆನು. ಅದನ್ನು ಕೇಳಿ ಅರಿಮರ್ದನನು ದೀಪ್ತಾಕ್ಷನನ್ನು ಕೇಳಿದನು. ಅವನೂ,''ದೇವ, ಇವನನ್ನು ಕೊಲ್ಲಕೂಡದು'' ಎಂದು ಕ್ರೂರಾಕ್ಷನ ಮಾತನ್ನು ಒಪ್ಪಿದನು.

ಅನಂತರ ಅರಸನು ವಕ್ರನಾಸನನ್ನು ಕೇಳಿದನು. ಅವನು ''ದೇವ'' ಇವನನ್ನು ಕೊಲ್ಲಕೂಡದು. ಕೇಳಿಲ್ಲವೆ?

ಜಗಳವಾಡುವ ಹಗೆಯೆಮಗೆ ಹಿತಕರನು ||
ಕಳ್ಳನಿತ್ತನು ಪ್ರಾಣವನು ಹಾರುವಗೆ ||
ರಾಕ್ಷಸನುಳಿಸಿದನವಗೆ ಗೋಯುಗವ || ೨೮ ||

ಅರಸನು ಅದೆಂತು ಎನಲು, ವಕ್ರನಾಸನು ಹೇಳಿದನು:—

# ದ್ರೋಣನ ಕಥೆ

ಒಂದಾನೊಂದು ಊರಿನಲ್ಲಿ ದ್ರೋಣನೆಂಬ ಒಬ್ಬ ದರಿದ್ರ ಬ್ರಾಹ್ಮಣನಿದ್ದನು. ಅವನು ಅವರಿವರು ಕೊಟ್ಟುದನ್ನು ತಂದು ತಿಂದು ಕಾಲಹರಣ ಮಾಡುವ ಬಡವನು. ಅವನಿಗೆ ಸೊಗಸಾದ ಬಟ್ಟೆ, ಒಡವೆ ಕೊನೆಗೆ ದಿನವೂ ತಾಂಬೂಲ ಕೂಡ ಇರಲಿಲ್ಲ. ಅವನನ್ನು ಕಂಡು ಯಾರೋ ಮರುಗಿ ಅಯ್ಯೋ ಪಾಪ ಎಂದು ಎರಡು ಹೆಂಗರುಗಳನ್ನು ಕೊಟ್ಟರು. ಅವನ್ನು ಅವನು ಬಹು ಕಷ್ಟಪಟ್ಟು ಬೆಳೆಸಿದನು. ಅವು ಚೆನ್ನಾಗಿ ಆಗಿದ್ದವು.




ಅವನ್ನು ಕಂಡು ಒಬ್ಬ ಕಳ್ಳನಿಗೆ 'ಇವುಗಳನ್ನು ಹಾರಿಸಿಕೊಂಡು ಹೋಗಬೇಕು ಎನ್ನಿಸಿತು. ಅದಕ್ಕಾಗಿ ಅವನು ಎಲ್ಲವನ್ನೂ ಸಿದ್ಧಪಡಿಸಿಕೊಂಡು ಹೊರಟನು. ದಾರಿಯಲ್ಲಿ ವಿಕಾರನಾಗಿ ನೋಡಿದರೆ ಹೆದರಿಕೆಯಾಗಬೇಕು ಅಂತಹದೊಂದು ಆಕಾರವು ಕಾಣಿಸಿತು. ನೀನು ಯಾರು? ” ಎಂದು ಕಳ್ಳನು ಕೇಳಲು, ಅದು ನಾನು “ಸತ್ಯವಚನನೆಂಬ ಬ್ರಹ್ಮರಾಕ್ಷಸನು. ನೀನು ಯಾರು? ನಿಜ ಹೇಳು” ಎಂದಿತು ಕಳ್ಳನು “ನಾನು ಕ್ರೂರಕರ್ಮನೆಂಬ ಚೋರನು. ಇಲ್ಲೊಬ್ಬ ದರಿದ್ರ ಬ್ರಾಹ್ಮಣನ ಮನೆಯಿದೆ. ಅಲ್ಲಿ ಎರಡು ಕಡಸುಗಳಿವೆ. ಅವುಗಳನ್ನು ತೆಗೆದುಕೊಂಡುಹೋಗಲು ಹೊರಟಿದ್ದೇನೆ. ನೀನು ಎಲ್ಲಿಗೆ ಹೊರಟಿದ್ದೀಯೇ ? ” ಎಂದು ಕೇಳಿದನು. ಆಗ ಬ್ರಹ್ಮರಾಕ್ಷಸನು, ನಾನು ಆರುದಿನಕ್ಕೊಮ್ಮೆ ಊಟ ಮಾಡುವವನು. ನಾನು ಈ ದಿನ ಆ ಬ್ರಾಹ್ಮಣನನ್ನು ಹಿಡಿದು ತಿನ್ನಬೇಕೆಂದಿರುವೆನು. ಅದಕ್ಕಾಗಿ ಹೊರಟಿರುವೆನು. ನಾವಿಬ್ಬರೂ ಒಂದೇ ಕಡೆಗೆ ಹೊರಟಿರುವೆವು. ಜೊತೆಯಲ್ಲಿ

ಇವರಿಬ್ಬರ ಮಾತನ್ನೂ ಕೇಳಿದ ಬ್ರಾಹ್ಮಣನು ಕೈ ಕಾಲು ತೊಳೆದುಕೊಂಡು ಮಡಿಯಾಗಿ ಮಂತ್ರ ಜಪ ಮಾಡಿ ದೇವರಿಗೆ ನಮಸ್ಕಾರ ಮಾಡಲು ಬ್ರಹ್ಮರಾಕ್ಷಸನು ಓಡಿ ಹೋದನು. ಮನೆಯವರು ದೊಣ್ಣೆಗಳನ್ನು ತೆಗೆದುಕೊಂಡು ಬರಲು, ಕಳ್ಳನು ಓಡಿಹೋದನು. ಆದರಿಂದ ನಾನು "ಜಗಳವಾಡುವ ಹಗೆಯವುಗೆ ಹಿತಕರನು" ಎಂದು ಹೇಳಿದೆನು. ಎಂದನು.

ಅವನ ಮಾತಾದ ಮೇಲೆ ಅರಿಮರ್ದನನು ಪ್ರಾಕಾರಕರ್ಣನನ್ನು "ನಿನ್ನ ಅಭಿಪ್ರಾಯವೇನು?" ಎಂದು ಕೇಳಿದನು. ಅವನೂ ಹೇಳಿದನು. "ದೇವ, ಈತನನ್ನು ವಧಿಸಬಾರದು. ಇವನನ್ನು ಕಾಪಾಡಿ ಇಟ್ಟುಕೊಂಡಿದ್ದರೆ, ಇನ್ನೇನಿಲ್ಲದಿದ್ದರೂ ಸುಖವಾಗಿ ಕಾಲವನ್ನು ಕಳೆಯುವುದಕ್ಕಾದರೂ ಆಗುವುದು. ಕೇಳಿಲ್ಲವೆ?

ಒಬ್ಬರೊಬ್ಬರ ಮರ್ಮವನು। ಒಬ್ಬರೊಬ್ಬರು ಭೇದಿಸಲು ॥
ಇಬ್ಬರೂ ಸಾಯುವರು ನಿಜ। ಹುತ್ತ ಹೊಟ್ಟೆಯ ಹಾವ್ಗಳಂತೆ ॥೨೯॥

ಅರಿಮರ್ದನನು ಅದು ಹೇಗೆ ಎನ್ನಲು, ಪ್ರಾಕಾರಕರ್ಣನು ಹೇಳಿದನು.

---

## ಮರ್ಮಗಳನ್ನು ಭೇದಿಸಿ ಕೆಟ್ಟ ಹಾವುಗಳ ಕಥೆ

ಒಂದಾನೊಂದು ನಗರದಲ್ಲಿ ದೇವಶಕ್ತಿಯೆಂಬ ಅರಸನಿದ್ದನು. ಅವನ ಮಗನಿಗೆ ಹೊಟ್ಟೆಯೊಳಗೆ ಒಂದು ಹಾವು ಸೇರಿಕೊಂಡು ಅದೇ ಕಾರಣವಾಗಿ ಸವೆಯುತ್ತ ಬಂದನು. ಏನೇನೋ ವೈದ್ಯಗಳನ್ನು ಮಾಡಿದರೂ ಅದು ಗುಣವಾಗಲಿಲ್ಲ. ಆದರಿಂದ ಅವನಿಗೆ ಬೇಸರ

ನಾಗಿ ದೇಶಾಂತರ ಹೋದನು. ದೇಶಾಂತರವನ್ನು ಧರಿಸಿಕೊಂಡು ಭಿಕ್ಷಾಟನ ಮಾಡಿಕೊಂಡು ಒಂದು ಊರಿಗೆ ಹೋದನು.

ಅಲ್ಲಿ ಬಲಿಯೆಂಬ ಅರಸನಿದ್ದನು. ಅವನಿಗೆ ಇಬ್ಬರು ಹೆಣ್ಣು ಮಕ್ಕಳು. ಇಬ್ಬರೂ ದಿನವೂ ಬೆಳಗೆದ್ದು ಬಂದು ಆತನಿಗೆ ಕಾಲು ಹಿಡಿದು ನಮಸ್ಕಾರ ಮಾಡುವರು. ಒಬ್ಬಳು "ಮಹಾರಾಜ, ವಿಜಯಿಸು, ನಿನ್ನ ಕೃಪೆಯಿದ್ದರೆ ಎಲ್ಲವೂ ಲಭಿಸುವುದು." ಎನ್ನುವಳು. ಇನ್ನೊಬ್ಬಳು "ಮಹಾರಾಜ, ನೀನು ಮಾಡಿದ್ದನ್ನು ಭೋಜಿಸು" ಎನ್ನುವಳು.

ಒಂದು ದಿವಸ ಆ ರಾಜನಿಗೆ ಎರಡನೆಯವಳ ಮೇಲೆ ಕೋಪ ಬಂತು: "ಇವಳು ನಿತ್ಯವೂ ಮಾಡಿದ್ದನ್ನು ಭೋಜಿಸು ಎನ್ನುತ್ತಾಳೆ ಇವಳು ತಾನು ಮಾಡಿದ್ದನ್ನು ಉಪಭೋಗಿಸಲಿ. ಈ ಕೆಟ್ಟ ಮಾತಿನವಳನ್ನು ಯಾವನಾದರೂ ಪರದೇಶಿಗೆ ಕೊಟ್ಟು ಮದುವೆ ಮಾಡಿ" ಎಂದನು. ಅವಳೂ ಹಾಗೆಯೇ ಆಗಲಿ ಎಂದು ಒಪ್ಪಿಕೊಂಡಳು. ಯಾವುದೋ ದೇವಾಲಯದಲ್ಲಿದ್ದ ಭಿಕ್ಷುಕ ರಾಜಕುಮಾರನಿಗೆ ಇವಳನ್ನು ಕೊಟ್ಟು ಮದುವೆ ಮಾಡಿಬಿಟ್ಟರು. ಅವನೇ ಹೊಟ್ಟೆ ನೋವಿನ ಅರಸು ಮಗನು. ಇವಳು ಅವನನ್ನೇ ದೈವವೆಂದು ನಂಬಿಕೊಂಡು ತನ್ನ ತಂದೆಯು ಕೊಟ್ಟ ಅಲ್ಪಸ್ವಲ್ಪವನ್ನು ತೆಗೆದುಕೊಂಡು ಗಂಡನೊಡನೆ ದೇಶಾಂತರ ಹೊರಟು ಹೋದಳು.

ಹೀಗೆಯೇ ತಿರುಗುತ್ತಿರುವಾಗ ಒಂದು ದಿನ ಒಂದು ಕೆರೆಯ ಮಗ್ಗುಲಲ್ಲಿ ಗಂಡಹೆಂಡಿರು ಇಳಿದುಕೊಂಡರು. ಗಂಡನನ್ನು ಅಲ್ಲಿ ಕಾವಲಿಟ್ಟು ತಾನು ಉಪ್ಪು ಬೇಳೆ ಮೊದಲಾದುವುಗಳನ್ನು ತರಲು ಅಂಗಡಿಗೆ ಹೋದಳು.

ಅವಳು ಅಂಗಡಿಯಿಂದ ಬರುವ ವೇಳೆಗೆ ಅಲ್ಲಿಯೇ ಮಗ್ಗುಲಲ್ಲಿದ್ದ ಹುತ್ತದ ಮೇಲೆಯೇ ತಲೆಯಿಟ್ಟುಕೊಂಡು ರಾಜಪುತ್ರನು

ಮಲಗಿದ್ದಾನೆ. ಅವನ ಬಾಯಿಂದ ಒಂದು ಹಾವು ಈಚೆಗೆ ಬಂದು ಹೆಡೆಯನ್ನು ಬಿಚ್ಚಿಕೊಂಡು ಗಾಳಿಯನ್ನು ಕುಡಿಯುತ್ತಿದೆ. ಹುತ್ತ ದಿಂದ ಇನ್ನೊಂದು ಹಾವು ಬಂದು ಅದೂ ಗಾಳಿ ಕುಡಿಯುತ್ತಿದೆ. ಇವೆರಡೂ ಒಂದನ್ನೊಂದು ಕಂಡು, ಎರಡಕ್ಕೂ ಕೋಪಬಂದು ಒಂದನ್ನೊಂದು ಬಯ್ದಾಡುತ್ತಿವೆ. ಹುತ್ತದ ಹಾವು: "ಛೀ, ನಿನ್ನಂತಹ ದುಷ್ಟನಿಲ್ಲ. ಪಾಪ, ಈ ರಾಜಪುತ್ರನ ಹೊಟ್ಟೆಯಲ್ಲಿ ಸೇರಿಕೊಂಡು ಅವನನ್ನು ಬದುಕಿದ್ದರೂ ಸತ್ತವನನ್ನಾಗಿ ಮಾಡಿದ್ದೀಯೆ. ಪಾಪಿ" ಎಂದು ಬಯ್ದಿತು. ಹೊಟ್ಟೆಯ ಹಾವು "ನೀನು ಮಾತ್ರ ಯೋಗ್ಯ ನೇನೋ? ಹುತ್ತದಲ್ಲಿರುವ ಎರಡು ಕೊಡ ಹಣವನ್ನು ಇನ್ನೊಬ್ಬರೂ ಮುಟ್ಟದ ಹಾಗೆ ಮಾಡಿದ್ದೀಯೆ." ಎಂದಿತು. ಹುತ್ತದ ಹಾವಿಗೆ ರೇಗಿ "ಪಾಪ, ಆ ರಾಜಪುತ್ರನಿಗೆ ಗೊತ್ತಿಲ್ಲ. ಹಳಸಿದ ಗಂಜಿಯನ್ನು ಕುಡಿಸಿದರೆ ನೀನು ಧ್ವಂಸವಾಗಿ ಹೋಗುವೆಯೆಂದು. ಏನು, ಮಾಡು ವುದು?" ಎಂದಿತು. ಹೊಟ್ಟೆಯ ಹಾವು "ನಿನ್ನ ಗುಟ್ಟು ನಾನು ಕಾಣನೇನೋ? ಕಾದ ಎಣ್ಣೆಯನ್ನೋ ಬಿಸಿಬಿಸಿ ನೀರನ್ನೋ ಸುರಿದರೆ ನೀನೂ ಧ್ವಂಸವಾಗುವೆ. ಅದನ್ನು ಮರೆತೆಯೇನೋ?" ಎಂದಿತು.

ರಾಜಪುತ್ರಿಯು ಮರೆಯಲ್ಲಿ ನಿಂತು ಈ ಎರಡು ಹಾವುಗಳ ಮರ್ಮವನ್ನು ಕೇಳಿದಳು. ಹಾಗೆಯೇ ಮಾಡಿ ಗಂಡನ ರೋಗ ವನ್ನೂ ನೀಗಿಕೊಂಡು, ಹುತ್ತದಲ್ಲಿದ್ದ ನಿಧಿಯನ್ನು ತೆಗೆದುಕೊಂಡು, ಗಂಡನನ್ನು ರಾಜಧಾನಿಗೆ ಕರೆದುಕೊಂಡು ಹೋಗಿ ಸುಖವಾಗಿದ್ದಳು.

ಅದರಿಂದ ನಾನು "ಒಬ್ಬರೊಬ್ಬರ ಮರ್ಮವನು" ಎಂದು ಮುಂತಾಗಿ ಹೇಳಿದೆನು. ಎಂದನು.

ಇದೆಲ್ಲವನ್ನೂ ಕೇಳಿ ಅರಿಮರ್ದನನು ಸ್ಥಿರಜೀವಿಗೆ ಆಶ್ರಯ ಕೊಡುವುದೇ ಸರಿಯೆಂದು ಗೊತ್ತು ಮಾಡಿಕೊಂಡು ಹಾಗೆಯೇ ಮಾಡಿದನು. ರಕ್ತಾಕ್ಷನು ಮಾತ್ರ "ಅಯ್ಯೋ, ನೀವೆಲ್ಲರೂ ಸೇರಿ ನಮ್ಮ

ಅರಸನನ್ನು ಕೊಂದಿರಿ. ಎಲ್ಲಿ ಪೂಜ್ಯರಿಗೆ ಪೂಜೆಯು ಇಲ್ಲವಾಗು ವುದೋ, ಅಪೂಜ್ಯರಿಗೆ ಪೂಜೆಯು ದೊರೆಯುವುದೋ ಅಲ್ಲಿ ದುರ್ಭಿಕ್ಷ ಮರಣ, ಭಯ, ಎಂಬ ಈ ಮೂರು ತಪ್ಪದೆ ಆಗುವುವು. ತನ್ನ ಎದು ರಿಗೇ ಪಾಪ ಮಾಡಿದ್ದರೂ ಮೂರ್ಖನು ಒಳ್ಳೆಯ ಮಾತಿಗೆ ಸೋತು ಹೋಗುವನು ಎಂದು ಬಲ್ಲವರು ಹೇಳುವರು. ಈಗ ಅದು ನಿಜವಾ ಯಿತು. ಶತ್ರುವಾಗಿ, ನಂಬಿಕೆಗೆ ಅರ್ಹನಲ್ಲದ ಇವನನ್ನು ನಂಬಿ ನೀವು ನಿಮ್ಮ ತಲೆಯಮೇಲೆ ಕಲ್ಲುಹಾಕಿದಿರಿ, ಅಷ್ಟಲ್ಲದೆ ಹೇಳಿದೆಯೆ?

ದೇಶ ಕಾಲಗಳರಿಯದ। ಮೊಂಕು ಮಂತ್ರಿಯು ಪಡೆಯಲು ||
ಇದ್ದ ಅರ್ಥವು ವ್ಯರ್ಥವು| ಉದಯಕಾಲದ ತಮದೊಲು ॥ ೩೦ ॥

ಎಂದು ಹೇಳಿದರೂ ಗೂಗೆಗಳು ಕೇಳದೆ ಸ್ಥಿರಜೀವಿಯನ್ನು ತಮ್ಮ ದುರ್ಗಕ್ಕೆ ಕರೆದೊಯ್ಯಲು ಸಿದ್ಧರಾದರು. ಆಗ ಸ್ಥಿರಜೀವಿಯು "ದೇವ, ನಾನು ಈಗ ಏನೂ ಮಾಡಲಾರೆ, ನನ್ನಂತಹವನನ್ನು ಕರೆ ದುಕೊಂಡು ಹೋಗಿ ತಮಗೆ ಏನು ಉಪಕಾರವಾದೀತು? ಅದ ರಿಂದ ನಾನು ಅಗ್ನಿಪ್ರವೇಶ ಮಾಡುವೆನು. ನನಗೆ ಅಪ್ಪಣೆಯಾಗಲಿ" ಎಂದನು. ರಕ್ತಾಕ್ಷನು ಅದನ್ನು ಕೇಳಿ, "ಅಯ್ಯಾ, ಅದೇಕೆ ಅಗ್ನಿ ಪ್ರವೇಶ ಮಾಡುವೆ?" ಎಂದು ಕೇಳಲು, ಸ್ಥಿರಜೀವಿಯು, "ನಾನು ಈ ಅವಸ್ಥೆಗೆ ಬಂದುದೇ ನಿಮಗಾಗಿ. ನನ್ನನ್ನು ಈ ಅವಸ್ಥೆಗೆ ತಂದ ಮೇಘವರ್ಣನ ಮೇಲೆ ವೈರವನ್ನು ತೀರಿಸಿಕೊಳ್ಳಬೇಕು. ಅದಕ್ಕಾಗಿ ಅಗ್ನಿಪ್ರವೇಶಮಾಡಿ, ಉಲೂಕವಾಗಿ ಹುಟ್ಟುವೆನು." ಎಂದಿತು.

ರಾಜನೀತಿಕುಶಲನಾದ ರಕ್ತಾಕ್ಷನು ಅದನ್ನು ನಂಬಲಿಲ್ಲ. "ಅಯ್ಯಾ, ನೀನು ಮೋಸಗಾರನು. ಮೋಸದ ಮಾತಿನಲ್ಲಿ ಚತು ರನು. ನೀನು ಗೂಗೆಯಾದರೂ ಕಾಗೆಯ ಕುಲವನ್ನೇ ಗೌರವಿಸುವೆ: ಕಥೆಯನ್ನು ಕೇಳಿಲ್ಲವೆ?

ರವಿಯು ಮೇಘವು ಗಾಳಿ ಬೆಟ್ಟವು |
ಗಂಡನಾಗಲು ಬೇಡವೆಂದು ||
ತನ್ನ ಜಾತಿಯ ಮದುವೆಯಾಯ್ತಿ ಲಿ |
ಮೀರಲಳವೇ ತನ್ನ ಜಾತಿಯನು || ೩೧ ||

ಎಂದು ಹೇಳಲು, ಮಂತ್ರಿಗಳು "ಅದೇನು" ಎಂದು ಕೇಳಿದರು. ರಕ್ತಾಕ್ಷನು ಹೇಳಿದನು:-



## ಮೂಷಕ ಕನ್ಯೆಯ ಕಥೆ

ಪವಿತ್ರವಾದ ಗಂಗಾನದಿಯ ತೀರದಲ್ಲಿ ಪುಣ್ಯವಾದ ಒಂದು ಆಶ್ರಮವುಂಟು. ಅಲ್ಲಿ ಜಪ, ವ್ರತ, ಉಪವಾಸ, ಯೋಗ, ಮೊದಲಾದವುಗಳನ್ನು ಮಾಡುವ ತಪಸ್ವಿಗಳು ಉಂಟು, ಅವರ ಯಜಮಾನನಾಗಿ ಯಾಜ್ಞವಲ್ಕ್ಯ ಎಂಬ ಕುಲಪತಿ*ಯುಂಟು. ಒಂದುದಿನ ಆತನು ಗಂಗಾನದಿಯಲ್ಲಿ ಸ್ನಾನ ಮಾಡಿಕೊಂಡು ಬರುವಾಗ, ಆಕಾಶದಿಂದ, ಹದ್ದು ಹಿಡಿದ ಹಿಡಿತವು ತಪ್ಪಿ, ಒಂದು ಇಲಿಯ ಮರಿಯು ಆತನ ಕೈಗೆ ಬಿತ್ತು. ಅದನ್ನು ಕಂಡು, ಮರುಕಗೊಂಡು, ಅದನ್ನು ಒಂದು ಆಲದೆಲೆಯ ದೊನ್ನೆಯಲ್ಲಿಟ್ಟು ತಾನು ಮತ್ತೆ ಸ್ನಾನಾದಿಗಳನ್ನು ಮಾಡಿಕೊಂಡು ಬಂದು, ಅದನ್ನು ತನ್ನ ತಪೋಬಲದಿಂದ ಕನ್ಯೆಯನ್ನು ಮಾಡಿ ತನ್ನ ಆಶ್ರಮಕ್ಕೆ ಕರೆದು ತಂದನು. ಅಲ್ಲಿ ಆ ಹುಡುಗಿಯು ಲಾಲನ ಪಾಲನಗಳಿಂದ ಬೆಳೆದು ಹನ್ನೆರಡು ವರ್ಷದವಳಾದಳು.

* ಕುಲಪತಿಯೆಂದರೆ ಸಾವಿರಾರು ಜನ ಶಿಷ್ಯರಿಗೆ ಅನ್ನ ಬಟ್ಟೆಗಳನ್ನು ಕೊಟ್ಟು ಕಾಪಾಡುತ್ತ ವಿದ್ಯೆಯನ್ನು ಹೇಳುವ ಗುರುವು.

ಹೀಗೆ ಅವಳು ಮದುವೆಯಾಗುವ ವಯಸ್ಸನ್ನು ಪಡೆಯಲು, ಯಾಜ್ಞವಲ್ಕ್ಯನ ಹೆಂಡತಿಯು ಇವಳಿಗೆ ಮದುವೆ ಮಾಡುವುದಿಲ್ಲವೆ? ಎಂದು ಕೇಳಿದಳು. ಆತನು ಹೇಳಿದನು: "ನೀನು ಹೇಳಿದುದು ಒಳ್ಳೆಯದಾಯಿತು. ಹೌದು, ಶಾಸ್ತ್ರವೂ ಹೇಳುತ್ತದೆಯಷ್ಟೆ?

ನಾರಿಯರ ಭೋಗಿಪರು ಸೋಮ ಗಂಧರ್ವಾಗ್ನಿಗಳು ಮೊದಲು ॥
ದೋಷವಿಲ್ಲದರಲ್ಲಿ ಮಾನುಷರು ಭೋಗಿಪರು ಆಮೇಲೆ ॥ ೩೨ ||

* ಸೋಮನಿತ್ತನು ಶೌಚವನು ಗಂಧರನು ಮುದ್ದು ಮಾತನ್ನು || .
ಪಾವಕನು ಸರ್ವಮೇಧ್ಯತೆಯನದರಿಂದವರುಕಲ್ಮಷರು || ೩೩ ||

ಮೈನೆರೆಯದಿರೆ ಗೌರಿ, ನೆರೆದವಳು ರೋಹಿಣೀ||
ಮೈಯರಳದಿರೆ ಕನ್ನೆ ಕುಚ ಹೀನೆನಗ್ನಿಕೆಯು ॥ ೩೪ ॥
ಮೈಯರಳೆ ಸೋಮನವಳನು ಭೋಗಿಪನು ತಾನು ||
ಮೊಲೆದೋರೆ ಗಂಧರ್ವ ಮೈನೆರೆಯೆ ಪಾವಕನು ॥
ಅದರಿಂದೆ ಮೈನೆರವ ಮೊದಲೆ ಸರಿ ಮದುವೆಯು ॥ ೩೫ ||

ಅಲ್ಲದೆ, ತಂದೆಯ ಮನೆಯಲ್ಲಿ ಹೆಣ್ಣು ವಿವಾಹವಾಗದೆಯೇ ಇದ್ದು ಮೈನೆರೆಯುವುದು ಶಾಸ್ತ್ರಕಾರರಿಗೆ ಸಮ್ಮತವಲ್ಲ. ಅದರಿಂದ, ಇವಳನ್ನು ಕುಲಧನಗಳಿಂದ ಸಮನಾದ ವರನಿಗೆ ಕೊಟ್ಟು ಮದುವೆ ಮಾಡುವೆನು. ಹೆಣ್ಣನ್ನು ಕೊಡುವಾಗ ಕುಲ, ಶೀಲ, ಬಂಧುಗಳು, ವಿದ್ಯಾ, ಧನ, ದೇಹ, ವಯಸ್ಸು, ಎಂಬ ಏಳನ್ನೂ ಕುರಿತು ವಿಚಾರಮಾಡಬೇಕು ಅದರಿಂದ ಅವಳು ಒಪ್ಪಿದರೆ, ಭಗವಂತನಾದ ಆದಿತ್ಯನನ್ನು ಕರೆದು ಆತನಿಗೆ ಇವಳನ್ನು ಕೊಡುವೆನು." ಎಂದನು.

---

* ಸೋಮನು ಹೆಂಗುಸರಿಗೆ ಯಾವಾಗಲೂ ಮಡಿಯಾಗಿರುವಿಕೆಯನ್ನು ಕೊಟ್ಟನು. ಗಂಧರ್ವನು ಚೆನ್ನಾಗಿ ಮಾತನಾಡುವುದನ್ನು ಕೊಟ್ಟನು. ಅಗ್ನಿಯು ಅವರು ಯಾವಾಗಲೂ ಏನು ಮಾಡಿದರೂ ಶುದ್ಧವಾಗಿರುವಂತೆ ವರವನ್ನು ಕೊಟ್ಟನು. ಅದರಿಂದ ಅವರು ಯಾವಾಗಲೂ ಕಲ್ಮಷವಿಲ್ಲದವರು.

ಅವಳು ಒಪ್ಪಲು, ಮುನೀಂದ್ರನು ಸೂರ್ಯನನ್ನು ಕರೆದನು. ಆತನು ಬಂದು "ಭಗವಂತನೆ, ನಾನು ಏನುಮಾಡಬೇಕು ಅಪ್ಪಣೆಯಾಗಲಿ." ಎಂದನು. ಮುನಿಂದ್ರನು "ಅಯ್ಯಾ, ಈ ಹುಡುಗಿಯು ನನ್ನ ಮಗಳು. ಇವಳನ್ನು ಮದುವೆಯಾಗು" ಎಂದು ಆ ಕನ್ಯೆಯನ್ನು ಕರೆದು "ಇವನನ್ನು ಮದುವೆಯಾಗು" ಎಂದನು. ಅವಳು "ತಾತ, ಈತನು ಸುಡುವನು. ನಾನು ಸಹಿಸಲಾರೆ, ಬೇರೆ ಯಾರನ್ನಾದರೂ ವರಿಸುವೆನು" ಎಂದಳು.

ಆ ಮಾತನ್ನು ಕೇಳಿ ಮುನಿಯು "ಸೂರ್ಯದೇವ, ನಿನಗಿಂತ ಬಲವಾದವನು ಯಾರು?" ಎಂದು ಕೇಳಲು, ಆತನು, "ನನಗಿಂತ ಮೇಘನು ಬಲವಂತನು. ನನ್ನನ್ನು ಅವನು ಮುಚ್ಚಿ ಬಿಡುವನು." ಎಂದನು. ಅದನ್ನು ಕೇಳಿ ಮುನಿಯು ಅವನನ್ನು ಬರಮಾಡಿದನು. ಕನ್ಯೆಯು ಅವನನ್ನು ನೋಡಿ, "ತಾತ, ಇವನು ಬಲು ಕಪ್ಪು. ಯಾವಾಗಲೂ ನೀರಿನಿಂದ ನೆನೆದಿರುವನು. ನನ್ನನ್ನು ಇನ್ನು ಯಾರಿಗಾದರೂ ಕೊಡು" ಎಂದಳು.

ಮುನಿಯು "ಎಲೈ ಮೇಘದೇವ, ನಿನಗಿಂತ ಬಲವಾದವರು ಯಾರು?" ಎಂದು ಕೇಳಲು, ಮೇಘನು, "ಭಗವನ್, ನನಗಿಂತ ವಾಯುವು ಬಲವಂತನು. ಆತನು ಊದಿದರೆ ನಾನು ಹಾರಿ ಹೋಗುವೆನು" ಎಂದನು. ಆಗ ಆತನು ವಾಯುವನ್ನು ಕರೆದನು. ಆತನು ಬರಲು, ಆ ಕನ್ಯೆಯು "ತಾತ, ಇವನು ನಿಂತಲ್ಲಿ ನಿಲ್ಲದ ಚಪಲನು. ನನ್ನನ್ನು ಇನ್ನು ಯಾರಿಗಾದರೂ ಕೊಡು" ಎಂದಳು.

ಮುನೀಂದ್ರನು "ಎಲೈ ವಾಯುವೆ, ನಿನಗಿಂತ ಬಲಿಷ್ಠರು ಯಾರು?" ಎಂದು ಕೇಳಲು, ಆತನು "ಭಗವನ್, ಪರ್ವತನು ನನಗಿಂತ ಬಲಶಾಲಿಯು. ನಾನು ಎಲ್ಲರನ್ನೂ ಅಲ್ಲಾಡಿಸುವೆನಾದರೂ ಪರ್ವತವನ್ನು ಅಲ್ಲಾಡಿಸಲಾರೆನು" ಎಂದನು. ಆತನು ಪರ್ವತನನ್ನು ಕರೆದನು. ಆತನನ್ನು ಕಂಡು ಆ ಕನ್ಯೆಯು "ತಾತ, ಈತನು

ಬಹು ಕಠಿನನು. ಇದ್ದಲ್ಲಿ ಇದ್ದು ಬಿಡುವನು. ನನ್ನನ್ನು ಇನ್ನು ಯಾರಿಗಾದರೂ ಕೊಡು'' ಎಂದಳು.

ಆಗ ಮುನಿಯು ''ಎಲೈ ಪರ್ವತರಾಜ, ನಿನಗಿಂತ ಯಾರು ಬಲಶಾಲಿಗಳು'' ಎನ್ನಲು, ಆತನು, ''ಭಗವನ್, ನನಗಿಂತ ಇಲಿಗಳು ಬಲಶಾಲಿಗಳು. ನನ್ನ ದೇಹವನ್ನು ತತಾ ತೂತು ಮಾಡಿ ಬಿಡುತ್ತಾರೆ.'' ಎನ್ನಲು, ಆತನು ಮೂಷಿಕನನ್ನು ಕರೆದನು. ಅವನನ್ನು ಕಂಡು ಆ ಕನ್ಯೆಗೆ ಬಹಳ ಸಂತೋಷವಾಗಿ ''ತಾತ, ನನ್ನನ್ನೂ ಮೂಷಿಕವಾಗಿಯೇ ಮಾಡಿ ಈತನಿಗೆ ಕೊಡು. ಈತನೊಡನೆ ಸುಖವಾಗಿರುವೆನು.'' ಎಂದಳು.




ಆ ಮುನೀಂದ್ರನೂ ತನ್ನ ತಪೋಬಲದಿಂದ ಆ ಕನ್ಯೆಯನ್ನು ಮತ್ತೆ ಇಲಿಯನ್ನೇ ಮಾಡಿ ಇಲಿಗೆ ಕೊಟ್ಟು ಮದುವೆ ಮಾಡಿದನು. ಅದರಿಂದ ''ತನ್ನ ಜಾತಿಯ ಮೀರಲಳವೆ?'' ಎಂದೆನು ಎಂದು ಹೇಳಿದನು.

ರಕ್ತಾಕ್ಷನ ಮಾತನ್ನು ಕೇಳದೆ ಗೂಗೆಗಳು ತಮ್ಮ ವಂಶಕ್ಕೆ ವಂಶವೇ ಅವನಿಂದ ಹಾಳಾಗುವುದನ್ನು ತಿಳಿಯದೆ ಸ್ಥಿರಜೀವಿಯನ್ನು ತಮ್ಮ ದುರ್ಗಕ್ಕೆ ಕರೆದುಕೊಂಡು ಹೋದರು. ಹಾಗೆ ಕರೆದುಕೊಂಡು ಹೋಗುವಾಗ ಸ್ಥಿರಜೀವಿಯು ತನ್ನೊಳಗೆ ತಾನೇ ನಗುತ್ತ ''ಕೊಂದುಬಿಡಿ ಎಂದು ಹೇಳಿದ ಮಂತ್ರಿಯೊಬ್ಬನೇ ಹಿತವಾದಿಯು.

ಆತನೊಬ್ಬನೇ ನೀತಿಶಾಸ್ತ್ರವನ್ನು ಬಲ್ಲವನು. ಯಾವಾಗ ಇವರು ಆತನ ಮಾತನ್ನು ಕೇಳಲಿಲ್ಲವೋ, ಆಗಲೇ ಇವರಿಗೆ ಬೇಕಾದಷ್ಟು ಅನರ್ಥ*ವಾಗಿ ಹೋಯಿತು.'' ಎಂದುಕೊಂಡಿತು.

ದುರ್ಗದ್ವಾರಕ್ಕೆ ಬಂದಾಗ ಅರಿಮರ್ದನನು ''ಎಲೈ, ಈ ಸ್ಥಿರಜೀವಿಯನ್ನು ಆತನು ಬೇಕೆಂದ ಕಡೆ ಇರಿಸಿ'' ಎಂದನು. ಸ್ಥಿರಜೀವಿಯು ''ನಾನು ಈಗ ಸಿಕ್ಕಿಹಾಕಿಕೊಳ್ಳಬಾರದು. ಇವರಿಗೆ ಅನುಮಾನವು ಬರದಂತೆ ನಡೆದುಕೊಳ್ಳಬೇಕು'' ಎಂದಾಲೋಚಿಸಿ ''ದೇವ, ತಾವು ಹೇಳುವುದು ಸರಿಯೇ ಆದರೂ ನಾನೂ ನೀತಿಶಾಸ್ತ್ರವನ್ನು ಬಲ್ಲವನು. ನಾನು ಸ್ವಾಮಿ ಪಾದಗಳಲ್ಲಿ ಎಷ್ಟು ಭಕ್ತನಾಗಿದ್ದರೂ, ನಾನು ಎಷ್ಟೇ ನಿಷ್ಕಲ್ಮಷನಾಗಿದ್ದರೂ, ನಾನು ಕುಲದಿಂದ ತಮಗೆ ಅಹಿತನು, ಅದರಿಂದ ನನ್ನನ್ನು ದುರ್ಗ ಮಧ್ಯದಲ್ಲಿ ಇಡಬಾರದು. ನಾನು ದುರ್ಗದ ಬಾಗಿಲಲ್ಲಿ ಇರಲು ತಕ್ಕವನು. ದಿನವೂ ಇಲ್ಲಿಯೇ ತಮ್ಮ ಪಾದದರ್ಶನವನ್ನು ಮಾಡುತ್ತಾ ನನ್ನ ಸೇವೆಯನ್ನು ಮಾಡುತ್ತಾ ಸಲ್ಲಿಸುವೆನು.'' ಎಂದು ಅರಿಕೆ ಮಾಡಿದನು. ಅರಿಮರ್ದನನೂ ಹಾಗೆಯೇ ಆಗಲೆಂದು ಆ ಮಾತನ್ನು ಅಂಗೀಕರಿಸಿದನು. ಉಲೂಕಪತಿಯ ಸೇವಕರು ಆತನಿಗೆ ದಿನ ದಿನವೂ ಬೇಕಾದ ಹಾಗೆ ಆಹಾರವನ್ನು ತಂದು ಕೊಡುತ್ತಿದ್ದರು. ಕೆಲವು ದಿನಗಳಲ್ಲಿಯೇ ಸ್ಥಿರಜೀವಿಯು ಚೆನ್ನಾಗಿ ಮೈ ಕೈ ಕೂಡಿಕೊಂಡು ನವಿಲನಂತಾಯಿತು.

ಅದನ್ನು ಕಂಡು ರಕ್ತಾಕ್ಷನು ಮಂತ್ರಿಗಳನ್ನೂ ರಾಜನನ್ನೂ ಕುರಿತು ನೀವೇನೇ ಹೇಳಿ. ನೀವೆಲ್ಲರೂ ಮೂರ್ಖರು. ಕೇಳಿಲ್ಲವೆ?.

*(ಅನರ್ಥ= ತನಗೆ ಬೇಕಾದುದು ಅರ್ಥ ಅಲ್ಲದ್ದು ಅನರ್ಥ.)

ಪ್ರಥಮ ಮೂರ್ಖನು ನಾನು । * ಉತ್ತರನು ಹಿಡಿದವನು ॥
ಮೂರ್ಖನೀ ನೃಪ ಸಚಿವ | ರೆಲ್ಲ ಮೂರ್ಖ ಮಂಡಲವು ॥ ೩೬ ॥

ಮಂತ್ರಿಗಳು ಅದೇನೆಂದು ಕೇಳಲು, ರಕ್ತಾಕ್ಷನು ಹೇಳಿದನು:-

## ಮೂರ್ಖ ಮಂಡಲದ ಕಥೆ

ಒಂದಾನೊಂದು ಪರ್ವತದಲ್ಲಿ ಒಂದು ಮಹಾ ವೃಕ್ಷವಿರು ವುದು. ಅದರಲ್ಲಿ ಬಂಧುಕನೆಂಬ ಒಂದು ಪಕ್ಷಿಯು ಇರುವುದು. ಅದು ಚಿನ್ನದ ಹಿಕ್ಕೆಯನ್ನು ಇಡುವುದು. ಒಂದು ದಿನ ಅದು ಒಬ್ಬ ಬೇಡನ ಮುಂದೆ ಹಿಕ್ಕೆಯನ್ನಿಟ್ಟಿತು. ಅದು ಕೆಳಕ್ಕೆ ಬೀಳುತ್ತಿದ್ದ ಹಾಗೆಯೇ ಚಿನ್ನವಾದುದನ್ನು ಕಂಡು, ಆ ಬೇಡನಿಗೆ ವಿಸ್ಮಯ ವಾಯಿತು: "ಎಲೆಲಾ, ನಾನು ಹುಟ್ಟಿದುದು ಮೊದಲು ಹಕ್ಕಿಯ ಬೇಟೆಯಲ್ಲಿಯೇ ಮುಳುಗಿದವನು. ನನಗೆ ಈಗ ಎಂಭತ್ತು ವರ್ಷ ವಾಯಿತು. ನಾನು ಇಂತಹ ಆಶ್ಚರ್ಯವನ್ನು ಇದುವರೆಗೆ ಕೇಳಿಯೂ ಇರಲಿಲ್ಲ." ಎಂದು ಅದಕ್ಕೆ ಬಲೆಯನ್ನು ಬೀಸಿದನು. ಹಕ್ಕಿಯು ಬೇಡನನ್ನು ಕಂಡರೂ ಓಡಿ ಹೋಗದೆ ಕುಳಿತಿದ್ದ ಕಡೆಯೇ ಕುಳಿತಿದ್ದು ಅವನ ಬಲೆಗೆ ಸಿಕ್ಕಿ ಹೋಯಿತು.

ಅದನ್ನು ಅವನು ಹಿಡಿದು ಪಂಜರದಲ್ಲಿ ಇಟ್ಟುಕೊಂಡು ಮನೆಗೆ ತಂದನು. ಆಗ ಅವನಿಗೆ ಯೋಚನೆಯು ಬಂತು: "ಈ ಪಕ್ಷಿಯು ಇಲ್ಲಿ ಇದ್ದರೆ ನನಗೆ ಅಪಾಯವು ತಪ್ಪದು. ಯಾರಾದರೂ ಹೋಗಿ ರಾಜನಿಗೆ ಈ ಹಕ್ಕಿಯ ವಿಷಯವನ್ನು ತಿಳಿಸಿದರೆ, ಅರಸನು ನನ್ನನ್ನು ಕೊಲ್ಲಿಸಿದರೂ ಕೊಲ್ಲಿಸಬಹುದು, ಅದರಿಂದ ನಾನೇ ಹೋಗಿ ಈ ಹಕ್ಕಿಯನ್ನು ರಾಜನಿಗೆ ಒಪ್ಪಿಸುವೆನು. ಎಂದು ಗೊತ್ತು ಮಾಡಿ ಕೊಂಡು ಹಕ್ಕಿಯನ್ನು ತೆಗೆದುಕೊಂಡು ಹೋಗಿ ಅರಸನಿಗೆ ಒಪ್ಪಿಸಿ ದನು.

* ಉತ್ತರ=ಎರಡನೆಯವನು.

ಅರಸನಿಗೆ ಆ ಹಕ್ಕಿಯ ವೃತ್ತಾಂತವನ್ನು ಕೇಳಿ ಬಹಳ ಆಶ್ಚ ರ್ಯವೂ ಆಯಿತು. ಸಂತೋಷವೂ ಆಯಿತು. ಭಟರನ್ನು ಕರೆದು. "ಎಲೈ, ಇದನ್ನು ಜೋಪಾನವಾಗಿ ನೋಡಿಕೊಳ್ಳಿ, ಇದಕ್ಕೆ ಬೇಕಾದ ತಿಂಡಿ, ತೀರ್ಥಗಳಲ್ಲಿ ಯಾವುದೂ ಕೊರತೆಯಾಗಬಾರದು." ಎಂದು ಅಪ್ಪಣೆ ಮಾಡಿದನು. ಮಂತ್ರಿಗಳು ಅದನ್ನು ಕೇಳಿ, "ಮಹಾಸ್ವಾಮಿ ಬೇಡನ ಮಾತು ನಂಬಿಕೊಂಡು ಈ ಹಕ್ಕಿಯನ್ನು ಇಟ್ಟುಕೊಳ್ಳು ವುದೇ? ಎಲ್ಲಾದರೂ ಹಕ್ಕಿಯು ಚಿನ್ನದ ಹಿಕ್ಕೆಯಿಡುವುದುಂಟೆ? ಮೊದಲು ಅದನ್ನು ಓಡಿಸಿ" ಎಂದರು. ಅರಸನು ಮಂತ್ರಿಗಳ ಮಾತನ್ನು ನಂಬಿ ಪಂಜರದ ಬಾಗಿಲು ತೆಗೆಯಿಸಿ ಅದನ್ನು ಓಡಿಸಿ ದನು.

ಹಕ್ಕಿಯು ಪುನ್ಹ ಒಡಿ ಹೋಗಿ ಎತ್ತರವಾದ ತೋರಣದ ಕಂಭದ ಮೇಲೆ ಹೋಗಿ ಕುಳಿತುಕೊಂಡಿತು. ಅಲ್ಲಿ ಹಿಕ್ಕೆಯನ್ನು ಹಾಕಿತು. ಹಿಕ್ಕೆಯು ಚಿನ್ನವೂ ಆಯಿತು. ಆಗ "ಪ್ರಥಮ ಮೂರ್ಖ ನು ನಾನು" ಎಂದು ಮುಂತಾಗಿ ಹೇಳಿ, ಆಕಾಶ ಮಾರ್ಗದಲ್ಲಿ ಸುಖವಾಗಿ ಹಾರಿ ಹೋಯಿತು." ಎಂದು ಹೇಳಿದನು.

ಗೂಗೆಗಳು ರಕ್ತಾಕ್ಷನ ಮಾತನ್ನು ಆಗಲೂ ನಂಬಲಿಲ್ಲ. ಅವರಿಗೆ ಆಪತ್ತು ಬರುವ ಕಾಲ. ಅದೆಂತು ಹಿತವಚನವನ್ನು ಕೇಳುವರು? ರಾಮನಿಗೆ ಮಾಯಾ ಮೃಗವನ್ನು ಕಂಡಾಗ ಬುದ್ಧಿ ಬರಲಿಲ್ಲವೆ? ನಲನಿಗೆ ಚಿನ್ನದ ಹಂಸೆಗಳನ್ನು ಕಂಡಾಗ ಅಲ್ಲಿ ಮೋಸ ವಿದೆಯೆಂದು ಏಕೆ ತಿಳಿಯಲಿಲ್ಲ? ಮೊದಲನೆಯ ಸಲ ಸೋತು ಅವ ಮಾನ ಪಟ್ಟಿದ್ದ ಧರ್ಮರಾಜನಿಗೆ ಜೂಜು ವಿಪತ್ತು ತರುವುದು ಎಂದು ಏಕೆ ತೋರಲಿಲ್ಲ? ಕಾಲವು ಯಾರನ್ನು ಕೊಲ್ಲಬೇಕು ಎಂದಿ ರುವುದೋ ಅವರ ಬುದ್ಧಿಯನ್ನು ಮೊದಲು ಕೊಲ್ಲುವುದು: ಅದ ರಿಂದ ಅವರಿಗೆ ಮಿತ್ರರು ಏನು ಹೇಳಿದರೂ ಹಿಡಿಸುವುದಿಲ್ಲ.

ರಕ್ತಾಕ್ಷನು ಇವನ್ನು ಕಂಡು ಇನ್ನು ಅರಿಮರ್ದನನಿಗೆ ಕೇಡು ತಪ್ಪಿದ್ದಲ್ಲ ಎಂದು ನಿಶ್ಚಯವಾಗಿ ತಿಳಿದು ತನ್ನವರನ್ನೆಲ್ಲಾ ಕರೆದು "ನಮ್ಮ ಅರಸನೂ ಆತನ ಕುಶಲವೂ ಕೆಟ್ಟವು. ಕುಲಕ್ರಮದಿಂದ ಬಂದ ಮಂತ್ರಿಯು ಏನು ಹೇಳಬೇಕೋ ಅದನ್ನು ಹೇಳಿದೆನು. ಆತನು ಕೇಳಲಿಲ್ಲ. ನಾವೂ ಆತನ ಜೊತೆಯಲ್ಲಿದ್ದು ಏಕೆ ಕೆಡಬೇಕು? ನಾವು ಇನ್ನು ಎಲ್ಲಾದರೂ ಹೋಗೋಣ, ಕೇಳಿಲ್ಲವೆ?

ಬರುವ ಕೆಟ್ಟದ ಚಿಂತಿಸಿ । ಪ್ರತಿಯ ಮಾಡಲು ಬದುಕುವ ॥
ಬಲವ ನುಡಿಯಿಸಿ ಬದುಕಿದ । ನರಿಯ ಕಥೆಯನು ಕೇಳಿರಾ ॥ ೩೭ ॥

ಪರಿಜನರು ಅದೆಂತು ಎಂದು ಕೇಳಲು ರಕ್ತಾಕ್ಷನು ಹೇಳಿದನು:—

## ಬಿಲವು ಮಾತಾಡಿದ ಕಥೆ

ಒಂದಾನೊಂದು ಕಾಡಿನಲ್ಲಿ ಒಂದು ಹುಲಿ ಇತ್ತು. ಅದಕ್ಕೆ ಒಂದು ದಿನ ತನಗೆ ಯಾವ ಬೇಟೆಯೂ ಸಿಕ್ಕದೆ ಹೋಯಿತು. ಹಾಗೆಯೇ ಅಲೆಯುತ್ತ ಒಂದು ದೊಡ್ಡ ಗುಹೆಯನ್ನು ಕಂಡು "ರಾತ್ರಿಯಲ್ಲಿ ಯಾವುದಾದರೂ ಪ್ರಾಣಿಯು ಇಲ್ಲಿಗೆ ಬಂದೇ ಬರುವುದು. ನಾನು ಇಲ್ಲಿದ್ದರೆ ತಪ್ಪದೆ ನನಗೆ ಆಹಾರವು ದೊರೆಯುವುದು." ಎಂದು ಅದರಲ್ಲಿ ಹೋಗಿ ಕುಳಿತುಕೊಂಡಿತು.

ಅಷ್ಟು ಹೊತ್ತಾದ ಮೇಲೆ ಆ ಗುಹೆಯಲ್ಲಿ ವಾಸವಾಗಿದ್ದ ನರಿಯು ಅಲ್ಲಿಗೆ ಬಂತು. ನೋಡಿದರೆ, ಹುಲಿಯ ಹೆಜ್ಜೆಯ ಗುರುತುಗಳು ಒಳಕ್ಕೆ ಹೋಗಿರುವುದು ಕಾಣಿಸುತ್ತಿದೆ. ಈಚೆಗೆ ಬಂದ ಗುರುತುಗಳು ಇಲ್ಲ. ಅದನ್ನು ಕಂಡು ನರಿಯು "ಸರಿ ಹುಲಿಯು

ಒಳಗೆ ಹೋಗಿದೆ. ನಾನೂ ಹೋದರೆ ಉಳಿಯುವಂತಿಲ್ಲ. ಏನು ಮಾಡುವುದು? ಅದು ಒಳಗೆ ಇದೆಯೋ ಹೊರಟೇ ಹೋಗಿದೆಯೋ ತಿಳಿಯುವುದೆಂತು?'' ಎಂದು ಕೊಂಚಹೊತ್ತು ಯೋಚಿಸಿ ಒಂದು ಉಪಾಯವನ್ನು ಮಾಡಿತು.




ಬಿಲಕ್ಕೆ ಅಷ್ಟು ದೂರದಲ್ಲಿ ನಿಂತುಕೊಂಡು ಒಂದು ಸಲ ಕೆಮ್ಮಿತು. " ಬಿಲವೇ, ಬಿಲವೇ '' ಎಂದು ಎರಡು ಸಲ ಕರೆದು ಅಷ್ಟು ಹೊತ್ತು ಸುಮ್ಮನಿತ್ತು. ಮತ್ತೆ " ಬಿಲವೇ, ಸರಿ. ನನಗೂ ನಿನಗೂ ನಡೆದಿದ್ದ ಮಾತು ಮರೆತುಬಿಟ್ಟೆ. ನಾನು ಇಲ್ಲಿಗೆ ಬಂದು ಕೆಮ್ಮಿದ ಕೂಡಲೇ ಯಾವೊತ್ತು ನೀನು ಒಳಗೆ ಬಾ ಎಂದು ಕರೆಯುವುದಿಲ್ಲವೋ ಆವೊತ್ತು ನಾನು ಇನ್ನೆಲ್ಲಿಗಾದರೂ ಹೊರಟು ಹೋಗುವೆನು. ಎಂದು ಹೇಳಿದ್ದುದನ್ನು ನೀನು ನೆನೆದುಕೊ. ಈ ದಿನ ನೀನು ಮಾತಾಡಲಿಲ್ಲ. ನನ್ನನ್ನು ಕರೆಯಲಿಲ್ಲ. ಇದೋ ಮತ್ತೊಂದು ಬಿಲಕ್ಕೆ ಹೋಗುತ್ತೇನೆ. '' ಎಂದಿತು.

ಒಳಗಿದ್ದ ಹುಲಿಯು ಇದನ್ನು ಕೇಳಿತು. " ಓಹೋ, ನಿತ್ಯವೂ ಈ ಬಿಲವು ನರಿಯನ್ನು ಕರೆಯುತ್ತಿತ್ತು. ಈ ದಿನ ನಾನು

ಬಂದಿರುವೆನೆಂದು ಈ ಬಿಲವು ಹೆದರಿ ಮಾತನಾಡದೆ ಇದೆ. ಇರಲಿ. ನಾನೇ ಬಿಲದ ಪರವಾಗಿ ಮಾತನಾಡುವೆನು.'' ಎಂದುಕೊಂಡು, ಬಾ, ಒಳಕ್ಕೆ ಬಾ ಎಂದು ಕರೆಯಿತು. ಹುಲಿಯ ಧ್ವನಿಯೆಂದರೆ ಸಾಮಾನ್ಯವೆ? ಗುಡುಗಿನಹಾಗೆ ಬಿಲಕ್ಕೆ ಬಿಲವೇ ಆ ಧ್ವನಿಯಿಂದ ತುಂಬಿ ಹೋಗಿತು.

ನರಿಯು ಅದನ್ನು ಕೇಳಿ "ಸತ್ಯಕ್ಕೆ ಬದುಕಿದಂತಾಯಿತು. ಎಂದು ಅಲ್ಲಿ ಒಂದು ಗಳಿಗೆಯೂ ನಿಲ್ಲದೆ ಕಾಲಿಗೆ ಬುದ್ಧಿ ಹೇಳಿತು. ಹಾಗೆ ನಾವೂ ಅಪಾಯ ಬರುವುದಕ್ಕಿಂತ ಮುಂಚೆಯೇ ಎಲ್ಲಿಯಾದರೂ ಹೋಗಿ ಬದುಕಿಕೊಳ್ಳೋಣ'' ಎಂದು ಹಾಗೆಯೇ ಮಾಡಿತು.

ರಕ್ತಾಕ್ಷನು ಹೊರಟು ಹೋಗುತ್ತಲೂ ಸ್ಥಿರಜೀವಿಯು ಅತಿ ಸಂತೋಷಪಟ್ಟುಕೊಂಡು "ಆಹಾ, ನಮಗೆ ಅನುಕೂಲವಾಯಿತು. ಈತನು ದೀರ್ಘದರ್ಶಿಯು. ಮುಂದೇನಾಗುವುದು ಎಂಬುದನ್ನು ಬಲ್ಲವನು. ಇವರು ಮೂಢರು. ಅದರಿಂದ ಸುಲಭವಾಗಿ ನನಗೆ ಬಲಿಯಾಗುವರು. ದೀರ್ಘದರ್ಶಿಯಾದ ಆ ಮಂತ್ರಿಯನ್ನು ಬಿಟ್ಟು ಈ ಅರಸನು ಕೆಟ್ಟನು. ಮುಖ್ಯ ನಮ್ಮ ಅದೃಷ್ಟ ದೊಡ್ಡದು.'' ಎಂದುಕೊಂಡಿತು.

ಸ್ಥಿರಜೀವಿಯು ದುರ್ಗದ ಬಾಗಿಲಲ್ಲಿ ತನ್ನ ಗೂಡು ಮಾಡಿಕೊಂಡಿತು. ಗೂಡಿಗೆ ದಿನವೂ ಒಂದೊಂದು ಕಡ್ಡಿಯನ್ನು ತಂದು ಇಟ್ಟುಕೊಳ್ಳುವುದು.

ಆ ಉಲೂಕ ಮೂರ್ಖರು ಗೂಡು ಬೆಳೆಯುತ್ತಿರುವುದು ತಮಗೆ ಮೃತ್ಯು ಎಂಬುದನ್ನು ತಿಳಿಯದೆ ಹೋದರು. ಕೇಳಿಲ್ಲವೆ?

ದೈವ ಸಹಾಯವು ತಪ್ಪಿದ ನರನು ॥
ಶತ್ರುವ ಮಿತ್ರನು ಎಂದಪ್ಪುವನು ॥ ೩೮ ॥
ಮಿತ್ರನ ಬಯ್ಯುತ ಹೊರದೂಡುವನು ॥
ಪಾಪದ ಮಾರ್ಗಗಳವೆಂದೆಸಗುವನು ॥ ೩೯ ॥

ಆ ಗೂಗೆಗಳಿಗೆ ಹಗಲಿನಲ್ಲಿ ಕಣ್ಣು ಕಾಣಿಸದು. ಅದನ್ನು ಬಲ್ಲ ವಾಯುಸವು ದುರ್ಗದ ದ್ವಾರದಲ್ಲಿ ಬೇಕಾದ ಹಾಗೆ ಕಡ್ಡಿಗಳನ್ನು ಕೂಡಿಹಾಕಿ ಒಂದು ದಿನ ತನ್ನ ಅರಸನ ಬಳಿಗೆ ಓಡಿತು. "ದೇವ, ರಿಪುಗಳ ಗುಹೆಯನ್ನು ಈಗ ಸುಟ್ಟುಬಿಡಬಹುದು. ಅದರಿಂದ ತಾವು ತಮ್ಮ ಪರಿವಾರದವರೊಡನೆ ಅಲ್ಲಿಗೆ ಒಬ್ಬೊಬ್ಬರು ಒಂದೊಂದು ಉರಿಯುತ್ತಿರುವ ಕಡ್ಡಿಯನ್ನು ತೆಗೆದುಕೊಂಡು ಬಂದು ನನ್ನ ಗೂಡಿಗೆ ಹಾಕಬೇಕು. ಆಗ ಉರಿಗೆ ಒಳಗಿರುವ ಗೂಗೆಗಳೆಲ್ಲ ನರಕದಲ್ಲಿ ಬೆಂದು ಹೋಗುವಹಾಗೆ ಬೆಂದು ಹೋಗುವವು" ಎಂದು ಕೈ ಮುಗಿಯಿತು.

ಮೇಘವರ್ಣನು ಸ್ಥಿರಜೀವಿಯನ್ನು "ನಿನ್ನನ್ನು ನೋಡಿ ಬಹಳ ದಿನವಾಯಿತು. ನಿನ್ನ ವೃತ್ತಾಂತವನ್ನು ಹೇಳು" ಎಂದು ಕೇಳಿದನು. ಸ್ಥಿರಜೀವಿಯು "ದೇವ, ಅದನ್ನೆಲ್ಲಾ ಹೇಳುವುದಕ್ಕೆ ಹೊತ್ತಿಲ್ಲ. ಶತ್ರುಗಳ ಕಡೆಯ ಗೂಢಚಾರನೇನಾದರೂ ನಾನಿಲ್ಲಿಗೆ ಬಂದಿರುವುದನ್ನು ತಿಳಿದರೆ ನಮ್ಮ ಕೆಲಸವು ಕೆಡುವುದು. ಆ ಗೂಗೆಗಳು ಆ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೋದರೆ! ಅದರಿಂದ ಬೇಗ ಮಾಡಬೇಕಾದ ಕೆಲಸವನ್ನು ತಳ್ಳಿ ಮಾಡಿದರೆ, ದೇವತೆಗಳಿಗೆ ಕೋಪವು ಬರುವುದು. ಅವರು ಕೆಲಸಕ್ಕೆ ಇಲ್ಲದ ವಿಘ್ನಗಳನ್ನು ಮಾಡುವರು. ಮಾಡಬೇಕಾದ ಕೆಲಸವನ್ನು ಯಾವಾಗ ಮಾಡಬೇಕೋ ಆಗಲೇ ಮಾಡಬೇಕು ಇಲ್ಲದಿದ್ದರೆ ಆ ಕಾರ್ಯದ ಫಲವನ್ನು ಕಾಲವು ತಿಂದು ಬಿಡುವುದು. ಮಾಡಿದ ಕಾರ್ಯವು ವಿಫಲವಾಗುವುದು. ಅದರಿಂದ, ತಾವು ಮೊದಲು ಒಂದು ಆಗುಹೆಗೆ ಬೆಂಕಿಯಿಟ್ಟು ಬಿಡಿ. ಅದು ಬೆಂದು ಹೋಗಲಿ. ಅನಂತರ, ನನ್ನ ಕಥೆಯನ್ನು ವಿಸ್ತಾರವಾಗಿ ಹೇಳುವೆನು." ಎಂದನು.

ಮೇಘವರ್ಣನೂ ಅದರಂತೆಯೇ ತನ್ನ ಪ್ರಜೆಗಳಿಗೆಲ್ಲಾ ಅಪ್ಪಣೆ ಮಾಡಿದನು. ವಾಯುಸಗಳೆಲ್ಲವೂ ಉರಿಯುತ್ತಿರುವ

ಒಂದೊಂದು ಕಡ್ಡಿಯನ್ನು ಕೊಕ್ಕಿನಲ್ಲಿ ಕಚ್ಚಿಕೊಂಡು ಹೊರಟವು. ಆ ಗುಹೆಯ ಬಾಗಿಲಲ್ಲಿ ಇದ್ದ ಸ್ಥಿರಜೀವಿಯು ಗೂಡಿನಲ್ಲಿ ಆ ಉರಿಯುವ ಕಡ್ಡಿಗಳನ್ನು ಹಾಕಿದುವು. ಉರಿಯು ಧಗಧಗನೆ ಹತ್ತಿ ಬಿಸಿಯೂ ಹೊಗೆಯೂ ಗುಹೆಯನ್ನೆಲ್ಲ ವ್ಯಾಪಿಸಿದುವು.

ಆಗ ಹಗಲು, ಆ ಗೂಗೆಗಳಿಗೆ ಕಣ್ಣು ಕಾಣಿಸದು. ಎತ್ತ ಹೋಗಬೇಕೋ ತಿಳಿಯದು. "ಅಯ್ಯೋ, ರಕ್ತಾಕ್ಷನ ಮಾತು ಕೇಳದೆ ನಾವು ಕೆಟ್ಟೆವಲ್ಲಾ!" ಎಂದು ಅಳುತ್ತ ಪ್ರಾಣಬಿಟ್ಟವು. ಮೇಘವರ್ಣನು ಶತ್ರುವು ನಿಶ್ಶೇಷನಾದನೆಂದು ಸಂತೋಷ ಪಟ್ಟುಕೊಳ್ಳುತ್ತ ತಾನು ಮೊದಲಿದ್ದ ಆಲದ ಮರಕ್ಕೆ ಬಂದು ಸೇರಿಕೊಂಡನು.

ಅನಂತರ ಮೇಘವರ್ಣನು ಸಿಂಹಾಸನದಲ್ಲಿ ಕುಳಿತು ತನ್ನವರೆಲ್ಲಾ ಸಭೆಯಲ್ಲಿ ಕುಳಿತಿರಲು, ಸ್ಥಿರಜೀವಿಯನ್ನು ಕುರಿತು "ತಾತ, ನೀನು ಶತ್ರು ಮಧ್ಯದಲ್ಲಿ ಹೇಗೆ ಇಷ್ಟು ಕಾಲವನ್ನು ಕಳೆದೆ? ಅದನ್ನು ಕೇಳಲು ನಮಗೆ ಬಹಳ ಆಸೆಯಾಗಿರುವುದು. ಪುಣ್ಯವಂತರು ಒಂದುಗಳಿಗೆ ಶತ್ರುಗಳ ಮಧ್ಯ ಇರುವುದಕ್ಕಿಂತ ಬೆಂಕಿಯಲ್ಲಿ ಬಿದ್ದು ಸಾಯುವುದೇ ಲೇಸು ಎನ್ನುವರು. ಹೀಗಿರುವಲ್ಲಿ ಇಷ್ಟು ದೀರ್ಘಕಾಲ ನೀನು ಹೇಗಿದ್ದೆ? ಹೇಳು" ಎಂದು ಕೇಳಿದನು.

ಆತನು ಹೇಳಿದನು: "ವತ್ಸ, ಮುಂದೆ ಆಗಬೇಕಾಗಿರುವದೊಡ್ಡ ಪ್ರಯೋಜನವನ್ನು ಕುರಿತು ಯೋಚಿಸುತ್ತಾ ಸದ್ಯದಲ್ಲಿ ಅನುಭವಿಸುವ ಕಷ್ಟವನ್ನು ಸೇವಕರು ಮರೆತು ಬಿಡುವರು. ನಮ್ಮಂಥವರದು ಇರಲಿ. ಪಾಂಡವರು ಅಜ್ಞಾತವಾಸವನ್ನು ಮಾಡಿದ ಕಥೆಯನ್ನು ನೀನು ಕೇಳಿಲ್ಲವೆ? ಮಹಾವೀರನಾದ ಭೀಮಸೇನನು ಶತ್ರುಗಳನ್ನು ಅರೆದು ಹಾಕುವ ದಂಡವನ್ನು ಬಿಟ್ಟು ಸೌಟು ಹಿಡಿದುಕೊಂಡು ಒಂದು ವರ್ಷ ಅಡುಗೆಯ ಭಟ್ಟನಾಗಿರಲಿಲ್ಲವೆ? ಮೂರು ಲೋಕದ ಗಂಡು ಎಂದು ಪ್ರಸಿದ್ಧನಾದ ಅರ್ಜುನನು ಗಾಂಡೀವವನ್ನು ಬಿಟ್ಟು ಬಳೆಗಳನ್ನು ತೊಟ್ಟುಕೊಂಡು, ಜಡೆಯನ್ನು ಹಾಕಿಕೊಂಡು ಕುಣಿತ

ವನ್ನು ಕಲಿಸಿಕೊಂಡು ಇರಲಿಲ್ಲವೆ? ದ್ರುಪದ ಮಹಾರಾಜನ ಮಗಳಾಗಿ ಪಾಂಡು ಮಹಾರಾಜನ ಸೊಸೆಯಾಗಿ, ಪಾಂಡವರ ಮಡದಿಯಾದ ದ್ರೌಪದಿಯು ವಿರಾಟರಾಯನ ಅಂತಃಪುರದಲ್ಲಿ ಗಂಧವನ್ನು ತೇಯುತ್ತ, ಅರಸಿತಿಯರ ಆಳಾಗಿ ಕಾಲಹರಣ ಮಾಡಲಿಲ್ಲವೆ? ಅದ ಕ್ಕಿಂತ ನಮ್ಮದೇನು? ''

ಮೇಘವರ್ಣನು ಅದನ್ನು ಕೇಳಿ ''ತಾತ, ಶತ್ರುಗಳ ಸಹವಾ ಸದಲ್ಲಿ ಇರುವುದು ಎಂದರೆ ಕತ್ತಿಯ ಮೇಲೆ ನಡೆದಹಾಗೆ, ಅಲ್ಲವೆ?'' ಎಂದು ಕೇಳಲು, ಸ್ಥಿರಜೀವಿಯು ''ಹೌದು. ಆದರೆ, ಆ ಉಲೂಕ ಗಳಂತಹ ಮಹಾಮೂರ್ಖರನ್ನು ನಾನು ನೋಡಲಿಲ್ಲ, ಅವರಲ್ಲಿ ಮಹಾಪ್ರಾಜ್ಞನೂ ಅನೇಕ ಶಾಸ್ತ್ರಗಳನ್ನು ಬಲ್ಲನನ್ನೂ ಅಪ್ರತಿಮ ಬುದ್ಧಿಯೂ ಆದ ರಕ್ತಾಕ್ಷನೆಂಬ ಒಬ್ಬ ಮಂತ್ರಿಯನ್ನು ಬಿಟ್ಟರೆ,ಬುದ್ಧಿ ವಂತರೇ ಇರಲಿಲ್ಲ. ಆತನೊಬ್ಬನೇ ನನ್ನ ಅಂತರಂಗದಲ್ಲಿ ಇರುವು ದೇನು ಎಂಬುದನ್ನು ತಿಳಿದಿದ್ದವನು. ಅಷ್ಟೇನು? ದೇವ, ಶತ್ರುಗಳು ಎಲ್ಲಿ ಹೇಗೆ ಮೋಸಮಾಡುವರೋ ಹೇಳಲಾಗುವುದಿಲ್ಲ. ಅದರಿಂದ ನಾವು ಯಾವಾಗಲೂ ಎಚ್ಚರವಾಗಿಯೇ ಇರಬೇಕು. ಕೇಳಿಲ್ಲವೆ?

ರೋಗಗಳು ತಿನ್ನುವುವ ಪಥ್ಯವುಂಬಾತನನು ||
ದುರ್ನೀತಿ ತಿನ್ನುವುದು ರಾಜ್ಯ ಸಾಮ್ರಾಜ್ಯವನು || ೪೦ ||

ಲೋಭ ತಿಂಬುದು ಯಶವ, ಮೋಸ ಕೆಡಿಸುವುದು ಮೈತ್ರಿಯನು||
ಕುಲವ ಕೊಲ್ವುದು ದುರಾಚರ ಹಣದಾಸೆ ಧರ್ಮವನು ||
ಬೆಳೆಸದು ಕಾಮ ವಿದ್ಯೆ ಕಾರ್ಪಣ್ಯ ಕೊಡದು ಸೌಖ್ಯವನು ||
ದುಷ್ಟ ಮಂತ್ರಿಯು ಕಳೆವ ಭೂಮಿಪನ ಸಾಮ್ರಾಜ್ಯವನು ||೪೧ ||

ಅಲ್ಲದೆ, ಮಾನವಪಮಾನಗಳ ಚಿಂತಿಸದೆ, ಚತುರನಾ ಸ್ವಾರ್ಥವನ್ನು ||
ಗೆಲಬೇಕು, ಸ್ವಾರ್ಥವನು ತೊರೆವುದೇ ಮೂರ್ಖತೆಯು ಲೋಕದಲ್ಲಿ ||೪೨||

ಕೇಳಿಲ್ಲವೆ? ಕಪ್ಪೆಯ ಕುಲವಂ ತಿನ್ನಲು ಸರ್ಪವು ||
ಕಾಣೆಯ ಹೊತ್ತಿತವುಗಳ ಬೆನ್ನಲ್ಲಿ || ೪೩ ||

ಮೇಘವರ್ಣನು ಅದೆಂತು ಎಂದು ಕೇಳಲು ಸ್ಥಿರಜೀವಿಯು ಹೇಳಿದನು:—

## ಮಂದವಿಷನ ಕಥೆ

ಪಶ್ಚಿಮ ಪರ್ವತದ ಸಮೀಪದಲ್ಲಿ ಒಂದು ಕಡೆಯಲ್ಲಿ ಮಂದ ವಿಷನೆಂಬ ಒಂದು ಮುದಿಯ ಕೃಷ್ಣಸರ್ಪವಿತ್ತು. "ನಾನು ಈ ಕೊನೆಯ ಕಾಲದಲ್ಲಿ ಸುಖವಾಗಿರುವುದು ಹೇಗೆ?" ಎಂದೇ ಅದಕ್ಕೆ ಯೋಚನೆ. ಹಾಗೆಯೇ ಯೋಚಿಸುತ್ತ ಕಪ್ಪೆಗಳು ತುಂಬಿರುವ ಒಂದು ಕೆರೆಯ ಬಳಿ ಹೋಗಿ ಸತ್ತಂತೆ ಬಿದ್ದುಕೊಂಡಿತ್ತು.

ಅದು ಹಾಗೆ ಬಿದ್ದಿರಲು, ನೀರಿನಲ್ಲಿದ್ದ ಒಂದು ಕಪ್ಪೆಯು "ಮಾವ, ಇದೇನು, ಎಂದಿನಂತೆ ಆಹಾರಾರ್ಥವಾಗಿ ಸಂಚರಿಸದೆ ಹೀಗೆ ಬಿದ್ದುಕೊಂಡಿರುವೆ?" ಎಂದು ಕೇಳಿತು. ಅದಕ್ಕೆ ಆ ಹಾವು "ಅಯ್ಯೋ ಮಂದಭಾಗ್ಯನಾದ ನನಗೆ ಇನ್ನು ಆಹಾರಕ್ಕಾಗಿ ಹೋಗುವ ಭಾಗ್ಯವೆಲ್ಲಿ? ಕೇಳು. ನಿನ್ನೆಯ ಸಂಜೆಯಲ್ಲಿ ಆಹಾರ ವನ್ನು ಹುಡುಕಿಕೊಂಡು ಬಂದು ಒಂದು ಕಪ್ಪೆಯನ್ನು ಕಂಡೆನು. ಅದನ್ನು ಹಿಡಿದುಕೊಳ್ಳಲು ನಾನು ಹಾರಿದೆನು. ಅದು ಮರಣ ಭೀತಿ ಯಿಂದ ಓಡಿ ಹೋಗಿ ವೇದಾಧ್ಯಯನಮಾಡುತ್ತ ನೀರಿನಲ್ಲಿ ನಿಂತಿರುವ ಬ್ರಾಹ್ಮಣರ ನಡುವೆ ಹಾರಿತು. ಅದು ಎಲ್ಲಿಹೋಯಿತೋ ಎಂದು ಹುಡುಕುತ್ತಾ, ನೀರಿನಲ್ಲಿ ನಿಂತಿದ್ದ ಒಬ್ಬ ಬ್ರಾಹ್ಮಣ ವಟು*ವಿನ ಹೆಬ್ಬೆ ಟ್ಟನ್ನು ನೋಡಿ, ಇದು ಕಪ್ಪೆಯಿರಬೇಕು ಎಂದು ಕಚ್ಚಿಕೊಂಡೆನು. ಅವನು ಆ ಕೂಡಲೇ ಸತ್ತು ಹೋದನು. ಅದನ್ನು ಕಂಡು ದುಃಖ

* ಮುಂಜಿಯಾಗಿರುವ ಹುಡುಗನಿಗೆ ವಟು ಎಂದು ಹೆಸರು.

ದಿಂದಲೂ ಕೋಪದಿಂದಲೂ ಆ ಹುಡುಗನ ತಂದೆಯು "ಎಲೈ ದುರಾತ್ಮನೆ, ನಿರಪರಾಧಿಯಾದ ನನ್ನ ಮಗನನ್ನು ಕಚ್ಚಿ ಕೊಂದೆ. ಅದ ರಿಂದ ನೀನು ಇನ್ನುಮೇಲೆ ಕಪ್ಪೆಗಳಿಗೆ ವಾಹನವಾಗಿ, ಅವು ಕೊಟ್ಟ ಷ್ಟರಿಂದ ಜೀವಿಸಿಕೊಂಡಿರು" ಎಂದು ಶಾಪವನ್ನು ಕೊಟ್ಟನು. ಅದಕ್ಕಾಗಿ ಇಲ್ಲಿ ಬಿದ್ದಿರುವೆನು" ಎಂದಿತು.

ಆ ಕಪ್ಪೆಯು ಈ ಸುದ್ದಿಯನ್ನು ಇತರ ಮಂಡೂಕ(ಕಪ್ಪೆ) ಗಳಿಗೆ ಹೇಳಿತು. ಅವು ಹೋಗಿ ಜಲಪಾದನೆಂಬ ತಮ್ಮ ಅರಸಿಗ ಹೇಳಿದುವು. ಅದೂ ತನ್ನ ಮಂತ್ರಿ ಪರಿವಾರಗಳೊಡನೆ ಈ ಅದ್ಭು ತವನ್ನು ನೋಡಲು ಬಂತು. ಹಾವು ಅದನ್ನು ಏನೂ ಮಾಡದಿರಲು ಅದರ ಹೆಡೆಯಮೇಲೆ ಹತ್ತಿ ಕುಳಿತಿತು. ಅದರ ಪರಿವಾರವೂ ಹಾಗೆಯೇ ಅದರಮೇಲೆ ಹತ್ತಿ ಕುಳಿತುವು. ಮಂದವಿಷನೂ ಅವು ಗಳನ್ನು ಮೆಚ್ಚಿಸಲು ನಾನಾವಿಧವಾಗಿ ಓಡಾಡಿ, ಹಾರಾಡಿ ಕುಣಿ ದಾಡಿತು. ಅರಸನು ಅದರ ಮೈಮೇಲೆ ಕುಳಿತು ಸುಖಪಡುತ್ತಾ "ಇದನ್ನು ಬಿಟ್ಟರೆ,ಆನೆಯಮೇಲೆ, ಕುದುರೆಯಮೇಲೆ, ಮನುಷ್ಯರ ಮೇಲೆ ತಾನೇ ಕುಳಿತರೆ, ಇಂಥ ಸುಖವು ದೊರೆಯುವುದೆ? " ಎಂದು ಬಹುವಾಗಿ ಹೊಗಳಿತು.

ಇನ್ನೊಂದು ದಿನ ಮಂದವಿಷನು ದುರುದ್ದೇಶದಿಂದ ಮೆಲ್ಲ ಮೆಲ್ಲಗೆ ಹೋಯಿತು. ಅದನ್ನು ನೋಡಿ ಅರಸು "ಏನಿದು? ಏಕೆ? ಈ ದಿನ ಹೀಗೆ ಮಾಡುತ್ತಿರುವೆ? ಸರಿಯಾಗಿ ಹೋಗುತ್ತಿಲ್ಲ?" ಎನಲು ಮಂದವಿಷನು "ಬುದ್ಧಿ, ಈ ದಿನ ನನಗೆ ಹಸಿವು. ಶಕ್ತಿಯಿಲ್ಲ." ಎನ್ನಲು, "ಅಯ್ಯಾ, ಇನ್ನುಮೇಲೆ ಸಣ್ಣಪುಟ್ಟ ಕಪ್ಪೆಗಳನ್ನು ತಿಂದುಕೊ" ಎಂದು ಅಪ್ಪಣೆಯನ್ನು ಕೊಟ್ಟಿತು. ಅದನ್ನು ಕೇಳಿ ಆ ಕಳ್ಳ ಹಾವು "ನನಗೆ ವಿಪ್ರಶಾಪವಿದೆ. ಅದರಿಂದ ನೀನು ಅಪ್ಪಣೆ ಮಾಡಿದ ಹೊರತು ತಿನ್ನುವಂತಿರಲಿಲ್ಲ. ನನ್ನನ್ನು ಬದುಕಿಸಿದೆ" ಎಂದು ಹೇಳಿ ಅಂದಿನಿಂದ ಕಪ್ಪೆಗಳನ್ನು ತಿನ್ನಲು ಮೊದಲುಮಾಡಿತು.

ಕಪ್ಪೆಗಳನ್ನು ತಿಂದು ತಿಂದು ಹಾವಿಗೆ ಬಲವು ಬಂತು. ಆಗ ತನ್ನೊಳಗೆ ತಾನೇ ನಗುತ್ತ "ಚಿಂತೆಯಿಲ್ಲ. ಇಲ್ಲಿ ಎಷ್ಟೋ ಜಾತಿಯ ಕಪ್ಪೆಗಳಿವೆ. ಸುಖವಾಗಿ ಬಹುಕಾಲ ತಿಂದುಕೊಂಡಿರಬಹುದು" ಎಂದುಕೊಂಡಿತು. ಜಲಪಾದನೂ ಅದು ಹಾಗೆ ಕಪ್ಪೆಗಳನ್ನು ತಿನ್ನುತ್ತಿದ್ದರೆ ಕಂಡರೂ ಆಕ್ಷೇಪಿಸುತ್ತಿರಲಿಲ್ಲ.

ಹೀಗಿರಲು ಒಂದು ದಿನ ಇನ್ನೊಂದು ದೊಡ್ಡ ಕೃಷ್ಣ ಸರ್ಪವು ಅಲ್ಲಿಗೆ ಬಂದು ಮಂದವಿಷನು ಮಾಡುತ್ತಿರುವ ಕೆಲಸವನ್ನು ಕಂಡು ವಿಸ್ಮಯಪಟ್ಟು "ಇದೇನು ಹೀಗೆ?" ಎಂದು ವಿಚಾರಿಸಿತು. ಮಂದ ವಿಷನು "ಹೀಗೆ ಮಾಡದಿದ್ದರೆ, ಇಲ್ಲಿರುವ ಕಪ್ಪೆಗಳೆಲ್ಲಾ ನನ್ನ ಹೊಟ್ಟೆಗೆ ಸೇರುವ ಬಗೆ ಹೇಗೆ?" ಎಂದಿತು. ಕಾಲಕ್ರಮದಲ್ಲಿ ಅಲ್ಲಿದ್ದ ಕಪ್ಪೆಗಳ ಹೆಸರೇ ಇಲ್ಲದಂತೆ ತಿಂದೂ ಹಾಕಿತು.

ಅದರಿಂದ ಹಾಗೆ ಹೇಳಿದೆನು ಎಲೈ ರಾಜನೆ, ಮಂದವಿಷನು ಕಪ್ಪೆಗಳನ್ನು ಕೊಂದಂತೆ, ನಾನೂ ನನ್ನ ಬುದ್ಧಿಯಿಂದ ವೈರಿಗಳನ್ನು ನಿರ್ಮೂಲ ಮಾಡಿದೆನು. ಕೇಳಿಲ್ಲವೆ?

ಸುಡುವ ಬೆಂಕಿಯು ಬಿಡುವುದು ||
ಪ ‍ದದ ಬುಡಗಳ ಕೊಲ್ಲದೇ ||
ಸಣ್ಣ ಶೀತದ ಗಾಳಿಯು ||
ಬಿಡದೆ ಕೊಲ್ಲುವುದು ಬುಡಗಳಾ || ೪೪ || ಎಂದನು.

ಮೇಘವರ್ಣನು "ತಾತ ಇದು ನಿಜವು. ಮಹಾತ್ಮರಾದ ವರು ಮಹಾ ಶಕ್ತಿಶಾಲಿಗಳು. ಆಪತ್ತು ಬಂದರೂ ಆರಂಭಿಸಿದ ಕಾರ್ಯವನ್ನು ಬಿಡುವುದಿಲ್ಲ. ಕೇಳಿಲ್ಲವೆ?

ವಿಘ್ನ ಕಂಜಿ ಕೆಲಸ ಮೊದಲು ಮಾಡನೀಚನು ||
ಮೊದಲು ಮಾಡಿ ವಿಘ್ನ ಬರಲು ಬಿಡುವ ಮಧ್ಯಮ ||
ವಿಘ್ನ ನೂರು ಬರಲು ಬಿಡದೆ, ಮೊದಲು ಮಾಡಿದ ||
ಕೆಲಸ ಹಿಡಿದು ಫಲದ ತನಕ ಮಾಳ್ಪನುತ್ತಮ || ೪೫ ||

ಶತ್ರುಗಳನ್ನು ನಿಶ್ಶೇಷವಾಗಿ ಕೊಂದು ನನ್ನ ರಾಜ್ಯವು ನಿಷ್ಕಂಟಕವಾಗುವ ಹಾಗೆ ಮಾಡಿದೆ. ರಾಜ ನೀತಿಯನ್ನು ಬಲ್ಲವರ ಕೆಲಸವೇ ಇದು. ಋಣಶೇಷ, ಶತ್ರುಶೇಷ, ಅಗ್ನಿಶೇಷ, ವ್ಯಾಧಿಶೇಷ, ಗಳನ್ನು ಬಿಡದೆ ಪರಿಹಾರ ಮಾಡುವವನೇ ಪ್ರಾಜ್ಞನು.'' ಎಂದು ಹೊಗಳಿದನು.

ಸ್ಥಿರ ಜೀವಿಯು ಹೇಳಿದನು: ''ದೇವ, ನೀನು ಭಾಗ್ಯವಂತನು ಅದರಿಂದಲೇ ಹಿಡಿದ ಕೆಲಸವು ಸಫಲವಾಯಿತು. ಕೇವಲ ಶೌರ್ಯ ವೊಂದೇ ಕೆಲಸವನ್ನೂ ಸಾಧಿಸುವುದಿಲ್ಲ. ಅದರ ಜೊತೆಗೆ ಪ್ರಜ್ಞೆ ಯೂ ಬೇಕು. ಎರಡೂ ಸೇರಿದರೆ ವಿಜಯವು ತಪ್ಪದೆ ಕೈ ಸೇರು ವುದು. ಕೇಳಿಲ್ಲವೆ?

> ಶಸ್ತ್ರದಿಂದ ಹೊಡೆಯೆ ರಿಪುವು ಸುಹತನಾಗನು ||
> ಪ್ರಜ್ಞೆಯಿಂದ ಹೊಡೆಯೆ ರಿಪುವು ಆಗ ಸುಹತನು ||
> ಶಸ್ತ್ರ ಹೊಡೆಯೆ ದೇಹವೊಂದೆ ಅಳಿದು ಹೋದರೆ ||
> ಪ್ರಜ್ಞೆ ಹೊಡೆಯೆ ಕುಲವು ವಿಭವ ಯಶವು ಹೋಹುದು || ೪೬ ||

ಅದರಿಂದ ಹೀಗೆ ಪ್ರಜ್ಞೆಯನ್ನೂ ಪುರುಷ ಪ್ರಯತ್ನವನ್ನೂ ಸೇರಿಸಿ ಕೆಲಸ ಮಾಡಿದರೆ, ಕಾರ್ಯಸಿದ್ಧಿಯು ಸುಲಭವಾಗಿ ಆಗಿಯೇ ಆಗುವುದು. ತ್ಯಾಗಿಯೂ ಶೂರನೂ ವಿದ್ವಾಂಸನೂ ಆದವನಲ್ಲಿ ಜನರಿಗೆ ವಿಶ್ವಾಸವು ಹುಟ್ಟುವುದು. ಆ ವಿಶ್ವಾಸದಿಂದ ಧನವು, ಧನದಿಂದ ವೈಭವವು, ವೈಭವದಿಂದ ರಾಜ್ಯವೂ ಸಿದ್ಧಿಸುವುವು.'' ಎಂದನು.

ಮೇಘವರ್ಣನು ''ನೀತಿಶಾಸ್ತ್ರಗಳು ಕೂಡಲೇ ಫಲವನ್ನು ಕೊಡತಕ್ಕವು. ನೀನು ಇದನ್ನು ಮಾಡಿ ತೋರಿಸಿದೆ'' ಎಂದನು. ಸ್ಥಿರಜೀವಿಯು ''ದೇವ, ಯಾವುದೋ ಕಾಲದಲ್ಲಿ ಬಹುಕಷ್ಟದಿಂದ ಫಲಿಸುವ ಕಾರ್ಯವನ್ನು ಮಾಡಿ ಆಗುವುದೇನು? ಆಡಿದುದನ್ನು ಮಾಡಿ ತೋರಿಸಬೇಕು. ಇಲ್ಲವಾದರೆ ಲೋಕವು ನಗುವುದು. ಅದರಿಂದ

ಸಣ್ಣ ಕಾರ್ಯದಲ್ಲಾದರೂ ಬುದ್ಧಿವಂತನು ಅನಾದರವನ್ನು ತೋರ ಬಾರದು. ಇನ್ನು ನಾನು ಮಾಡಬೇಕಾಗಿದ್ದ ಕಾರ್ಯವನ್ನು ಮಾಡಿದ ನಾಗಿ, ನೆಮ್ಮದಿಯಿಂದಿರುವೆನು. ನೀನೂ ನಿಷ್ಕಂಟಕವಾದ ಈ ರಾಜ್ಯ ವನ್ನು ಪ್ರಜಾಪಾಲನ ತತ್ಪರನಾಗಿ, ಪುತ್ರ ಪೌತ್ರ ಕ್ರಮದಿಂದ ಅಚಲವಾಗಿ ಅನುಭವಿಸು. ಒಂದು ಮಾತ್ರ ನೆನೆಪಿರಲಿ.

ಪ್ರಜೆಯ ರಂಜನೆ ಮುಖ್ಯ ರಾಜನಿಗೆ ||
ಯಾವ ರಾಜ್ಯದ ಪ್ರಜೆಯು ಸುಖಿಸದೋ ||
ರಾಜ್ಯವದು ಬರಿ ಬರಿದು ಫಲವಿಲ್ಲ ||
ಆಡ ಕತ್ತಿನ ಮೊಲೆಯ ತೆರದಿಂದ || ೪೭ ||

ಅದರಿಂದ ಮದ್ದಾನೆಯ ಕಿವಿಯಂತೆ ಚಂಚಲವಾದ ರಾಜ್ಯ ಲಕ್ಷ್ಮಿಯನ್ನು ನ್ಯಾಯ ನಿಷ್ಠನಾಗಿದ್ದುಕೊಂಡು ಉಪಭೋಗಿಸು.'' ಎಂದು ಆಶೀರ್ವಾದ ಮಾಡಿದನು.

ಇಂತಿದು ಹೊಸಗನ್ನಡ ಪಂಚತಂತ್ರದಲ್ಲಿ
" **ವೈರ ಸಾಧಿಸುವುದು** " ಎಂಬ
ಮೂರನೆಯ ತಂತ್ರವು ಮುಗಿದುದು.



# ಹೊಸಗನ್ನಡ ಪಂಚತಂತ್ರ

## ಒಡೆಯುವುದು

ಒಡೆಯುವುದು ಎಂಬ ನಾಲ್ಕನೆಯ ತಂತ್ರವಿದು. ಅದರಲ್ಲಿ ಮೊದಲ ಶ್ಲೋಕವಿದು:—

ಅರ್ಥ ಗೆಳೆತನ ಬೆಳೆಯಲು ಬಲವಾಗಿ ||
ಬಸವಕೆ ಸಿಂಹಕೆ ಬನದಲ್ಲಿ ||
ಹೊಟ್ಟೆಯುರಿದು ನರಿಗವ ಕಂಡು ||
ಸೊಟ್ಟ ತನದೊಳದ ಕೆಡಸೀತು || ೧ ||

ಆ ಕಥೆಯು ಹೀಗೆ:—

### ಸಂಜೀವಕನ ಕಥೆ

ದಕ್ಷಿಣ ದೇಶದಲ್ಲಿ ಮಹಿಲಾರೋಪ್ಯ ಎಂಬ ಒಂದು ನಗರ ವಿರುವುದು. * 1 ಅಲ್ಲಿ ವರ್ಧಮಾನಕನೆಂಬ ಒಬ್ಬ ವೈಶ್ಯನಿದ್ದನು. ಆತನು ಧರ್ಮದಿಂದ ವ್ಯಾಪಾರ ಮಾಡಿ ಬೇಕಾದ ಹಾಗೆ ಧನವನ್ನು ಸಂಪಾದಿಸಿದ್ದನು. ಒಂದು ದಿನ ಆತನು ಹಾಸುಗೆಯಲ್ಲಿ ಮಲಗಿರು ವಾಗ ಒಂದು ಯೋಚನೆಯು ಬಂತು: ನನಗೆ ಬೇಕಾದಷ್ಟು ಧನ ವಿದೆ. ಆದರೂ ಇನ್ನೂ ಹಣವನ್ನು ಸಂಪಾದಿಸುವ ಯೋಚನೆ ಯನ್ನು ಮಾಡಲೇಬೇಕು.* 2

---

* 1 ಅದು ಇಂದ್ರನ ಅಮರಾವತಿಯನ್ನು ಮೀರುವ ವೈಭವವುಳ್ಳದು ಹಿಮಾಲಯದಂತೆ ಹತ್ತುವುದಕ್ಕೆ ಅಸಾಧ್ಯವಾದ ಕೋಟೆಯು ಅದನ್ನು ಬಳಸಿರುವುದು. ಅದರ ಸುತ್ತಲೂ ಸಮುದ್ರದಂತಹ ಕಂದಕವಿರುವುದು. ಅದನ್ನು ದೂರದಿಂದ ನೋಡಿದರೆ ಪರಶಿವನ ಕೈಲಾಸಪರ್ವತವೋ ಎನ್ನು ವಂತಿತ್ತು.

ಪಳಗಿದಾನೆಯು ಕಾಡಿನಾನೆಯು ಹಿಡಿವುದು ||
ಬಳಸಿ ಹಣವನು ಹಾಗೆ ಲಾಭವ ಹಿಡಿದಿಡು ||
ಒಳಸದಿದ್ದರೆ ಹಣವೆ ಬಂಧನ ತಿಳಿದಿರು ||
ತುಂಬಿ ಇಟ್ಟರೆ ಪರರ ಪಾಲೆಂದರಿತಿರು || ೨ ||

ಹಣವು ಗೆಲ್ಲದ ಕಾರ್ಯವಿಲ್ಲ | ಹಣವನದರಿಂ ಸಾಧಿಸಯ್ಯ ||
ನೂರು ಯತ್ನವ ಮಾಡಿ ಮಾಡಿ। ಜಾಣ ಹೊನ್ನನು ಪಡೆಯಲಾಸ್ಯ ||೩||

ಹಣವು ಇದ್ದರೆ ಮಿತ್ರವರ್ಗ | ಹಣವು ಇದ್ದರೆ ಬಂಧು ಬಳಗ ||
ಹಣವು ಇದ್ದರೆ ಅವನೆ ಧೀರ । ಹಣವು ಇದ್ದರೆ ಅವನೆ ಜಾಣ || ೪ ||

ವಿದ್ಯೆ ಇರಲೇಂ ದಾನ ವಿರಲೇಂ।
ಸ್ಥೈರ್ಯವಿರಲೇಂ ಶಿಲ್ಪವಿರಲೇಂ ||
ಕಲೆಯು ಇರಲೇಂ ಹಣವನೊಂದನೆ।
ತಿರುಪದವರೂ ಹಾಡಿ ಹೊಗಳುವರು ॥ ೫ ||

ಹಣವಂತಗೆ ಹಗೆಯೂ ಆಗುವ ನೆಂಟ ||
ಬಡವಗೆ ಲೋಕದೆ ಹಗೆಯಾಗುವ ನೆಂಟ || ೬ ||

ಬೆಳೆದು ನಿಂತರೆ ಧನವು ಬಹುವಾಗಿ ।
ಕಾರ್ಯವೆಲ್ಲವು ಫಲಿಸಿ ಬಹುದೈ ||
ಬೆಟ್ಟದಿಂದಿಳಿಬರುವ ನದಿಯಂತೆ || ೭ ||

ಅಪೂಜ್ಯರನು ಪೂಜಿಸುವರೇಕೆ? ಅಗಮ್ಯನನು ಸೇರುವುದದೇಕೆ ?
ಅವಂದ್ಯನನು ವಂದಿಸುವರೇಕೆ? ಅದೆ ನೋಡು ಧನದ ಮಹಿಮೆ॥ ೮ ||

* 2 ಹಣವು ಎಷ್ಟೇ ಇದ್ದರೂ ವೆಚ್ಚಮಾಡುತ್ತಿದ್ದರೆ ಭರಣಿಯೊಳಗಿನ ಕಾಡಿಗೆಯಂತೆ ಮುಗಿದು ಹೋಗುವುದು. ಕೊಂಚ ಕೊಂಚವಾದರೂ ಸೇರಿಸುತ್ತಿದ್ದರೆ ಹುತ್ತವು ಬೆಳೆಯುವ ಹಾಗೆ ಬೆಳೆಯುವುದು. ಅದರಿಂದ ಸಂಪಾದನೆಯು ನಡೆಯುತ್ತಲೇ ಇರಬೇಕು. ಹಣವು ಬರುತ್ತಲೇ ಇರಬೇಕು. ಬಂದುದನ್ನು ಭದ್ರವಾಗಿಡಲೇ ಬೇಕು. ಅವಕಾಶ ದೊರೆತಾಗ ಅದನ್ನು ಮತ್ತೆ ಬಳಸಬೇಕು. ಹಿರಿಯರೂ ಹಾಗೆಯೇ ಹೇಳುತ್ತಾರೆ.

ಹೊಟ್ಟೆಗಾದರೆ ಬೆಳೆವ ವಿಂದ್ರಿಯುವರ್ಗ
ವಿತ್ತವಿದ್ದರೆ ಫಲಿಸುವುವು ಕಾರ್ಯವರ್ಗ ॥
ಅದರಿಂದ ಧನವೆ ನಿಜ ಸಾಧನದ ಸ್ವರ್ಗ ॥ ೯ ॥

ಬದುಕಿ ಬಾಳುವ ಜೀವ ಹಣಕಾಗಿ |
ನಿಲ್ಲುವುದು ಮಸಣಕ್ಕು ಹೋಗಿ ॥
ಪಡೆದ ತಂದೆಗೆ ಹಣವಿಲ್ಲವಾಗೆ |
ಮಗನು ಓಡುವನು ದೂರವಾಗಿ ॥ ೧೦ ॥

ಕೈ ಕಾಲು ಉಡುಗಿರುವ ಮುದುಕ ಮುದುಕನಲ್ಲ॥
ಹಣವಿಲ್ಲದಾತುರಣ ಮುದುಕನಲ್ಲದಲ್ಲ ॥ ೧೧ ॥

ಇಂತಹ ಹಣವು ಮನುಷ್ಯನಿಗೆ ಆರು ಹಾದಿಗಳಲ್ಲಿ ದೊರೆಯುವುದು ಭಿಕ್ಷೆಯಿಂದ, ಅರಸುಗಳನ್ನು ಸೇವಿಸುವುದರಿಂದ, ಬೇಸಾಯಮಾಡುವುದರಿಂದ, ವಿದ್ಯೆಯನ್ನು ಕಲಿಯುವುದರಿಂದ, ಬಡ್ಡಿಗೆ ಕೊಡುವುದರಿಂದ, ವ್ಯಾಪಾರಗಳನ್ನು ಮಾಡುವುದರಿಂದ. ಇವೆಲ್ಲದರಲ್ಲಿ ವ್ಯಾಪಾರದಿಂದ ಪೌರಷವೂ ಬರುವುದು: ಹಣವೂ ಸಿಕ್ಕುವುದು ಅದರಿಂದಲೇ ಬಲ್ಲವರು ಹೀಗೆನ್ನುವರು:—

ಭಿಕ್ಷಕ್ಕೆ ಬರುವವರು ಬಹಳ ಮಂದಿ: ದೊರೆಯು ನಮಗೆ ಬೇಕಾದುದನ್ನು ಕೊಡುವುದಿಲ್ಲ. ಬಡ್ಡಿಗೆ ಕೊಟ್ಟರೆ ಇನ್ನೊಬ್ಬರ ಕೈಗೆ ಹೋದ ಗಂಟು ಹಿಂತಿರುಗುವುದು ಸಂಶಯ. ಬೇಸಾಯವು ಬಹಳ ಕಷ್ಟ. ಗುರುವನ್ನು ಸೇವಿಸಿ ವಿದ್ಯೆಯನ್ನು ಪಡೆಯುವುದು ಸುಲಭವಲ್ಲ. ಅದರಿಂದ ವ್ಯಾಪಾರವೇ ಸರಿ. ಅದರಲ್ಲಿಯೂ ಮಿಕ್ಕ ಎಲ್ಲ ವ್ಯಾಪಾರಗಳಿಗಿಂತ ಎರಡು ಮೂರರಷ್ಟು ಲಾಭವನ್ನು ಕೊಡುವ ದೇಶಾಂತರ ವ್ಯಾಪಾರವೇ ಸರಿ.''

ಹೀಗೆಂದು ಗೊತ್ತು ಮಾಡಿಕೊಂಡು, ಆ ವ್ಯಾಪಾರಿಯು ದೇಶಾಂತರ ವ್ಯಾಪಾರಕ್ಕೆ ಬೇಕಾದ ಸರಕುಗಳನ್ನೆಲ್ಲ ತಂದು ತುಂಬಿ

ಟ್ಟುಕೊಂಡನು. ಶುಭವಾದ ದಿನದಲ್ಲಿ ಶುಭವಾದ ಲಗ್ನದಲ್ಲಿ ಗುರು ಹಿರಿಯರ ಅಪ್ಪಣೆ ಪಡೆದು ಸರಕನ್ನು ಗಾಡಿಗಳಲ್ಲಿ ತುಂಬಿಕೊಂಡು ಹೊರಟನು. ಆತ ಕುಳಿತುಕೊಳ್ಳುವ ಗಾಡಿಗೆ ಅವರ ಮನೆಯಲ್ಲಿಯೇ ಹುಟ್ಟಿದ್ದ ಸಂಜೀವಕ ನಂದನಕ ಎಂಬ ಎರಡು ಸೊಗಸಾದ ಎತ್ತುಗಳನ್ನು ಕಟ್ಟಿದ್ದರು.

ವ್ಯಾಪಾರಿಗಳೆಲ್ಲ ಒಟ್ಟು ಸೇರಿ ಹೊರಟರು. ಅವರೆಲ್ಲರೂ ಅಷ್ಟು ದಿನ ಪ್ರಯಾಣ ಮಾಡಿದ ಮೇಲೆ ದಾರಿಯಲ್ಲಿ ಒಂದು ಭಯಂಕರ ಕಾಡು ಸಿಕ್ಕಿತು. ಆ ಕಾಡು ಒಂದು ದೊಡ್ಡ ಬೆಟ್ಟದ ಮಗ್ಗುಲಲ್ಲಿತ್ತು. ಅಲ್ಲಿ ಬೆಟ್ಟದಿಂದ ಝುರಝುರನೆ ಇಳಿಯುವ ಹಳ್ಳಗಳು ಅಲ್ಲಲ್ಲಿ ನಿಂತು ಕೆಸರಾಗಿತ್ತು. ಅಂತಹ ಕೆಸರುಗಳನ್ನು ದಾಟುವಾಗ ಸಂಜೀವಕನೆಂಬ ಎತ್ತಿನ ಕಾಲು ಹೂತುಕೊಂಡು ಮುರಿದು ಹೋಗಿ ಬಿದ್ದು ಹೋಯಿತು.

ಸಾಹುಕಾರನು ತನ್ನ ಎತ್ತು ಹೀಗಾಯಿತಲ್ಲ ಎಂದು ಮರುಗಿ ಅಲ್ಲಿಯೇ ಎರಡು ಮೂರು ದಿನ ನಿಂತು ಆ ಎತ್ತಿಗೆ ಉಪಚಾರ ಮಾಡಿಸಿದನು. ಆದರೂ ಅದಕ್ಕೆ ಗುಣವಾಗಲಿಲ್ಲ. ಮಿಕ್ಕ ವರ್ತಕರೆಲ್ಲರೂ "ಈ ಕಾಡಿನಲ್ಲಿ ಹುಲಿ, ಚಿರತೆ, ಸಿಂಹ, ಆನೆ, ಮೊದಲಾದವು ಬೇಕಾದ ಹಾಗೆ ಇರುವುವು. ಅದರಿಂದ ಇಲ್ಲಿ ಇರುವುದು ಸರಿಯಲ್ಲ" ಎನ್ನಲು, ಸಾಹುಕಾರನು ಅಹುದು ಎಂದು ಸಂಜೀವಕನ ಉಪಚಾರಕ್ಕೆ ಕೆಲವರು ಆಳುಗಳನ್ನು ಇಟ್ಟು ಹುಲ್ಲು ಹುರುಳಿ ಬೇಕಾದ ಹಾಗೆ ಕೊಟ್ಟು, ತಾನು ಮುಂದಕ್ಕೆ ಹೊರಟನು. ಆ ಆಳುಗಳು ಒಂದು ದಿನ ಅಲ್ಲಿ ಇದ್ದು, ಕಾಡಿನಲ್ಲಿ ಇರುವುದಕ್ಕೆ ಹೆದರಿ, ಆ ಸಂಜೀವಕನನ್ನು ಅಲ್ಲಿಯೇ ಬಿಟ್ಟು ಹೊರಟು ಹೋದರು.

ಸಂಜೀವಕನು ಸಾಯಲಿಲ್ಲ. ಪಕ್ಷಿಯ ಮರಿಯ ದಳಗಳಂತೆ ಇದ್ದ ಹಸುರಾದ ಹುಲ್ಲನು ಮೆಯ್ದು, ಬೆಟ್ಟದಿಂದ ಬರುವ ನೀರನ್ನು

ಕುಣಿದು ಬದುಕಿಕೊಂಡಿತು. ಕಾಲಿನ ಮೂಳೆಯೂ ಕೂಡಿಕೊಂಡಿತು. ಎದ್ದು ಓಡಾಡುವಂತಾಯಿತು. ಅದಕ್ಕೆ ಮೈ ಬಲಿತು ಪರಮೇಶ್ವರನ ನಂದಿಯಂತೆ ಆಯಿತು, ಆ ಹಿಳಿಲೋ! ಆ ಮೈಯ್ಯೋ! ಒಂದು ಮದ್ದಾನೆಯು ಹಾಗಾಗಿ, ಓಡಾಡುವ ಬಂಡೆಯೋ ಎಂಬಂತೆ ತಿರುಗುತ್ತಾ, ಹುತ್ತಗಳನ್ನು ಕೊಂಬಿನಿಂದ ತಿವಿದೆಸೆಯುತ್ತಾ ಆ ಕಾಡಿಗೆ ಒಡೆಯನೋ ಎಂಬಂತೆ ಇತ್ತು. ಅದರಿಂದಲೇ ತಿಳಿದವರು ಹೇಳುವುದು.

ಕಾಯದಿದ್ದರೆ ದೈವ ಕಾವುದು । ಕಾವಲಿದ್ದರೆ ದೈವ ಕೊಲ್ಲುವುದು ||
ಕಾಡಲಿದ್ದವ ಬಾಳ ಬದುಕಲು । ಮನೆಯಲಿದ್ದವ ಮಿತ್ತು ತುತ್ತಾದ||೧೨||

## ಪಿಂಗಲಕನ ಕಥೆ

ಆ ಕಾಡಿನಲ್ಲಿ ಪಿಂಗಲಕನೆಂಬ ಸಿಂಹವು ಮೃಗಗಳಿಗೆಲ್ಲ ಅರಸಾಗಿ ರಾಜ್ಯಭಾರ ಮಾಡಿಕೊಂಡಿತ್ತು. ಒಂದು ದಿನ ಆ ಸಿಂಹವು ತನ್ನ ಪರಿವಾರವನ್ನೆಲ್ಲ ಕರೆದುಕೊಂಡು ನದಿಯಲ್ಲಿ ನೀರು ಕುಡಿಯಬೇಕು ಎಂದು ಬಂತು. ಆ ವೇಳೆಗೆ ಸರಿಯಾಗಿ ಸಂಜೀವಕನು ಎಲ್ಲಿಯೋ ಇದ್ದು ಒಂದು ಗುಟರೆಯನ್ನು ಹಾಕಿತು. ಆ ಗುಟರೆಯು ಗುಡುಗಿಗಿಂತ ಬಲವಾಗಿದ್ದು ದಿಕ್ಕು ದಿಕ್ಕುಗಳಲ್ಲೆಲ್ಲಾ ಮೊಳಗಿತು. ಆ ಮೊಳಗು ಕೇಳಿ ಸಿಂಹಕ್ಕೆ ಅಬ್ಬಾ ಎನ್ನಿಸಿತು. "ಈ ಗರ್ಜನವೇ ಇಷ್ಟು ಭಾರಿಯಾಗಿದೆಯಲ್ಲಾ! ಇನ್ನು ಈ ಗರ್ಜನವನ್ನು ಮಾಡಿದ ಪ್ರಾಣಿ ಎಂಥದು ಇರಬಹುದು. ಈ ಕಾಡಿನಲ್ಲಿದ್ದರೆ ನಾವು ಇನ್ನು ಬದುಕುವಂತಿಲ್ಲ." ಎನ್ನಿಸಿ ಅದಕ್ಕೆ ದಿಗಿಲಾಯಿತು. ಆದರೂ ತನ್ನ ಅಂಜಿಕೆಯನ್ನು ತೋರಿಸಿಕೊಳ್ಳದೆ ಗಂಭೀರವಾಗಿ ಅಲ್ಲಿಯೇ ಒಂದು ಆಲದ ಮರದ ಬುಡದಲಿ, ಕುಳಿತುಕೊಂಡಿತು.

ಸಿಂಹವು ಎಷ್ಟೇ ಆಗಲಿ ರಾಜನಲ್ಲವೇ? ಸಿಂಹವು ಕುಳಿತ ಕಡೆ ಅದನ್ನು ನಡುವೆ ಬಿಟ್ಟುಕೊಂಡು ಅದರ ಮಂತ್ರಿಗಳು ಕುಳಿ

ತರು. ಅವರ ಸುತ್ತಲೂ ರಾಜದೂತರು ಕುಳಿತರು. ಅವರ ಸುತ್ತಲೂ ಸಣ್ಣ ಕೆಲಸಗಳನ್ನು ಮಾಡಿಕೊಂಡು ಸಿಕ್ಕಿದುದನ್ನು ತಿಂದು ಕೊಂಡು ಕಾಲಹಾಕುವ ಸಣ್ಣ ಜನರು ಕುಳಿತುಕೊಂಡರು ಯಾರಿಗೂ ಸಿಂಹವೇಕೆ ಹೀಗೆ ಕುಳಿತುಕೊಂಡಿತು ಎಂಬುದು ತಿಳಿಯದು.

ಹೀಗೆ ರಾಜನು ಪರಿವಾರದೊಡನೆ ಸುಮ್ಮನೆ ಕುಳಿತಿರುವು ದನ್ನು ಕರಟಕ ದಮನಕ ಎಂಬ ಎರಡು ನರಿಗಳು ಕಂಡುವು. ಅವು ಈ ಪಿಂಗಲಕರಾಜನ ಬಳಿ ಮಂತ್ರಿಗಳಾಗಿದ್ದ ನರಿಗಳ ಮಕ್ಕಳು. ಈಚೆಗೆ ರಾಜನಿಗೆ ಏಕೋ ಬೇಡವಾಗಿ ಅವುಗಳಿಗೆ ಮಂತ್ರಿ ಪದ ವಿಯು ತಪ್ಪಿತ್ತು. ಅಧಿಕಾರವು ತಪ್ಪಿದ್ದರೂ ಅವು ಯಾವಾಗಲೂ ರಾಜನ ಜೊತೆ ಜೊತೆಯಲ್ಲಿಯೇ ಇರುತ್ತಿದ್ದುವು. ಅವು ರಾಜನು ಹೀಗೆ ಕುಳಿತಿರುವುದನ್ನು ಕಂಡು ತಮ್ಮ ತಮ್ಮಲ್ಲಿ ಮಾತನಾಡಿ ಕೊಂಡುವು. ದಮನಕನು "ಭದ್ರ, ಕರಟಕ, ನಮ್ಮ ಒಡೆಯನು ನೀರು ಕುಡಿಯುವುದಕ್ಕೆಂದು ನದಿಗೆ ಬಂದವನು ಏಕೆ ನದಿಗೆ ಇಳಿ ಯದೆ ಹೀಗೆ ಆ ಮರದ ಬುಡದಲ್ಲಿ ಕುಳಿತು ಬಿಟ್ಟನು?" ಎಂದು ಕೇಳಿತು. ಕರಟಕನು- "ಅದು ಏನಾದರೂ ಮಾಡಿಕೊಳ್ಳಲಿ ನಮ ಗೇನು? ಕೇಳಿಲ್ಲವೆ ನೀನು?

ಮಾಡಬಾರದ ಕೆಲಸ ಮಾಡಲು। ನರನು ಕೇಡನು ಪಡೆವನು ॥
ಕೀಲ ಕೀಳಲು ಹೋಗಿವಾನರ ಪ್ರಾಣ ಬಿಟ್ಟುದ ಕಾಣೆಯಾ ॥ ೧೩ ॥

ದಮನಕನು ಅದು ಹೇಗೆ? ಎಂದು ಕೇಳಲು ಕರಟಕನು ಹೇಳಿತು.



## ಕೀಲು ಕಿತ್ತ ಕೋತಿಯ ಕಥೆ

ಒಂದು ಊರಿನಲ್ಲಿ ಒಬ್ಬ ವರ್ತಕನು ಒಂದು ತೋಪಿನಲ್ಲಿ ಒಂದು ದೇವರ ಗುಡಿಯನ್ನು ಕಟ್ಟಬೇಕು ಎಂದುಕೊಂಡನು. ಅದ ಕ್ಕಾಗಿ ಬೇಕಾದ ಕೆಲಸಗಾರರನ್ನೆಲ್ಲ ಕರೆಸಿ ಕೆಲಸವನ್ನು ಆರಂಭಿಸಿ

ದನು. ಅಲ್ಲಿನ ಕೆಲಸಗಾರರೆಲ್ಲ ದಿನವೂ ನಡು ಹಗಲಿನಲ್ಲಿ ಕೆಲಸ ವನ್ನು ಬಿಟ್ಟು ಊಟಕ್ಕೆ ಹೋಗುವರು.



ಒಂದುದಿನ ಅವರು ಹೀಗೆ ಊಟಕ್ಕೆ ಹೋಗಿದ್ದಾಗ ಅಲ್ಲಿಗೆ ಒಂದು ಕಪಿಗಳ ಹಿಂಡು ಬಂತು. ಅಲ್ಲಿ ಒಬ್ಬ ಬಡಗಿಯು ಒಂದು ತೊಲೆಯನ್ನು ಅರ್ಧ ಸೀಳಿ ಅದಕ್ಕೆ ಒಂದು ಬೆಣೆಯನ್ನು ಸಿಕ್ಕಿಸಿ

ಹೋಗಿದ್ದನು. ಆ ಹಿಂಡಿನಲ್ಲಿ ಒಂದು ತುಂಟು ಕಪಿಯು ಅಲ್ಲಿಗೆ ಹೋಗಿ ಆ ಬೆಣೆಯನ್ನು ಕೀಳಲು ಆರಂಭಿಸಿತು. ಬೆಣೆ ಕೀಳುವ ಅವಸರದಲ್ಲಿ ತನ್ನ ಅಂಡಗಳು ಸೀಳಿದ ತೂತಿನಲ್ಲಿ ಸಿಕ್ಕಿ ಕೊಂಡಿರುವು ದನ್ನು ಅದು ನೋಡಲಿಲ್ಲ. ಎರಡು ಕೈಯಿಂದಲೂ ಹಿಡಿದು ಅಲ್ಲಾ ಡಿಸಿ ಅಲ್ಲಾಡಿಸಿ ಆ ಬೆಣೆಯನ್ನೇನೋ ಕಿತ್ತೇ ಬಿಟ್ಟಿತು. ಅದರಿ ಆ ಸೀಳಿದ್ದ ಭಾಗಗಳು ಸಂಧಿಸಿದುವು. ಅಂಡಗಳು ಅಪ್ಪಚ್ಚಿ ಯಾದುವು. ಕಪಿಯು ಕೂಡಲೇ ಪ್ರಾಣಬಿಟ್ಟಿತು.

ಅದರಿಂದ "ಮಾಡಬಾರದ ಕೆಲಸ ಮಾಡಲು ನರನು ಕೇಡನು ಪಡೆವನು" ಎಂದು ಹೇಳಿದೆನು. ಯೋಚಿಸಿ ನೋಡು. ಹೇಗಿ ದ್ದರೂ ಈ ಸಿಂಹವು ತಿಂದು ಬಿಟ್ಟ ಆಹಾರವು ನಮಗೆ ಇದ್ದೇ ಇದೆ. ಆದರಿಂದ ಈ ಕೆಲಸಕ್ಕೆ ಏಕೆ ಕೈಯಿಡಬೇಕು?

ದಮನಕನು ಹೇಳಿತು:- ಹಾಗಾದರೆ ನೀನು ಈ ಅರಸನನ್ನು ಓಲೈಸುವುದು ಕೇವಲ ಆಹಾರಕ್ಕಾಗಿಯೇ ಏನು? ಹಾಗೆಂದು ಕೊಳ್ಳುವುದು ಸರಿಯಲ್ಲ. ಕೇಳಿಲ್ಲವೆ?

ಗೆಳೆಯರಿಗೆ ಉಪಕಾರ ಮಾಡಬಹುದು ॥
ಹಗೆವರಿಗೆ ಅಪಕಾರ ಗೈಯಲಹುದು॥
ಅದರಿಂದ ನರಪನನು ಆಶ್ರಯಿಪರೈ ॥
ಹಿಡಿವರೇ ಹೊಟ್ಟೆಗೆನೆ ಭೂಪತಿಯನು ? ॥ ೧೪ ॥

ಯಾವನ ದೆಸೆಯಿಂ ಬಹುಜನ ಬದುಕುವುದೋ ॥
ಅವನೊಬ್ಬನ ಬದುಕೇ ಬದುಕೈ ॥
ಉಳಿದರು ಬದುಕಿದರೇ ಹೊಟ್ಟೆಯ ತುಂಬವೆ ॥
ಕೊಕ್ಕುಗಳಿಂದಲೆ ಹಕ್ಕಿಗಳುಂ ॥ ೧೫ ॥

ಎಸೆದ ಎಂಜಲ ತಿಂದುಕೊಂಡು | ಬದುಕಿ ಫಲವೇಂ ಕಾಗೆಯಂತೆ ॥ ?

ಕಾಯಬೇಕು ಧೀನರನ್ನು | ಬಾಳಬೇಕು ಶೂರನಾಗಿ ||
ತೋರಬೇಕು ಆರ್ಯಗುಣವ | ಏರಬೇಕು ವಂಶಯಷ್ಟಿ* ||೧೬||

ನದಿಯ ತೀರದಲ್ಲಿ ಹುಟ್ಟಿದ ಹುಲ್ಲೂ ಕೂಡ ನೀರಲ್ಲಿ ಬಿದ್ದವರು ಹತ್ತಿ ಬರಲು ಸಹಾಯ ಮಾಡಿ ತನ್ನ ಜನ್ಮವನ್ನು ಸಫಲ ಮಾಡಿಕೊಳ್ಳುವುದು. ಹುಟ್ಟಿದುದಕ್ಕೆ ಹಾಗೆ ಇತರರಿಗೆ ಸಹಾಯ ಮಾಡದಿದ್ದರೆ ಫಲವೇನು? ಕೇಳು. ತಾನು ಏರುವುದೂ ಬೀಳುವುದೂ ಕಾಣದೆ ಮುಂದೆ ಮುಂದೆ ಹೋಗುತ್ತ, ತನ್ನ ಕೈಯಲ್ಲಾದಷ್ಟು ಜನರ ಸಂತಾಪವನ್ನು ಪರಿಹರಿಸುತ್ತ, ಇರುವ ನೋಡಗಳಂತೆ ಇರುವ ಸಜ್ಜನರು ಲೋಕದಲ್ಲಿ ಬಹಳ ಇರುವುದಿಲ್ಲ. ಹುಟ್ಟಿದುದಕ್ಕೆ ಹಿರಿಯ ತನದ ಬಾಳು ಬಾಳಬೇಕು. ಹಾಗಾಗಬೇಕಾದರೆ ತನಗಿರುವ ಶಕ್ತಿಯನ್ನು ತೋರಿಸಿಕೊಳ್ಳಬೇಕು. ಕಡ್ಡಿಯಲ್ಲಿರುವ ಬೆಂಕಿಯನ್ನು ಗಮನಿಸುವರು ಯಾರು? ಉರಿಯುತ್ತಿರುವ ಬೆಂಕಿಯನ್ನು ಗಮನಿಸದವರು ಯಾರು?''

ಕರಟಕ:— ಆಯಿತು. ನಾವು ಈಗ ದೊರೆಯ ಬಳಿ ಮುಖ್ಯರಲ್ಲ. ಆದರಿಂದ ನಾವು ಈಗ ಈ ದೊರೆಯ ಕೆಲಸದಲ್ಲಿ ಕೈ ಹಾಕಬಾರದು. ಅರಸರ ಬಳಿಯಲ್ಲಿ ಮಾತನಾಡಬೇಕಾದರೆ ಅವನು ಮುಖ್ಯನಾಗಿರಬೇಕು: ಗಣ್ಯನಾಗಿರಬೇಕು. ಅವನ ಮಾತು ನಡೆಯುವಂತಿರಬೇಕು. ಇಲ್ಲವಾದರೆ ಅವನು ನಿಜವಾಗಿಯು ಬುದ್ಧಿಹೀನನು: ಅವನಿಗೆ ತಪ್ಪದೆ ಅಪಮಾನವಾಗುವುದು. ಫಲವಾಗುವ ಮಾತನ್ನೇ ಆಡಬೇಕು. ಬಣ್ಣ ಹಾಕುವುದು ಬಿಳಿಯ ಬಟ್ಟೆಗೇ ಅಲ್ಲವೆ?

---

* ಆರ್ಯಗುಣಗಳು = ಪಾಂಡಿತ್ಯ, ಶೌರ್ಯ, ವಿಭವ, ದಾನ, ದಯಾಧರ್ಮ, ಕರುಣ, ಇವು. ವಂಶಯಷ್ಟಿ = ವಂಶವೆಂಬ ಕೋಲು ಅದನ್ನು ಏರುವುದು ಎಂದರೆ ವಂಶಕ್ಕೆ ಯಶಸ್ಸು ತರುವುದು.

ದಮನಕ:— ಹಾಗಲ್ಲ, ಕರಟಕ, ಅರಸನನ್ನು ಸೇರಿದವನು ಮುಖ್ಯನಲ್ಲದಿದ್ದರೂ ಮುಖ್ಯನಾಗೇ ಆಗುವನು. ಅರಸನನ್ನು ಬಿಟ್ಟವನು ಮುಖ್ಯನಾಗಿದ್ದರೂ ಅ ಮುಖ್ಯನಾಗುವನು. ಕೇಳಿಲ್ಲವೆ?

ಬಳಿಯಲಿರೆ ಭೂಪತಿಯು ಬಾರೆಂಬನು ||
ಕೃಪೆತೋರೆ ವಿದ್ಯೆ ಕುಲ ಬೇಕಿಲ್ಲ ||
ಭೂಮಿಪತಿಯಂಗನೆಯು ಬಳ್ಳಿಗಳು ||
ಹಿಡಿವರೈ ಮಗ್ಗುಲಲ್ಲಿದ್ದವನನೇ || ೧೭ ||

ಆನೆಗಳನ್ನು ಭಲೇ ಭಲೇ ಎಂದು ಹೊಗಳುತ್ತ ಬೂಗಳು ತ್ತಲೇ ಮೇಲೆ ಹತ್ತಿಕೊಳ್ಳುವಂತೆ, ಅರಸನಿಗೆ ಕೈ ಮುಗಿಯುತ್ತ ಮುಗಿಯುತ್ತಲೇ ಹಿಡಿದುಕೊಳ್ಳಬೇಕು. ಚೆನ್ನಾಗಿ ಬದುಕಬೇಕು ಎನ್ನುವವರಿಗೆ, ವಿದ್ಯಾವಂತರಿಗೆ, ಶಿಲ್ಪ, ವಿಕ್ರಮ, ಸೇವೆ, ಇವುಗಳನ್ನು ಬಲ್ಲವರಿಗೆ, ಅರಸನಲ್ಲದೆ ಬೇರೆ ಆಶ್ರಯವುಂಟೆ? ಇಂತಹ ದೊಡ್ಡ ಆಶ್ರಯವು ಬೇಡ ಎನ್ನುವವರಿಗೆ ಭಿಕ್ಷವು ಎಂದೂ ತಪ್ಪಿದ್ದಲ್ಲ. ಅರಸರ ಆಶ್ರಯದಲ್ಲಿ ಅಪಾಯವು ತಪ್ಪಿದ್ದಲ್ಲ ಎಂದರೆ, ಹಾವು, ಹುಲಿ, ಆನೆ, ಸಿಂಹಗಳನ್ನು, ವಶಪಡಿಸಿಕೊಂಡು ಹೇಳಿದ ಹಾಗೆ ಆಡಿಸುವವರಿಗೆ ರಾಜನೆಂಬುದು ಒಂದು ದೊಡ್ಡ ವಿಷಯವೇ? ಆದರಿಂದ ನಾವು ಈಗ ಈ ಕೆಲಸದಲ್ಲಿ ಕೈ ಹಾಕಲೇಬೇಕು.

ಅದನ್ನು ಕೇಳಿ ಕರಟಕನು ಕೇಳಿತು: "ಆಯಿತು. ನೀನು ಅರಸನ ಬಳಿಗೆ ಹೋಗಿ ಏನು ಮಾಡಬೇಕೆಂದಿರುವೆ?"

ದಮನಕ:— ಕೇಳು, ಅರಸನಾದ ಪಿಂಗಲಕನು ಹೆದರಿರುವನು. ಆತನ ಬಳಿಯಿರುವವರೂ ಹೆದರಿರುವರು. ಅದರಿಂದ ಅಲ್ಲಿಗೆ ಹೋಗಿ ಅವರೆಲ್ಲ ಏಕೆ ಹೆದರಿರುವರು ಎಂಬುದನ್ನು ಮೊದಲು ತಿಳಿಯಬೇಕು. ಅನಂತರ ಏನು ಮಾಡುವುದು ಎಂಬುದನ್ನು ಗೊತ್ತು ಮಾಡುವುದು.

ಕರಟಕ:—ಅರಸನಿಗೆ ಭಯವಾಗಿರುವುದೆಂದು ನಿನಗೆ ಹೇಗೆ ತಿಳಿಯಿತು.

ದಮನಕ:-—ಕಾಣಿಸುವುದಿಲ್ಲವೇನು? ಕೇಳಿಲ್ಲವೆ?

ಬಾಯಲ್ಲಿ ಹೇಳಿದರೆ ಪಶುವು ತಿಳಿಯುವುದು ||
ಚುಚ್ಚಿದರೆ ತಿಳಿಯುವುವು ಆನೆ ಕುದುರೆಗಳು ||
ನುಡಿಯಾಗಿ ನುಡಿಯದೆಯು ತಿಳಿವ ಪಂಡಿತನು ||
ಪರರ ಮನವನು ತಿಳಿವುದೇ ಬುದ್ಧಿ ಫಲವು || ೧೮ ||

ಆಕಾರದಿಂದ, ಮುಖದಿಂದ, ನಡೆಗೆಯಿಂದ, ಮಾಡುವ ಕೆಲಸದಿಂದ, ಆಡುವಮಾತಿನಿಂದ, ಕಣ್ಣು ಬಾಯಿಗಳ ಚೇಷ್ಟೆಯಿಂದ, ಪರರ ಮನಸ್ಸಿನಲ್ಲಿರುವುದನ್ನು ಅರಿತುಕೊಳ್ಳಬೇಕು ಎಂದು ಮನುವೂ ಹೇಳಿರುವನು. ಅದರಿಂದ, ಈತನ ಬಳಿಗೆ ಹೋಗಿ ಭಯಪಟ್ಟಿರುವ ಈತನ ಭಯವನ್ನು ತಪ್ಪಿಸಿ, ಇವನನ್ನು ನನ್ನ ವಶ ಮಾಡಿಕೊಂಡು, ನಮ್ಮ ಹಿಂದಿನ ಸಚಿವ ಪದವಿಯನ್ನು ಮತ್ತೆ ಪಡೆಯುವೆನು.

ಕರ:—ನೀನು ಪ್ರಭುಗಳನ್ನು ಸೇವಿಸುವುದು ಹೇಗೆ ಎಂಬುದನ್ನು ಬಲ್ಲೆಯಾ?

ದಮ:—ನನಗೆ ತಿಳಿಯದೆ? ನಾನು ತಂದೆಯ ತೊಡೆಯ ಮೇಲೆ ಕುಳಿತು ಆಡುತ್ತಿದ್ದಾಗಲೇ ನೀತಿ ಶಾಸ್ತ್ರವನ್ನೆಲ್ಲಾ ಕಲಿತೆನು. ಬೇಕಾದರೆ ಕೇಳು:—

ಧರೆಯು ಚಿನ್ನವ ಬೆಳೆವ ಹದವನು | ಅರಿತ ಜಾಣರು ಮೂವರು ||
ಶೂರನೊಬ್ಬನು ವಿದ್ಯೆ ಕಲಿತವ | ಸೇವೆ ಮಾಡಲು ಬಲ್ಲವ || ೧೯ ||

ಪ್ರಭುವು ಒಪ್ಪಿದ ಸೇವೆ ಸೇವೆಯು ||
ಪ್ರಭುವ ಹಿಡಿಯುವ ದಾರಿ ಸೇವೆಯು || ೨೦ ||
ಗುಣವನರಿಯದ ನೃಪಗೆ ಸೇವೆಯೆ ?
ಬಂಜೆ ನೆಲವನ್ನುಳುವದುಂಟೆ ? || ೨೧ ||

ಗುಣವನುಳ್ಳವನ ಸೇವೆ ಮಾಡಲು ॥
ಎಂದಿಗಾದರು ಫಲವು ತಪ್ಪದು ॥ ೨೨ ॥
ಜೂಜು ಹೆಂಡವು ಹೆಂಗಳೆಂಬರ ॥
ದೂರ ಮಾಡಲು ನರಪನೊಲಿವನು ॥ ೨೩ ॥

ನಾನು ಸೇವೆಯ ಮರ್ಮವನ್ನು ಬಲ್ಲೆನು. ಅರಸನನ್ನು ನನ್ನ ಕಡೆಗೆ ತಿರುಗಿಸಿಕೊಂಡು ನಾನು ಹೇಳಿದಂತೆ ಕೇಳುವ ಹಾಗೆ ಮಾಡಿಕೊಳ್ಳುವೆನು. ಸಂಶಯ ಪಡಬೇಡ.

ಕರ:—ಆಯಿತು. ನೀನು ಅಲ್ಲಿಗೆ ಹೋಗಿ ಆತನೊಡನೆ ಏನು ಹೇಳುವೆ?

ದಮ:—ಕೇಳು, ಚೆನ್ನಾಗಿಬೆಳೆದ ಬೆಳೆಯಿಂದ ಕಾಳನ್ನು ತೆಗೆದು ಕೊಂಡು, ಅದರಿಂದ ಮುಂದಿನ ಬೆಳೆಯನ್ನು ತೆಗೆಯುವುದಿಲ್ಲವೆ? ಹಾಗೆಯೆ, ಮಾತನಾಡುತ್ತ ಆಡುತ್ತ ಮಾತಿಗೆ ಮಾತು ಜೋಡಿಸಿ ಕೊಂಡು ಹೋಗುವುದು ಬುದ್ಧಿವಂತಿಕೆಯು. ಕೆಲವರಿಗೆ ಮಾತು ಆಡುವುದಕ್ಕೆ ಬರುತ್ತದೆ ಆದರೆ ಏನು ಆಡಬೇಕೋ ತಿಳಿದಿರುವುದಿಲ್ಲ: ಇನ್ನು ಕೆಲವರು ಏನು ಆಡಬೇಕು ಎಂಬುದನ್ನು ಬಲ್ಲರು. ಆದರೆಹೇಗೆ ಆಡಬೇಕೋ ತಿಳಿಯರು. ಯಾರು ಏನು ಆಡಬೇಕು? ಹೇಗೆ ಆಡ ಬೇಕು ಎಂಬ ಎರಡನ್ನೂ ಬಲ್ಲರೋ ಅವರು ಗೆದ್ದೇ ಗೆಲ್ಲುವರು. ಅಲ್ಲದೆ ಅರಸರ ಬಳಿಯಲ್ಲಿ ಇರುವವರು ಅಕಾಲದಲ್ಲಿ ಮಾತನಾಡಬಾರದು. ಯಾವ ಕಾಲದಲ್ಲಿ ಯಾವ ಮಾತನಾಡಬೇಕು ಎಂಬುದೇ ಒಂದು ಬುದ್ಧಿವಂತಿಕೆ. ಅದನ್ನು ನಾನು ನಮ್ಮ ತಂದೆಯಿಂದ ಕಲಿತಿರುವೆನು.

ಕರ:—ಸೋದರ, ಅರಸುಗಳು ಎಂದರೆ ಸಾಮಾನ್ಯರಲ್ಲ ಅವರು ಪರ್ವತಗಳ ಹಾಗೆ, ಕಠಿಣರು, ದುಷ್ಟರಿಗೆ ಆಶ್ರಯರಾದವರು, ಸುಲಭವಾಗಿ ಸಿಕ್ಕುವರಲ್ಲ. ಅಷ್ಟೆ ಅಲ್ಲ ರಾಜರಿಗೆ ಹಾವಿನಹಾಗೆ ಎರಡು ನಾಲಗೆ. ಅವರಿಗೆ ಕೊಂಚ ಕೋಪಬಂದರೆ ಬೆಂಕಿಗಳಂತೆ ಸುಟ್ಟು ಬಿಡುವರು ಅದನ್ನು ಮರೆಯಬೇಡ.

ದಮ:—ನಾನು ಅದನ್ನೂ ಬಲ್ಲೆನು, ಆದರೂ ಅರಸನನ್ನು ಒಲಿಸಿಕೊಳ್ಳುವುದು ಸುಲಭ. ಅರಸನು ಕೋಪಿಸಿಕೊಂಡರೆ ಹೊಗಳುವುದು. ಆತನಿಗೆ ಯಾರಮೇಲೆ ಪ್ರೇಮವಿದ್ದರೆ ಅವರನ್ನು ಸೇರುವುದು. ಆತನು ಯಾರನ್ನು ದ್ವೇಷಿಸುವನೋ ಅವರನ್ನು ದೂರ ಇಡುವುದು. ಅವನು ಕೊಟ್ಟಿದನ್ನು ಹೊಗಳುವುದು. ಇದಿಷ್ಟು ಮಾಡಿದರೆ, ಯಾವ ಅರಸೇ ಆಗಲಿ ಹೇಳದೆ ಕೇಳದೆ ವಶನಾಗುವನು.

ಕರ:—ಹೀಗಿದ್ದರೆ ನೀನು ಅರಸನ ಆಸ್ಥಾನದಲ್ಲಿ ಬದುಕುವೆ. ಹೋಗಿ ಬಾ. ನಿನಗೆ ಒಳ್ಳೆಯದಾಗಲಿ.

ಹೀಗೆ ಅಣ್ಣನ ಆಶೀರ್ವಾದವನ್ನು ಪಡೆದುಕೊಂಡು ದಮನಕನು ಪಿಂಗಲಕನ ಬಳಿಗೆ ಬಂದನು. ಅದು ಬರುತ್ತಿರುವುದನ್ನು ಕಂಡು ಆ ಸಿಂಹವು ಬಾಗಿಲಲ್ಲಿದ್ದವನನ್ನು ಕರೆದು, "ಬರುತ್ತಿರುವವನು ನಮ್ಮ ಹಿಂದಿನ ಮಂತ್ರಿಯ ಮಗನಾದ ದಮನಕನು. ಅವನನ್ನು ತಡೆಯಬೇಡಿ" ಎಂದು ಅಪ್ಪಣೆ ಮಾಡಿದನು. ದಮನಕನು ಒಳಕ್ಕೆ ಹೋಗಿ ಅರಸನಿಗೆ ವಂದನೆಯನ್ನು ಮಾಡಿ, ಆತನ ಅಪ್ಪಣೆಯನ್ನು ಪಡೆದು ತನಗೆ ಗೊತ್ತಾಗಿದ್ದ ಆಸನದಲ್ಲಿ ಕುಳಿತುಕೊಂಡನು. ಪಿಂಗಲಕನು ವಜ್ರದಂತಿರುವ ಉಗುರುಗಳಿಂದ ಅಲಂಕಾರವಾಗಿರುವ ತನ್ನ ಬಲಗೈಯನ್ನು ದಮನಕನ ಭುಜದ ಮೇಲಿಟ್ಟು ಗೌರವಿಸಿ "ಚೆನ್ನಾಗಿದ್ದೀಯಾ? ಏಕೆ? ನಿನ್ನನ್ನು ನೋಡಿ ಬಹು ದಿನವಾಯಿತಲ್ಲ?" ಎಂದು ಕೇಳಿದನು.

ದಮನಕನು ಹೇಳಿತು:—"ದೇವರಿಗೆ ನಮ್ಮಿಂದ ಆಗಬೇಕಾದ ಕೆಲಸವು ಏನೂ ಇರಲಿಲ್ಲ. ಅಲ್ಲದೆ, ರಾಜರಾದವರಿಗೆ ಉತ್ತಮರು, ಮಧ್ಯಮರು, ಅಧಮರು, ಎಲ್ಲರಿಂದಲೂ ಆಗಬೇಕಾದ ಕಾರ್ಯಗಳು ಇದ್ದೇ ಇರುತ್ತವೆಯಾಗಿ, ದೇವರ ಅಪ್ಪಣೆಯಾದಾಗ ಬಂದರಾಯಿತು ಎಂದು ದೂರದಲ್ಲಿಯೇ ಇದ್ದೆನು. ಜೊತೆಗೆ, ದೇವ, ನಾವು ಬಹು

ಕಾಲದಿಂದ ತಮ್ಮಲ್ಲಿ ಮಂತ್ರಿಗಳಾಗಿದ್ದವರು. ತಮ್ಮ ಹಿಂದೆ ಹಿಂದೆಯೇ ಬರುವವರು. ಆದರೂ ನಮ್ಮ ಪದವಿಯು ನಮಗೆ ಸಿಕ್ಕದೆ ಹೋದರೆ ನಾವೆಂತು ಸಮೀಪದಲ್ಲಿ ಕಾಣಿಸಿಕೊಳ್ಳುವುದು? ನಾವು ಎಲ್ಲಿರಬೇಕೋ ಅಲ್ಲಿ ನಮ್ಮನ್ನು ಇಡದಿರುವುದು ನಮ್ಮ ದೋಷವೆ? ದೇವ, ಕುಂದಣದಲ್ಲಿ ಕಟ್ಟಬೇಕಾದ ರತ್ನವನ್ನು ಸೀಸದಲ್ಲಿ ಬೆಸೆದರೆ ರತ್ನವು ಅಳುವುದೂ ಇಲ್ಲ: ಪ್ರಕಾಶಿಸುವುದೂ ಇಲ್ಲ. ಆದರೆ ಹಾಗೆ ಮಾಡುವುದು ರತ್ನವನ್ನು ಕಟ್ಟಿಸಿದವನಿಗೆ ಅಪಯಶಸ್ಸು. ಆದಂತೆ "ಸ್ವಾಮಿಯು ನೋಡಿ ಬಹು ದಿನವಾಯಿತು." ಎಂದು ಅಪ್ಪಣೆ ಕೊಡಿಸೋಣವಾಯಿತು. ಕೇಳಬೇಕು. ಎಡಗೈ, ಬಲಗೈ, ಗಳಿಗೆ ಭೇದವಿಲ್ಲ ಎಂದ ಮೇಲೆ ಆ ಸ್ಥಳದಲ್ಲಿ ಯಾರು ತಾನೇ ಇರಬಹುದು?

ಗಾಜನ್ನು ಮಣಿಯೆಂದು ಮಣಿಯ ಗಾಜೆಂಬ ನಾಥನಲ್ಲಿ ||
ಭೃತ್ಯನಿರಬಹುದೇನು ಮಾನ ಬೇಕೆಂಬನಾಗಿರಲು || ೨೪ ||
ಕೊಳ್ಳುವರಿಲ್ಲದ ದೇಶದೊಳು | ಕಡಲಿನ ರತ್ನವ ಮಾರುವರೆ ||
ಶಶಿಕಾಂತದ ಮಣಿ ಮಾರುವರು | ಮೂರೇ ಕವಡೆಗೆ ಗೋವಳರು* ||೨೫||

ದೇವ, ತಲೆಯ ಮೇಲೆಯೇ ಇದ್ದರೂ ಕೂದಲುಕೂಡ ಸ್ನೇಹ *1 ದಿಂದ ಕೂಡದಿದ್ದರೆ ಕೆದರುವುದು. ಇನ್ನು ಸೇವಕರ ಮಾತೇನು? ಒಂದು ವೇಳೆ, ಏನು ಮಹಾ? ಇದೂ ಒಂದು ನರಿ ಎಂದು ಸ್ವಾಮಿಯು ನಮ್ಮನ್ನು ತಿರಸ್ಕಾರ ಮಾಡಿದ್ದರೆ, ಅದೂ ಸರಿಯಲ್ಲ ಪ್ರಭು, ಕೇಳಿಲ್ಲವೆ? ರೇಶಿಮೆಯು ಹುಟ್ಟುವದು ಹುಳುವಿನಿಂದ ಚಿನ್ನವು ಸಿಕ್ಕುವುದು ಕಲ್ಲಿನಲ್ಲಿ. ಹುಲ್ಲು ಆಗುವುದು ಹಸುವಿನ ರೋಮದಿಂದ. ಕೆಸರಿನಲ್ಲಿ ತಾವರೆಯು, ಉದಯಿಸುವುದು. ಚಂದ್ರನು ಕಡಲಿನ ಮಗನು. ಸಗಣಿಯಿಂದ ಇಂದೀವರವೆಂಬ ಮಣಿಯಾಗುವುದು. ಬೆಂಕಿಯು ಕಟ್ಟಿಗೆಯಿಂದ ಆಗುವುದು.

* ಗೋವಳರು = ದನಕಾಯುವವರು.

*1 ಸ್ನೇಹ = ವಿಶ್ವಾಸ, ಎಣ್ಣೆ.

ಹಾವಿನ ಹೆಡೆಯಲ್ಲಿ ಮಣಿಯು ಸಿಕ್ಕುವುದು. ಗೋವಿನ ಪಿತ್ತದಿಂದ ರೋಚನವು ಸಿಕ್ಕುವುದು. ಪ್ರತಿಯೊಬ್ಬರೂ ತಮ್ಮ ತಮ್ಮ ಗುಣಗಳಿಂದ ಪೂಜ್ಯರಾಗುವರೇ ಹೊರತು ಜನ್ಮದಿಂದಲ್ಲ. ಇಲಿಯು ಮನೆಯಲ್ಲಿ ಹುಟ್ಟಿದರೂ ಅಪಕಾರ ಮಾಡುವುದೆಂದು ಕೊಲ್ಲುವರು. ಎಲ್ಲಿಯೋ ಹುಟ್ಟಿದ್ದರೂ ಬೆಕ್ಕನ್ನು ಉಪಕಾರಿಯೆಂದು ತಿಂಡಿ ತೀರ್ಥ ಕೊಟ್ಟು ಕಾಪಾಡುವರು.''

ಪಿಂಗಲಕನು ಅದನ್ನು ಕೇಳಿ, ಹೇಳಿತು: '' ಆಗಲಿ ನೀನು ಸಮರ್ಥನೇ ಆಗು, ಅಸಮರ್ಥನೇ ಆಗು, ನಮ್ಮ ಹಳೆಯ ಸೇವಕನು. ಮಂತ್ರಿ ಪುತ್ರನು. ಅದರಿಂದ ಏನು ಹೇಳಬೇಕಾದರೂ ಧೈರ್ಯವಾಗಿ ಹೇಳು. ''

ದಮನಕನು ಹೇಳಿತು: '' ಹೌದು ಮಹಾಸ್ವಾಮಿ, ಹೇಳಬೇಕಾದುದು ಇದೆ. ಎಂತಹ ಸಣ್ಣ ಕೆಲಸವಾದರೂ ಅರಸರಿಗೆ ಸಭಾಮಧ್ಯದಲ್ಲಿ ತಿಳಿಸಬಾರದು ಎಂದು ಬೃಹಸ್ಪತಿಯು ಹೇಳುವನು. ಅಲ್ಲದೆ,

ಮಾತು ಕಿವಿಗಳ ಆರ ಮುಟ್ಟಲು ಕೆಡುವುದು ||
ನಾಲ್ಕು ಕಿವಿಗಳ ಮಾತು ನೆಟ್ಟನೆ ನಿಲುವುದು ||
ಅದರಿಂ ಆರ ಬಿಟ್ಟು ನಾಲ್ಕನು ಹಿಡಿ ಜಾಣ || ೨೬ ||

ಎಂದು ಹಿರಿಯರು ಹೇಳುವರು.'' ಎಂದು ಕೈ ಮುಗಿದನು.

ಸಿಂಹವು ಎಲ್ಲರನ್ನೂ ಕಳುಹಿಸಿ ತಾನೊಬ್ಬನೇ ಆಗಲು, ದಮನಕನು ಕೈ ಮುಗಿದುಕೊಂಡು '' ಪ್ರಭು, ನೀರು ಕುಡಿಯುವುದಕ್ಕೆ ಬಂದವರು ನೀರು ಕುಡಿಯದೆಯೇ ಇಲ್ಲಿಯೇ ಏಕೆ ನಿಂತಿರಿ?''ಎಂದು ಕೇಳಿದನು. ಪಿಂಗಲಕನು ಅದನ್ನು ಮನಸ್ಸಿಗೆ ಹಾಕಿಕೊಳ್ಳದೆ, ''ಏನೋ ಕಾರಣವಿತ್ತು'' ಎನ್ನಲು, ನರಿಯು ಮತ್ತೆ'' ದೇವ, ಅದು ರಹಸ್ಯವಾದರೆ ಹಾಗೇ ಇರಲಿ '' ಎಂದು ಸುಮ್ಮನಾಯಿತು. ಆಗ

ಸಿಂಹವು " ಈ ಮಂತ್ರಿಪುತ್ರನು ಯೋಗ್ಯನಂತಿದೆ, ನನ್ನ ಮನಸ್ಸಿನಲ್ಲಿರುವುದನ್ನು ಇವನಿಗೆ ಹೇಳೋಣ ' ಸ್ನೇಹಿತನಿಗೆ ಗುಣವಂತನಾದ ಭೃತ್ಯನಿಗೆ, ಪ್ರಿಯಳಾದ ಹೆಂಡತಿಗೆ, ತನಗೆ ಬೇಕಾದ ಒಡೆಯನಿಗೆ ತನ್ನ ದುಃಖವನ್ನು ತಿಳಿಸಿದವನು ನೆಮ್ಮದಿಯನ್ನು ಪಡೆಯುವನು." ಎಂದು ಹೇಳುತ್ತಾರೆ ಅದರಿಂದ ಇವನಿಗೆ ತಿಳಿಸಬೇಕು. " ಎಂದುಕೊಂಡು, "ದಮನಕ, ನೀನು ದೂರದಿಂದ ಬಂದ ಆ ಮಹಾಶಬ್ದವನ್ನು ಕೇಳಿದೆಯಲ್ಲವೆ? " ಎಂದು ಕೇಳಿತು.

" ಕೇಳಿದೆ. ಪ್ರಭು."

" ನಾನು ಈ ಕಾಡನ್ನು ಬಿಟ್ಟು ಹೊರಟು ಹೋಗಬೇಕು ಎಂದಿರುವೆನು."

" ಏಕೆ?"

" ಈ ಮಹಾಶಬ್ದವನ್ನು ಮಾಡುವ ಅಪೂರ್ವ ಪ್ರಾಣಿಯೊಂದು ನಮ್ಮ ಕಾಡಿಗೆ ಬಂದಿದೆ. ಅದಕ್ಕೆ ಶಬ್ದಕ್ಕೆ ತಕ್ಕಂತೆ ಪರಾಕ್ರಮವೂ ಇರಬೇಕು.

" ಶಬ್ದವನ್ನು ಕೇಳಿದ ಮಾತ್ರದಿಂದಲೇ ಮಹಾ ಸ್ವಾಮಿಯು ಹೆದರಿಕೊಳ್ಳುವುದು ತಕ್ಕುದಲ್ಲ ಅಷ್ಟೇ ಅಲ್ಲದೆ, ಕೇವಲ ಇದಿಷ್ಟಕ್ಕಾಗಿ ಬಹುದಿನದಿಂದ ತಮ್ಮದಾಗಿರುವ ಅರಣ್ಯವನ್ನು ಬಿಡುವುದೂ ಯುಕ್ತವಲ್ಲ. ಎಂತಹ ಆಪತ್ತು ಬಂದರೂ ಅರಸುಗಳು ಹೆದರಕೂಡದು ಅಲ್ಲದೆ, ಪ್ರಭುಗಳು ಕೇಳಿಲ್ಲವೆ?

" ಒಳಹೊಕ್ಕು ನೋಡಿದರೆ । ಕಟ್ಟಿಗೆಯು ಚಕ್ಕಳ "

" ಹಾಗೆಂದರೇನು ?"

ನರಿಯು ಹೇಳಿತು:—



## ಹೆದರಿದ ನರಿಯ ಕಥೆ.

ಗೋಮಾಯುವೆಂಬ ಒಂದಾನೊಂದು ನರಿಯಿತ್ತು. ಅದು ಅಲ್ಲಿ ಇಲ್ಲಿ ಹೊಟ್ಟೆಗಾಗಿ ಅಲೆಯುತ್ತಾ ಒಂದು ಯುದ್ಧಭೂಮಿಗೆ ಬಂತು. ಅಲ್ಲಿ ಹೊಟ್ಟೆತುಂಬುವ ಯೋಚನೆ ಮಾಡುತ್ತಿರಲು, ಗಾಳಿಗೆ ಆಡಿದ ಮರದ ಕೊನೆಗಳು ತಗಲಿ ಅಲ್ಲಿದ್ದ ಭೇರಿಯೊಂದು ಭಾರಿ ಶಬ್ದ ಮಾಡಿತು. ಅದನ್ನು ಕೇಳಿ ಅದಕ್ಕೆ ದಿಗಿಲಾಗಿ ಕೆಟ್ಟೆನಲ್ಲಾ ಎನ್ನಿಸಿತು. ಓಡಿ ಹೋಗೋಣ ಎನ್ನಿಸಿತು. ಆದರೂ "ವಿಮರ್ಶೆ ಮಾಡೋಣ ಬರಿ ಬರಿದೆ ಹೆದರುವುದು ಸರಿಯಲ್ಲ" ಎನ್ನಿಸಿ ಅಲ್ಲಿಯೇ ನಿಂತು ನೋಡಿತು. ಮತ್ತೆ ಗಾಳಿ ಬರುವವರೆಗೂ ಯಾವಸದ್ದೂ ಆಗ ಲಿಲ್ಲ. ಗಾಳಿಯು ಬರುತ್ತಲೂ ಕೊಂಬೆಗಳು ತಗಲಿ ಭೇರಿಯ ಸದ್ದಾ ಯಿತು. ಮೆಲ್ಲ ಮೆಲ್ಲಗೆ ಆ ಭೇರಿಯ ಹತ್ತಿರಹೋಗಿ ತಾನು ಒಂದು ಸಲ ಹೊಡೆಯಿತು. ಹೀಗೆ ಸದ್ದಿನ ಭೀತಿಯು ತಪ್ಪಿ " ಇದು ಒಂದು ಕೊಬ್ಬಿದ ಪ್ರಾಣಿಯಿರಬೇಕು. ಇದರ ತುಂಬಾ ಕೊಬ್ಬೇ ಇರಬೇಕು. ಒಳ್ಳೆಯ ಊಟ ಸಿಕ್ಕಿತು. ಎಂದುಕೊಂಡು ಅದನ್ನು ಆನಂದದಿಂದ ಸೀಳಿ ಅದರ ಹೊಟ್ಟೆಯನ್ನು ಹೊಕ್ಕಿತು. ಒಳಗೆ ಹೋಗಿ ನೋಡಿ ದರೆ ಬರಿಯ ಚಕ್ಕಳ ಕಟ್ಟಿಗೆ ಅಲ್ಲದೆ ಅಲ್ಲಿ ಇನ್ನು ಏನೂ ಇರಲಿಲ್ಲ ಹಾಗೆ ಆಗಬಾರದು. ಸ್ವಾಮಿಯು ಬರಿಯ ಸದ್ದಿಗೆ ಹೆದರುವುದು ಎಂದರೇನು?"

ಪಿಂಗಲಕನು ಹೇಳಿದನು "ಹಾಗಲ್ಲ. ನಾನೊಬ್ಬನಲ್ಲ, ನಮ್ಮವ ರೆಲ್ಲರೂ ಹೆದರಿರುವರು ನೋಡು."

" ಪ್ರಭು, ಇದು ಅವರ ದೋಷವಲ್ಲ. ಆಳುಗಳೆಲ್ಲ ಅರಸರಿಗೆ ತಕ್ಕಂತೆ ಇರುವರು.

ಅಶ್ವವು ಶಸ್ತ್ರವು ಶಾಸ್ತ್ರವು ವೀಣೆಯು ||
ಭೃತ್ಯರು ವಾಣಿಯು ನಾರಿಯು ನೋಡಲು ||
ಯೋಗ್ಯರಯೋಗ್ಯರು ಆಗುವುದಾಶ್ರಯದಿಂ ||
ಅದರಿಂದವರಂಜಲು ನೃಪ ದೋಷ || ೨೭ ||

ಆದರಿಂದ, ತಾವು ಧೈರ್ಯವಾಗಿ ಇಲ್ಲಿಯೇ ಇರಿ. ನಾನು ಹೋಗಿ ಈ ಮಹಾಶಬ್ದವನ್ನು ಮಾಡಿದ ಪ್ರಾಣಿ ಯಾವುದು ಎಂಬುದನ್ನು ತಿಳಿದು ಬರುವೆನು.''

" ಹಾಗಾದರೆ ನೀನು ಆ ಪ್ರಾಣಿಯ ಬಳಿ ಹೋಗುವೆಯಾ?''

" ಅರಸನ ಅಪ್ಪಣೆಯಾದರೆ ಭೃತ್ಯನು ಏನನ್ನು ತಾನೇ ಮಾಡುವುದಿಲ್ಲ. ಹಾವಿನ ಬಾಯಾಗಲಿ, ಸಮುದ್ರವೇ ಆಗಲಿ ಹೊಕ್ಕೇ ಹೊಗುವನು.''

" ಹಾಗಾದರೆ ಹೋಗಿ ಬಾ ನಿನಗೆ ಒಳ್ಳೆಯದಾಗಲಿ.''

ದಮನಕನು ಅರಸನಿಗೆ ನಮಸ್ಕಾರಮಾಡಿ, ಆ ಶಬ್ದವನ್ನು ಹಿಡಿದು ಸಂಜೀವಕನು ಇದ್ದ ತಾವಿಗೆ ಹೋದನು. ನರಿಯು ಅತ್ತ ಕಡೆ ಹೋದಮೇಲೆ, ಇತ್ತ ಭಯದಿಂದ ತಲ್ಲಣಿಸುತ್ತಿದ್ದ ಸಿಂಹವು ಯೋಚಿಸಿತು:— ನಾನು ಮಾಡಿದ್ದು ಸರಿಹೋಗಲಿಲ್ಲ. ಅವನಿಗೆ ನನ್ನ ಮನಸ್ಸಿನಲ್ಲಿದ್ದುದನ್ನು ಹೇಳಬಾರದಾಗಿತ್ತು. ಈ ದಮನಕನು ಎರಡು ಕಡೆಯೂ ಸಂಬಳ ತೆಗೆದುಕೊಳ್ಳುವ ಉಭಯ ವೇತನನಾಗಿ ನನ್ನ ಮೇಲೆ ದ್ವೇಷವನ್ನು ತೀರಿಸಿಕೊಂಡರೆ ಏನು ಗತಿ? ಇವನಿಗೆ ತಾನು ಅಧಿಕಾರವನ್ನು ಕಳೆದುಕೊಂಡೆನೆಂಬ ಹೊಟ್ಟೆಯುರಿ ಇರುವುದು. ಇಂಥವರು ತಪ್ಪದೆ ತಮ್ಮ ಹಿಂದಿನ ಅರಸರ ನಾಶಕ್ಕೆ ಯತ್ನಿಸುವರು ಆದರಿಂದ, ಏನಾದರೂ ಆಗಲಿ. ಮತ್ತೊಂದು ಸ್ಥಾನದಲ್ಲಿದ್ದು ಇವನು ಏನು ಮಾಡುವನೋ ನೋಡುವೆನು. ಈ ನರಿಯು ಆ ಶತ್ರುವನ್ನು



ಕರೆದುಕೊಂಡು ಬಂದು ನನ್ನ ಮೇಲೆ ಬೀಳಿಸಿ ಕೊಲ್ಲಿಸಿದರೂ ಕೊಲ್ಲಿಸೀತು '' ಎಂದು ಇನ್ನೊಂದು ಕಡೆ ಹೋಗಿ ದಮನಕನ ಹಾದಿ ಕಾಯುತ್ತಿತ್ತು.

ದಮನಕನು ಹೋಗಿ ಸಂಜೀವಕನನ್ನು ಕಂಡು ಇದು ಗೂಳಿ

ಎಂದು ತಿಳಿದು ಸಂತೋಷಪಟ್ಟುಕೊಂಡು ಹಿಂತಿರುಗಿ ಪಿಂಗಲಕನ ಬಳಿಗೆ ಬರುತ್ತಾ "ಒಳ್ಳೆಯದಾಯಿತು. ಇವರಿಬ್ಬರಿಗೂ ಸ್ನೇಹವಾಡಿ ಸುವ ಕಾರಣದಿಂದಲೇ ಪಿಂಗಲಕನು ವಶನಾಗುವನು. ಅರಸನು ತನಗೆ ವ್ಯಸನ ಬಂದಾಗಲೇ ಇನ್ನೊಬ್ಬರ ಮಾತು ಕೇಳುವುದು. ಆಪತ್ತಿಗೆ ಸಿಕ್ಕಿರುವ ರಾಜನು ಮಂತ್ರಿಗಳನ್ನು ಗೌರವಿಸುವನು. ಆರೋಗ್ಯ ವಾಗಿರುವವರಿಗೆ ವೈದ್ಯನಿಂದ ಏನಾಗಬೇಕು? ಹಾಗೆಯೇ ಇದೂ!" ಎಂದು ಮುಂತಾಗಿ ಯೋಚಿಸಿಕೊಂಡು ಬಂದನು.

ಪಿಂಗಲಕನು ಬರುತ್ತಿರುವ ದಮನಕನನ್ನು ಕಂಡು ತನ್ನ ಮನಸ್ಸಿನ ಭಯವನ್ನು ಬಹುಕಷ್ಟದಿಂದ ಮುಚ್ಚಿಕೊಳ್ಳುತ್ತಾ, ಸಮೀ ಪಕ್ಕೆ ಬಂದು ನಮಸ್ಕಾರಮಾಡಿದ ಅವನನ್ನು ಹೋದ ಕೆಲಸವೇನಾ ಯಿತು? ಎಂದು ವಿಚಾರಿಸಿದನು. ಆ ಪ್ರಾಣಿಯನ್ನು ಕಂಡು ಬಂದೆ ನೆಂದರೂ ಪಿಂಗಲಕನು ನಂಬಲಿಲ್ಲ. ನರಿಯು ಆಣೆಯನ್ನು ಇಟ್ಟು ಕೊಂಡಮೇಲೆ," ಇದ್ದರೂ ಇರಬಹುದು. ದೊಡ್ಡವರು ಯಾರೂ ಸಣ್ಣವರ ಮೇಲೆ ಕೈ ಮಾಡುವುದಿಲ್ಲ. ಏಕೆಂದರೆ.

ಬಲವಂತ ರೇಗುವನು ಸಮ ಬಲರೊಳು ||
ಎದುರಿಸುವ ಹೆಮ್ಮರವ ಕಿತ್ತೆಸೆಯುವ ॥
ಬರುಗಾಳಿ ಬಗ್ಗಿ ಮಲಗುತ ನಮಿಸಿದ ॥
ತೃಣರಾಶಿಯನ್ನೇನು ಕೆಡಿಸುವುದೇ ? ||
ನೆತ್ತಿಯಿಂದಳಿವ ಮದಜಲಕೆ ಮುಸುಕಿ ||
ದುಂಬಿಗಳು ಕಾಲಿಂದ ತುಳಿಯುತಿರೆಯು || ೩೮ ||

ಕೋಪಗೊಳ್ಳುವುದು ಮುಂಟೆ ಮದ್ದಾನೆ? ಎಂದಿತು.

ನರಿಯು ಹೇಳಿತು:— ತಾವು ಹೇಳಿದಂತೆಯೇ ಆತನು ಮಹಾ ತ್ಮನು. ನಾವು ಅಲ್ಪರು. ಆಗಲಿ. ಆದರೂ ಸ್ವಾಮಿಯ ಅಪ್ಪಣೆಯಾದರೆ ಆ ಮಹಾತ್ಮನನ್ನು ತಂದು ತಮ್ಮ ಭೃತ್ಯನನ್ನು ಮಾಡುವೆನು."

ಆ ಮಾತು ಕೇಳಿ ಸಿಂಹಕ್ಕೆ ಆಶ್ಚರ್ಯವಾಯಿತು:" ನಿಜವಾಗಿಯೂ!" ಎಂದಿತು. ನರಿಯು ವಿನಯವಾಗಿ ಹೇಳಿತು: "ಸ್ವಾಮಿ, ಬುದ್ಧಿಗೆ ಅಸಾಧ್ಯವಾದುದು ಯಾವುದೂ ಇಲ್ಲ. ಬುದ್ಧಿಯಿಂದ ಸಾಧ್ಯವಾಗುವುದನ್ನು ಶಸ್ತ್ರಗಳಿಂದ ಆನೆಗಳಿಂದ ಕುದುರೆಗಳಿಂದ ಸೇನೆಗಳಿಂದ ಸಾಧಿಸುವುದಕ್ಕಾಗುವುದಿಲ್ಲ.

" ಇದು ನಿಜವಾದರೆ, ನಿನಗೇ ಮಂತ್ರಿಪದವಿಯು ತಕ್ಕುದು. ಇನ್ನು ಮುಂದೆ ನಾವು ನಡೆಸುವ ಶಿಕ್ಷೆರಕ್ಷೆಗಳೆಲ್ಲವೂ ನಿನ್ನ ಮೂಲಕವಾಗಿಯೇ ನಡೆಯುವುವು."

ದಮನಕನು ಓಡೋಡಿ-ಸಂಜೀವಕನ ಬಳಿಗೆ ಹೋಯಿತು: "ಏ ಪೋಲೀ ಬಸವ, ಸ್ವಾಮಿಯಾದ ಪಿಂಗಲಕನ ಅಪ್ಪಣೆಯಾಗಿದೆ ಹೊರಟು ಬಾ. ಏನು? ಅಂಕೆಸಂಕೆಗಳಿಲ್ಲದೆ ಗುಟ್ಟರಿ ಹಾಕಿದ್ದೂ ಹಾಕಿದ್ದೇ! ಎಂದಿತು.ಅದನ್ನು ಕೇಳಿಬಸವನು"ಅಯ್ಯೋ,ಪಿಂಗಳಕನು ಯಾರು?"ಎಂದು ಕೇಳಲು"ಪ್ರಭುವಾದ ಪಿಂಗಲಕನು ನಿನಗೆಗೊತ್ತಿಲ್ಲವೆ? ಮೊದಲು ಆತನ ಅಪ್ಪಣೆಯಂತೆ ನಡೆ ಫಲದಿಂದ ನಿನಗೇತಿಳಿಯುವುದು. ನೋಡು, ಆ ಆಲದ ಮರದ ಕೆಳಗೆ ಮೃಗಗಳ ಪರಿವಾರವನ್ನು ಸೇರಿಸಿಕೊಂಡು ಕುಳಿತಿರುವವನೇ ಪಿಂಗಲಕನು. ಆತನು, ಈ ವನ ಭೂಮಿಗೆಲ್ಲ ಅರಸನು." ಎಂದು ಹೇಳಿತು.

ಹಾಗೆನ್ನುತ್ತಲೂ ಸಂಜೀವಕನಿಗೆ ಪ್ರಾಣವೇ ಹಾರಿ ಹೋದ ಹಾಗಾಯಿತು. ಆ ದುಃಖದಿಂದ ನರಿಗೆ ಹೇಳಿಕೊಂಡಿತು: "ಅಯ್ಯಾ ನೀನು ಒಳ್ಳೆಯವನು, ಚೆನ್ನಾಗಿ ಮಾತನಾಡಬಲ್ಲವನು ಎಂದು ತೋರುತ್ತದೆ. ನಾನು ಅಲ್ಲಿಗೆ ಬರಲೇಬೇಕು ಎಂಬು ನಿನ್ನ ಮನಸ್ಸಾದರೆ, ಅಲ್ಲಿಂದ ನನಗೆ ಯಾವ ಭಯವೂ ಇಲ್ಲದಂತೆ ನನಗೆ ವರವನ್ನು ಕೊಡಿಸಬೇಕು."

"ನೀನು ಹೇಳಿದ್ದು ಸರಿ. ಇದೇ ನೀತಿಯು, ಕಡಲಿನವರೆಗೂ ಹಬ್ಬಿ, ಪರ್ವತದಕೋಡುಗಲ್ಲಿನವರೆಗೂ ಎದ್ದಿರುವ ಭೂಮಿಯಅಗಲ ಎತ್ತರ ಕಾಣಬಹುದು. ಆದರೆ ಭೂಪತಿಗಳ ಚಿತ್ತದ ಆಳ ಕೊನೆ ಕಾಣುವುದಕ್ಕಾಗುವುದಿಲ್ಲ. ಆದರಿಂದ ನೀನು ಇಲ್ಲಿಯೇ ಇರು. ನಾನು ಹೋಗಿ, ಆತನನ್ನುನೋಡಿಕೊಂಡು ಬರುವೆನು.'' ಎಂದು ನರಿಯು ಮತ್ತೆ ಸಿಂಹದ ಬಳಿಗೆ ಹೋಯಿತು.

ಸಿಂಹನನ್ನು ಕಂಡು ನರಿಯು "ಸ್ವಾಮಿ, ಅದು ಸಾಮಾನ್ಯ ವಾದ ಈ ಲೋಕದ ಪ್ರಾಣಿಯಲ್ಲ. ಅದು ಸಾಕ್ಷಾತ್ ಮಹೇಶ್ವರನ ವಾಹನವಾದ ವೃಷಭವು. ನಾನು ಕೇಳಿದುದಕ್ಕೆ 'ಮಹೇಶ್ವರನು ಸಂತೋಷದಿಂದ ಈ ಕಾಡನ್ನು ನನಗೆ ಕೊಟ್ಟಿರುವನು.' ಎಂದು ಹೇಳಿತು" ಎಂದಿತು. ಪಿಂಗಲಕನು, "ಸರಿ, ನಾನು ಎಂದು ಕೊಂಡುದು ನಿಜವಾಯಿತು, ದೇವತೆಗಳ ವರವಿಲ್ಲದಿದ್ದರೆ ಮಾಂಸ ತಿನ್ನುವ ಪ್ರಾಣಿಗಳು ತುಂಬಿರುವ ಈ ಕಾಡಿನಲ್ಲಿ ಹಲ್ಲುತಿನ್ನುವ ಪ್ರಾಣಿ ಗಳು ಹೆದರಿಕೆಯಿಲ್ಲದೆ ಕೂಗಿಕೊಂಡು ತಿರುಗುವುದಕ್ಕುಂಟೆ? ಆಯಿತು. ಅದಕ್ಕೆ ನೀನೇನು ಹೇಳಿದೆ?" ಎಂದು ಕೇಳಿತು.

ನರಿಯು ಹೇಳಿತು: "ಸ್ವಾಮಿ, ನಾನು ಹೀಗೆಂದೆನು:— ಚಂಡಿಕಾ ದೇವಿಯ ವಾಹನವಾದ ಪಿಂಗಲಕನೆಂಬ ಸಿಂಹ ವೊಂದುಂಟು. ಅದಕ್ಕೆ ಸೇರಿದ ವನವು ಇದು. ನೀನು ಅತಿಥಿಯು. ಆದರಿಂದ ಆ ಸಿಂಹರಾಜನ ಬಳಿಗೆ ಬಂದು ಒಡಹುಟ್ಟಿಗಳಂತೆ ಊಟ ಆಟಪಾಟಗಳಲ್ಲೆಲ್ಲಾ ಒಟ್ಟಿಗೆ ಇರುವುದು ಸರಿ." ಅದಕ್ಕೆ ಆತನೂ ಆಗಬಹುದು. ಹೋಗಿ ನಿಮ್ಮ ಒಡೆಯನಿಂದ ಭಯವಿಲ್ಲ ವೆಂದು ಮಾತು ತೆಗೆದುಕೊಂಡು ಬಾ." ಎಂದನು. ಇನ್ನು ತಮ್ಮ ಇಷ್ಟ.

ಅದನ್ನು ಕೇಳಿ ಪಿಂಗಲಕನು ದಮನಕನನ್ನು ಬಹುವಾಗಿ ಮೆಚ್ಚಿಕೊಂಡು "ನನ್ನ ಮನಸ್ಸಿನಲ್ಲಿದ್ದಂತೆಯೇ ಮಾಡಿಕೊಂಡು ಬಂದಿರುವೆ. ಭಲೆ, ಭಲೆ, ನಾನೂ ಹಾಗೆಯೇ ಅಭಯವನ್ನು ಯಾಚಿಸುವೆನೆಂದು ಆತನಲ್ಲಿ ಹೇಳಿ ಕರೆದುಕೊಂಡು ಬಾ." ಎಂದು ಬಹುಮಾನವಾಗಿ ಕಳುಹಿಸಿಕೊಟ್ಟನು.

ದಮನಕನು ಸಂಜೀವಕನ ಬಳಿಗೆ ಹೋಗಿ ಹೇಳಿತು:— "ನಮ್ಮ ಅರಸನು ಪ್ರಸನ್ನನಾಗಿರುವನು. ಅದೃಷ್ಟವಶದಿಂದ ನನ್ನ ಮಾತನ್ನು ನಡೆಸಿ ಕೊಡುವುದಾಗಿಯೂ ಹೇಳಿದನು. ನಾನು ಧನ್ಯನಾದೆನು. ನಿನ್ನನ್ನು ಅಭಯಕೊಟ್ಟು ಕರೆದುಕೊಂಡು ಬಾ ಎಂದು ಹೇಳಿರುವನು.ಬಾ,ಆದರೆ ನಿನಗೆ ಒಂದು ವಿಷಯ ನೆನೆಪಿನಲ್ಲಿ ರಲಿ ನೀನು ರಾಜನ ಬಳಿ ಸೇರಿದಮೇಲೆ ಗರ್ವಪಟ್ಟು ನನ್ನಮೇಲೆ ಅಧಿಕಾರ ಮಾಡಕೂಡದು. ನಾನೂ ನೀನೂ ಇಬ್ಬರೂ ರಾಜ್ಯಭಾರವನ್ನು ವಹಿಸುವ ಅಮಾತ್ಯರಾಗಿ ಇರೋಣ. ರಾಜ ಮರ್ಯಾದೆಯನ್ನು ಇಬ್ಬರೂ ಸಮನಾಗಿ ಅನುಭವಿಸೋಣ." ಸಂಜೀವಕನು" ಹಾಗೇ ಆಗಲಿ. ನೀನು ಹೇಳಿದಂತೆಯೇ ನಡೆದುಕೊಳ್ಳುವೆನು. " ಎಂದು ಮಾತು ಕೊಟ್ಟಿತು.

ದಮನಕನು ಸಂಜೀವಕನನ್ನು ಪಿಂಗಲಕನ ಬಳಿಗೆ ಕರೆದುಕೊಂಡು ಹೋದನು. "ದೇವ, ಇದೋ ಸಂಜೀವಕನು ಬಂದಿರುವನು. " ಎಂದು ಕರೆದುಕೊಂಡು ಹೋಗಿ ಮುಂದೆ ನಿಲ್ಲಿಸಿತು. ಸಂಜೀವಕನೂ ಗೌರವವಾಗಿ ಭಕ್ತಿಯಿಂದ ವಿಶ್ವಾಸದಿಂದ ನಮಸ್ಕಾರಮಾಡಿ ವಿನಯವಾಗಿ ಒಂದು ಕಡೆ ಕೂತಿತು. ಪಿಂಗಲಕನು ತನ್ನ ಬಲಗಾಲನ್ನುಅದರ ವಿಸ್ತಾರವಾದ ಹಣೆಲಿನ ಮೇಲಿಟ್ಟು ಗೌರವವಾಗಿ "ಚೆನ್ನಾಗಿದ್ದೀಯಾ? ನೀನು ಈ ವನಕ್ಕೆ ಹೇಗೆ ಬಂದೆ? " ಎಂದು ವಿಶ್ವಾಸವಾಗಿ ಕೇಳಿತು. ಸಂಜೀವಕನೂ ತನ್ನ ಕಥೆಯನ್ನೆಲ್ಲಾ ಹೇಳಿತು. ಆದನ್ನೆಲ್ಲಾ ಕೇಳಿ ಪಿಂಗಲಕನು, "ಸ್ನೇಹಿತನೆ,

ನೀನು ಹೆದರಬೇಕಾಗಿಲ್ಲ. ನಮ್ಮಲ್ಲಿ ಒಬ್ಬನಾಗಿದ್ದುಕೊಂಡು ಬೇಕಾದ ಹಾಗೆ ಸುಖವಾಗಿ ಇರು. ನೀನು ನಿತ್ಯವೂ ಇಲ್ಲಿಗೆ ಬರುತ್ತಿರಬೇಕು. ಈ ವನದಲ್ಲಿ ದುಷ್ಟ ಪ್ರಾಣಿಗಳು ಬದುಕುವುದೇ ಕಷ್ಟ, ಅಂಥದ್ದರಲ್ಲಿ ಹುಲ್ಲು ತಿನ್ನುವವರ ಮಾತೇನು? ಅದರಿಂದ ಹಾಗೆ ಹೇಳಿದೆನು." ಎಂದು ಹೇಳಿ ಅದನ್ನು ಕಳುಹಿಸಿಕೊಟ್ಟು, ತಾನೂ ನದಿಗಿಳಿದು ನೀರು ಕುಡಿದು ಎಂದಿನಂತೆ ತನ್ನ ಪರಿವಾರದೊಡನೆ ಕಾಡಿನಲ್ಲಿ ಹೊರಟು ಹೋಯಿತು.

ಅಂದಿನಿಂದ ಪಿಂಗಲಕನ ರಾಜ್ಯಭಾರವೆಲ್ಲ ಕರಟಕ ದಮನಕರದೇ ಆಗಿ ಹೋಯಿತು. ಪಿಂಗಲಕನು ಸಂಜೀವಕನೊಡನೆ ಮಾತುಕಥೆಗಳನ್ನು ಆಡಿಕೊಂಡು ಸುಖವಾಗಿ ಇರುತ್ತಿದ್ದನು.

ಸಂಜೀವಕನು ಅನೇಕ ಶಾಸ್ತ್ರಗಳನ್ನು ಬಲ್ಲವನಾದ್ದರಿಂದ ಕೆಲವು ದಿನಗಳಲ್ಲಿಯೇ ಪಿಂಗಲಕನಿಗೆ ಶಾಸ್ತ್ರ ಶಾಸ್ತ್ರಗಳ ವಿಷಯಗಳನ್ನೆಲ್ಲಾ ತಿಳಿಯ ಹೇಳಿ, ಅರಣ್ಯ ಧರ್ಮವನ್ನು ಬಿಡಿಸಿ ಗ್ರಾಮಧರ್ಮವನ್ನು ಕಲಿಸಿದನು. ಪಿಂಗಲಕನು ಸಂಜೀವಕನನ್ನು ಒಂದು ಗಳಿಗೆಯೂ ಬಿಟ್ಟಿರಲೊಲ್ಲನು. ಮಿಕ್ಕ ಮೃಗಗಳು ಯಾರೂ ಹತ್ತಿರಕ್ಕೆ ಬರುವಂತಿಲ್ಲ. ಕರಟಕ ದಮನಕರು ಬಂದರೂ ಬಾಗಿಲಲ್ಲಿ ಕಾದಿರಬೇಕು ಎನ್ನುವ ಮಟ್ಟಿಗೂ ಆಗಿ ಹೋಯಿತು.

ಪಿಂಗಲಕನು ಆರಣ್ಯಕ ಧರ್ಮವನ್ನು ಬಿಟ್ಟನು. ಆರಣ್ಯಕ ಧರ್ಮ ಎಂದರೆ ಬಲವಾಗಿದ್ದವನು ಬಲವಿಲ್ಲದವನನ್ನು ಹೊಡೆದು ತಿನ್ನುವುದು. ಸಿಂಹವು ಬೇಟೆಗೆ ಹೊರಡುವುದು. ಸಿಕ್ಕಿದ ಮೃಗಗಳನ್ನು ಹೊಡೆಯುವುದು. ತನಗೆ ಬೇಕಾದಷ್ಟು ತಿನ್ನುವುದು. ಮಿಕ್ಕುದನ್ನು ಪರಿಜನರಿಗೆಲ್ಲಾ ಕೊಟ್ಟುಬಿಡುವುದು. ಹೀಗಿತ್ತು. ಅದು ತಪ್ಪಿಹೋಯಿತು. ಸಿಂಹವು ಬೇಟೆಯಾಡುವುದನ್ನು ಬಿಡಲು ಮಿಕ್ಕ ಪ್ರಾಣಿಗಳಿಗೆ ಹೊಟ್ಟೆಗೆ ಸಿಕ್ಕುವುದೇ ಕಷ್ಟವಾಯಿತು. ಎಲ್ಲಾ ಪ್ರಾಣಿಗಳೂ ಮುಖವನ್ನು ಜೋಲುಹಾಕಿಕೊಂಡು ಕುಳಿತುಕೊಳ್ಳು

ಸಂತಾಯಿತು.

ಅರಸನು ಎಷ್ಟು ಒಳ್ಳೆಯವನಾದರೂ ಆಳುಗಳು ಹೊಟ್ಟೆಗಿಲ್ಲದೆ ಅವನನ್ನು ಸೇವಿಸಲಾದೀತೆ? ಒಣ ಮರವನ್ನು ಹಕ್ಕಿಗಳು ಬಿಡುವಂತೆ ಅವರು ಅವನನ್ನು ಬಿಡುವರು. ಹೊತ್ತಿಗೆ ಸರಿಯಾಗಿ ಹೊಟ್ಟೆಗೆ ಹಾಕುವ ದೊರೆಯು ಬಯ್ಯುತ್ತಿದ್ದರೂ ಅವನನ್ನು ಆಳುಗಳು ಬಿಡುವುದಿಲ್ಲ. ಇದು ಕೇವಲ ಆಳು ಅರಸುಗಳ ಮಾತಲ್ಲ. ಜಗತ್ತಿಗೆ ಜಗತ್ತೇ ಒಂದನ್ನೊಂದು ಸಾಮ ದಾನ ಭೇದ ದಂಡ ಎಂಬ ನಾಲ್ಕು ದಾರಿಗಳಲ್ಲಿ ಹಿಡಿದುಕೊಂಡಿರುವುದು, ಅರಸು ದೇಶವನ್ನು ಕಿತ್ತು ತಿನ್ನುವನು. ರೋಗಿಗಳನ್ನು ವೈದ್ಯರು ಕಿತ್ತು ತಿನ್ನುವರು. ವರ್ತಕರು ಗಿರಾಕಿಗಳನ್ನು ಕಿತ್ತು ತಿನ್ನುವರು. ಮೂರ್ಖರನ್ನು ಪಂಡಿತರು ಕಿತ್ತು ತಿನ್ನುವರು. ಮೈ ಮರೆತವರನ್ನು ಕಳ್ಳರು, ಭಿಕ್ಷುಕರು ಗೃಹಸ್ಥರನ್ನು, ಹೀಗೆಯೇ ಒಬ್ಬರನ್ನೊಬ್ಬರು ಕಿತ್ತುತಿನ್ನುವುದೇ ಜಗತ್ತು. ಇದೇ ಮತ್ಸ್ಯನ್ಯಾಯವು* ಅಷ್ಟೇನು ಕೇಳಿಲ್ಲವೆ?

ಶಂಕರನು ಧರಿಸಿರುವ ಹಾವು ಗಣಪತಿಯ ವಾಹನವಾದ ಇಲಿಯನ್ನು ತಿನ್ನಬೇಕು ಎನ್ನುವುದು. ಆ ಹಾವನ್ನು ಶಿವಪುತ್ರನಾದ ಸ್ಕಂದನ ವಾಹನವಾದ ನವಿಲು ತಿನ್ನಬೇಕು ಎನ್ನುವುದು. ಶಿವಪತ್ನಿಯಾದ ಪಾರ್ವತಿಯ ವಾಹನವಾದ ಸಿಂಹವು ಆ ನವಿಲನ್ನು ತಿನ್ನಬೇಕು ಎನ್ನುವುದು. ಲೋಕನಾಯಕನಾದ ಶಂಕರನ ಸಂಸಾರದಲ್ಲಿಯೇ ಹೀಗೆ ಮತ್ಸ್ಯನ್ಯಾಯವಿರುವುದು. ಎಂದಮೇಲೆ, ಮಿಕ್ಕಕಡೆಗಳಲ್ಲಿ ಇರುವುದಿಲ್ಲ ಎನ್ನುವುದು ಹೇಗೆ?

ಹೀಗೆ ಸಿಂಹವು ಬೇಟೆಯನ್ನು ನಿಲ್ಲಿಸಲು ಕರಟಕ ದಮನಕರು. ಮಂತ್ರಿಗಳಾದರೂ ಅವರಿಗೂ ಹೊಟ್ಟೆಯು ಬೆನ್ನಿಗೆ ಹತ್ತಿಹೋಯಿತು ಆಗ ಅವೆರಡೂ ಒಂದು ಕಡೆ ಕುಳಿತು ಯೋಚಿಸಿದುವು:

---

* ಮತ್ಸ್ಯನ್ಯಾಯ=ನೀರಿನಲ್ಲಿ ಒಂದು ಮೀನು ಇನ್ನೊಂದುಮೀನನ್ನು ಹಿಡಿದು ತಿನ್ನುವುದು. ಅದಕ್ಕೆ ಮತ್ಸ್ಯ ನ್ಯಾಯ ಎಂದು ಹೆಸರು.

“ಕರಟಕ, ಆದ ಅನರ್ಥವನ್ನು ನೋಡಿದೆಯಾ? ಈ ಪಿಂಗಲಕನು ಸಂಜೀವಕನನ್ನು ಒಂದು ಘಳಿಗೆಯೂ ಬಿಡದೆ, ಅವನ ಜೊತೆಯಲ್ಲಿದು ಎಲ್ಲವನ್ನೂ ಮರೆತು ಬಿಟ್ಟಿರುವನು. ನಮ್ಮನ್ನು ಕೇಳುವವರಿಲ್ಲವಾಯಿತು. ಪರಿಜನರೆಲ್ಲರೂ ಬಿಟ್ಟು ಹೋದರು. ಏನು ಮಾಡೋಣ?”

“ದಮನಕ, ಆರಸನು ನಿನ್ನ ಮಾತನ್ನೂ ಕೇಳದಿದ್ದರೂ ನೀನು ನಿನ್ನಮೇಲೆ ಅಪವಾದವು ಬರದಿರಲಿ ಎಂದಾದರೂ ನೀನು ಹೇಳುವುದನ್ನು ಹೇಳಿಬಿಡು. ವಿದುರನು ಧೃತರಾಷ್ಟ್ರನಿಗೆ ಹೇಳಿದಂತೆ ನೀನೂ ಹೇಳಿಬಿಡು. ಆನೆಗಳೂ ಅರಸರೂ ಮದೋನ್ಮತ್ತರಾಗಿ ದಾರಿತಪ್ಪಿ ಹೋದರೆ ಎಲ್ಲರೂ ಅಮಾತ್ಯರನ್ನು ಬಯ್ಯುವರು. ಅಲ್ಲದೆ ಈ ಹುಲ್ಲು ತಿನ್ನುವ ಪ್ರಾಣಿಯನ್ನು ಅರಸನ ಬಳಿಗೆ ಕರೆತಂದವರು ಯಾರು? ನೀನೇ ನಿನ್ನ ಕೈಯ್ಯಿಂದಲೇ ಬೆಂಕಿಯನ್ನಿಟ್ಟೆ.”

“ಅಣ್ಣ, ನಿನ್ನ ಮಾತು ನಿಜ. ಇದು ನಾನಾಗಿ ಮಾಡಿಕೊಂಡ ಅಪರಾಧ. ಆಷಾಢಭೂತಿಯ ಕೈಗೆ ಸಿಕ್ಕಿದ ದೇವಶರ್ಮನು ಹೇಳಿದಂತೆ ಇದು ಸ್ವಯಂಕೃತ ಅಪರಾಧ.”

ಕರಟಕನು ಕೇಳಿತು:—“ಅದು ಹೇಗೆ?” ಎಂದು. ದಮನಕನು ಹೇಳಿತು.



## ಸ್ವಯಂ ಕೃತಾಪರಾಧದ ಕಥೆ

ಒಂದು ನಿರ್ಜನ ಪ್ರದೇಶದಲ್ಲಿ ಒಂದು ಮಠವಿತ್ತು. ಅಲ್ಲಿ ದೇವಶರ್ಮನೆಂಬ ಸನ್ಯಾಸಿಯಿದ್ದನು. ಆತನಿಗೆ ಅನೇಕರು ದಕ್ಷಿಣೆಗಳನ್ನು ಕೊಡುವರು: ಬಟ್ಟೆಬರೆಗಳನ್ನು ಕೊಡುವರು. ಅದೆಲ್ಲವೂ

ಸೇರಿ ಕೊಂಚ ಆಸ್ತಿಯಾಯಿತು. ಅದು ಬರುಬರುತ್ತ ಬೆಳೆಯಿತು. ಅದೆಲ್ಲವನ್ನೂ ಮಾರಿ ಚಿನ್ನವನ್ನು ಮಾಡಿ ಅದನ್ನು ಯಾರನ್ನೂ ನಂಬದೆ, ಎಲ್ಲಿಯೂ ಇಡದೆ, ಕಂಕುಳಲ್ಲಿಯೇ ಇಟ್ಟುಕೊಂಡು ತಿರುಗುತ್ತಿದ್ದನು. ಕೇಳಿಲ್ಲವೆ?

ಹಣವನಾರ್ಜಿಸೆ ದುಃಖ | ಹಣವ ರಕ್ಷಿಸೆ ದುಃಖ ||
ಹಣವು ದೊರೆಯಲು ದುಃಖ | ಹಣವು ಕಳೆಯಲು ದುಃಖ ||
ಹಣದ ಜೊತೆ ಜೊತೆಯಲೇ | ದುಃಖ ಬೆರೆದಿರುವುದೈಯ || ೨೯ ||

ಆ ಪೂರಿನಲ್ಲಿ ಆಷಾಢಭೂತಿಯೆಂಬ ಒಬ್ಬ ಕಳ್ಳನಿದ್ದನು. ಅವನಿಗೆ ಇನ್ನೊಬ್ಬರ ದುಡ್ಡನ್ನು ಹಾರಿಸುವುದೇ ಕಸಬು. ಅವನು ದೇವಶರ್ಮನ ಕಂಕುಳಲ್ಲಿದ್ದ ಗಂಟನ್ನು ಕಂಡು ಇದನ್ನು ಹಾರಿಸುವುದು ಹೇಗೆ? ಎಂದು ಯೋಚಿಸಿದನು. "ಮಠಕ್ಕೆ ಕನ್ನ ಹಾಕುವುದೆಂದರೆ ಕಲ್ಲಿನ ಕಟ್ಟಡ. ಅದರಿಂದ ಸಾಧ್ಯವಿಲ್ಲ. ಗೋಡೆಗಳು ಎತ್ತರವಾಗಿರುವುದರಿಂದ ಹತ್ತಿ ಇಳಿಯುವುದಕ್ಕೆ ಆಗುವುದಿಲ್ಲ. ಅದರಿಂದ ಇವನನ್ನೇ ಒಳ್ಳೆಯ ಮಾತುಗಳಾಡಿ ವಂಚಿಸಿ ಗಂಟು ಹೊಡೆಯಬೇಕು. ಅದಕ್ಕೆ ನಾನು ಇವನ ಶಿಷ್ಯನಾಗಬೇಕು. ಆಗ ಇವನು ನನ್ನನ್ನು ನಂಬುವನು. ಕೇಳಿಲ್ಲವೆ:—

ಆಸೆಯಿಲ್ಲದವನಧಿಕಾರಿಯಲ್ಲ ||
ಕಾಮಿಯಲ್ಲದವ ಸಿಂಗಾರವೊಲ್ಲ ||
ಓದಿ ತಿಳಿಯದವ ಪ್ರಿಯವಕ್ತ*ನಲ್ಲ||
ಇದ್ದಂತೆ ನುಡಿಯೆ ವಂಚಕನೆ ಅಲ್ಲ || ೩೦ ||

ಹೀಗೆಂದು ನಿಶ್ಚಯಿಸಿಕೊಂಡು ದೇವಶರ್ಮನ ಬಳಿಗೆ ಹೋಗಿ "ಓಂ ನಮಶ್ಶಿವಾಯ" ಎಂದು ಸಾಷ್ಟಾಂಗವಾಗಿ ನಮಸ್ಕಾರ ಮಾಡಿ ಕೈ ಮುಗಿದುಕೊಂಡು "ಭಗವನ್, ನನ್ನನ್ನು ಕಾಪಾಡಬೇಕು. ಈ ಸಂಸಾರವು ಸಾರವಿಲ್ಲದ್ದು. ಯೌವನವು ಬೆಟ್ಟದ ನದಿಯಂತೆ

* ವಕ್ತಾ=ಮಾತಾಡುವವನು

ಓಡುವುದು. ಹುಲ್ಲಿನ ಬೆಂಕಿಯಂತೆ ಜೀವನವು ಕ್ಷಣಿಕವು. ಶರತ್ಕಾಲದ ಮೋಡಗಳ ನೆರಳಿನಂತೆ ಭೋಗಗಳು ಅಶಾಶ್ವತವು, ಪುತ್ರ, ಮಿತ್ರ, ಕಲತ್ರ, ಭೃತ್ಯರ ಸಂಬಂಧವು ಕನಸಿನಂತೆ ಸುಳ್ಳಾದದ್ದು. ಇದನ್ನು ನಾನು ಚೆನ್ನಾಗಿ ಅರಿತಿರುವೆನು. ಆದರೂ ಇದನ್ನು ದಾಟಲಾರೆನು: ಅವರಿಂದ ಇದನ್ನು ದಾಟುವ ಉಪಾಯವನ್ನು ಹೇಳಿಕೊಟ್ಟು ನನ್ನನ್ನು ಕಾಪಾಡಬೇಕು.'' ಎಂದು ಸುತ್ತಿ ನಮಸ್ಕಾರ ಮಾಡಿದನು.

ದೇವಶರ್ಮನು ಅವನ್ನು ಕೇಳಿ ''ವತ್ಸ, ಈ ಚಿಕ್ಕ ವಯಸ್ಸಿನಲ್ಲಿಯೇ ನಿನಗೆ ಇಷ್ಟು ವೈರಾಗ್ಯ ಬಂದಿದೆಯಾಗಿ ನೀನು ಧನ್ಯನು. ವಯಸ್ಸು ಕಳೆಯುವುದಕ್ಕಿಂತ ಮುಂಚೆ ಬರುವ ವೈರಾಗ್ಯವೇ ವೈರಾಗ್ಯ. ನೀನು ಹೇಳುತ್ತಿರುವ ಈ ಷಡಕ್ಷರ ಮಂತ್ರವನ್ನು ಚೆನ್ನಾಗಿ ಅಭ್ಯಾಸ ಮಾಡು. ಈ ಓಂ ನಮಶ್ಶಿವಾಯ ಮಂತ್ರದಿಂದಲೇ ಪೂಜೆ ಮಾಡು. ನೀನು ಉದ್ಧಾರವಾಗುವೆ'' ಎಂದನು. ''ಭಗವನ್, ಹಾಗಾದರೆ ನನಗೆ ದೀಕ್ಷೆಯನ್ನು ಕೊಡಬೇಕು'' ಎನ್ನಲು, ದೇವಶರ್ಮನು ''ಆದೀತು ಆದರೆ ನೀನು ರಾತ್ರಿಯಲ್ಲಿ ಮಠದೊಳಕ್ಕೆ ಬರಕೂಡದು. ಮಠದ ಬಾಗಿಲಲ್ಲಿ ಒಂದು ಗುಡಿಸಲು ಮಾಡಿಕೊಂಡು ಇರಬೇಕು.'' ಎಂದನು. ಆಷಾಢಭೂತಿಯು ಅದಕ್ಕೆ ಒಪ್ಪಲು ಆ ಸನ್ಯಾಸಿಯು ಅವನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿದನು.

ಶಿಷ್ಯನು ಗುರುವಿಗೆ ಕೈಕಾಲು ಒತ್ತುವುದು ಮುಂತಾದ ಕೆಲಸವನ್ನು ಮಾಡುವನು. ಆದರೂ ಗುರುವು ಯಾವಾಗಲೂ ಕಂಕುಳಿನ ಗಂಟನ್ನು ಮಾತ್ರ ಕೆಳಗಿಡನು. ಹೀಗೆಯೇ ಕೆಲವು ಕಾಲ ಕಳೆಯಿತು, ಆಷಾಢಭೂತಿಗಂತೂ ಒಂದೇ ಯೋಚನೆ, '' ಇವನೇನು ಮಾಡಿದರೂ ನನ್ನನ್ನು ನಂಬಲಿಲ್ಲ. ಹಗಲಿನಲ್ಲಿಯೇ ಶಸ್ತ್ರದಿಂದ ಹೊಡೆಯಲೇ, ವಿಷವನ್ನು ಕೊಡಲೇ, ತಿವಿದು ಹಾಕಲೇ? ಏನು ಮಾಡಲಿ? '' ಎಂದು ಚಿಂತಿಸುತ್ತಲೇ ಇದ್ದನು.

ಅಷ್ಟರಲ್ಲಿ ಆ ಸನ್ಯಾಸಿಯ ಶಿಷ್ಯನೊಬ್ಬನು ಗುರುವನ್ನು ತಮ್ಮ ಮನೆಗೆ ಕರೆಯಲು ಬಂದನು. ಗುರುವೂ ಒಪ್ಪಿದನು. ಹೊಸ ಶಿಷ್ಯನನ್ನು ಕರೆದುಕೊಂಡು ಹೊರಟನು. ದಾರಿಯಲ್ಲಿ ಒಂದು ನದಿಯು ಸಿಕ್ಕಿತು. ಆಗ ಸನ್ಯಾಸಿಯು 'ಕೈ ಕಾಲು ತೊಳೆದುಕೊಳ್ಳಬೇಕೆಂದು, ತನ್ನ ಗಂಟನ್ನು ತನ್ನ ಕಾವಿಯ ಬಟ್ಟೆಗಳಲ್ಲಿ ಸುತ್ತಿ ಅದನ್ನು ಆಷಾಡ ಭೂತಿಯ ಕೈಗೆ ಕೊಟ್ಟು, " ನಾನು ಕೈಕಾಲು ತೊಳೆದುಕೊಂಡು ಬರುವವರೆಗೂ ಇದನ್ನು ಭದ್ರವಾಗಿ ಕಾಪಾಡಿಕೊಂಡಿರು." ಎಂದು ಹೇಳಿ ಹೋದನು. ಈತನು ಅತ್ತಹೋಗುತ್ತಿದ್ದ ಹಾಗೆಯೇ ಆಷಾಡ ಭೂತಿಯು ಆ ಗಂಟನ್ನು ಹೊತ್ತುಕೊಂಡು ಓಡಿದನು.

ಇತ್ತ ಸನ್ಯಾಸಿಯು ಶೌಚಕ್ಕೆ ಹೋಗಿದ್ದ ಕಡೆ ಒಂದು ಕುರಿಯ ಹಿಂಡು ಮೇಯುತ್ತಿತ್ತು. ಆ ಹಿಂಡಿನಲ್ಲಿದ್ದ ಎರಡು ಟಗರುಗಳು ಒಂದಕ್ಕೊಂದು ಹೊಡೆದಾಡಲು ಮೊದಲು ಮಾಡಿದುವು. ಅವು ಎರಡೂ ಒಂದಕ್ಕೊಂದು ಢಕ್ಕಾಮುಕ್ಕಿ ಹೊಡೆಯಲು ಎರಡರ ತಲೆಯೂ ಒಡೆದು ರಕ್ತವು ಸೋರುವುದು. ಆದರೂ ಆ ಟಗರುಗಳು ಬಿಡವು. ಸಮೀಪದಲ್ಲಿ ಪೊದರಿನಲ್ಲಿದ್ದ ನರಿಯೊಂದು ಆ ಬಿಸಿ ರಕ್ತ ವನ್ನು ಕಂಡು ಅದನ್ನು ನೆಕ್ಕುವುದಕ್ಕೆಂದು ಓಡಿ ಬಂತು. ಆ ವೇಳೆಗೆ ಎರಡು ಟಗರುಗಳೂ ಬಂದು ಢೀ ಹೊಡೆಯಲು ಅವುಗಳ ನಡುವೆ ಸಿಕ್ಕಿ ಅದು ಸತ್ತಿತು. ಇದು ಇಷ್ಟು ನೋಡಿಕೊಂಡು ಈ ನರಿಯು ಸ್ವಯಂಕೃತಾಪರಾಧದಿಂದ ಎಂದರೆ ತಾನೇ ಮಾಡಿಕೊಂಡ ಪಾಪ ದಿಂದ ಹತವಾಯಿತು ಎಂದು ಹಿಂತಿರುಗಿ ಬಂದರೆ ಆಷಾಢಭೂತಿಯು ಇಲ್ಲ. ಏನೋ ಆಗಿರಬೇಕೆಂದು ಸಂದೇಹಪಟ್ಟು ಬೇಗ ಕೈಕಾಲು ತೊಳೆದುಕೊಂಡು ಎಷ್ಟು ಹುಡುಕಿದರೂ ಆಷಾಢಭೂತಿಯು ಸಿಕ್ಕ ಲಿಲ್ಲ. ಆಗ ಹಣೆಹಣೆಯನ್ನು ಚಚ್ಚಿಕೊಂಡು ಈ ನರಿಯಂತೆ ನಾನೂ ಸ್ವಯಂಕೃತಾಪರಾಧದಿಂದಲೇ ಮೋಸಹೋದೆನು ಎಂದು ಅತ್ತನು.

ಹಾಗೆಯೇ ನಾನು ಈಗ ಸ್ವಯಂಕೃತಾಪರಾಧದಿಂದಲೇ ಈ ದೆಶೆಗೆ ಬಂದೆನು.''

ಕರಟಕನು ಕೇಳಿದನು:—''ಆಯಿತು. ಈ ಸಂಕಟದಲ್ಲಿ ನಮ್ಮ ಗತಿಯೇನು? ನಾವೇನು ಮಾಡಬೇಕು?''

ದಮ:—''ಇಂತಹ ಸಂಕಟದಲ್ಲೂ ನನ್ನ ಬುದ್ಧಿಯು ಮೊಂಕಾಗಿಲ್ಲ. ನೋಡು ನನ್ನ ಬುದ್ಧಿಯನ್ನು. ಈ ಸಂಜೀವಕನನ್ನು ಪಿಂಗಲಕನಿಂದ ಅಗಲಿಸುವೆನು. ಕೇಳಿಲ್ಲವೆ? ಬಿಲ್ಲೆಸೆದ ಬಾಣ ಕೊಲ್ಲುವುದೊ ಇಲ್ಲವೋ ಹೇಳಲಾಗುವುದಿಲ್ಲ, ಆದರೆ ಬುದ್ಧಿಯಿಂದ ಹೊಡೆಯಲು ದೇಶವು ನಾಯಕನೊಡನೆಧ್ವಂಸವಾಗಿ ಹೋಗುವುದು. ಆದರಿಂದ ನಾನು ಮಾಯೆಯನ್ನು ಹೂಡುವೆನು. ಗುಟ್ಟಾಗಿ ಈ ಇಬ್ಬರನ್ನೂ ಒಡೆಯುವೆನು. ''ಆಯಿತು ನಿನ್ನ ಮಾಯಾ ಪ್ರಪಂಚವು ಪಿಂಗಲಕನಿಗೋ ಸಂಜೀವಕನಿಗೋ ತಿಳಿದರೆ ಕೇಡು ತಪ್ಪದು.''

''ಅಣ್ಣ, ನಿನಗೇಕೆ ಸಂದೇಹ? ಬುದ್ಧಿವಂತರು ಆಪತ್ಕಾಲದಲ್ಲಿ ಬುದ್ಧಿಯನ್ನು ಉಪಯೋಗಿಸಬೇಕು. ಪ್ರಯತ್ನ ಮಾಡದಿರುವುದೆ? ಒಂದಾನೊಂದು ಕಾಲದಲ್ಲಿಯಾದರೂ ಬುದ್ಧಿಯು ಘಣಾಕ್ಷರನ್ಯಾಯದಿಂದ* ಎಲ್ಲರಿಗಿಂತ ಮೇಲಾಗಿ ಸಾಮ್ರಾಜ್ಯವನ್ನು ಪಡೆಯುವುದು. ದೈವವು ವಿಮುಖವಾಗಿ (ಎಂದರೆ ಬೇರೆ ಕಡೆಗೆ ತಿರುಗಿಕೊಂಡು) ಇದ್ದರೂ ಧೈರ್ಯವನ್ನು ಬಿಡಬಾರದು. ಧೈರ್ಯವೇ ಒಂದೊಂದು ವೇಳೆ ಬದುಕಿಸುವುದು. ಸಮುದ್ರ ಮಧ್ಯದಲ್ಲಿ ಹಡಗು ಒಡೆದು

---

* ಘಣಾಕ್ಷರ ನ್ಯಾಯ:– ನೀರಿನಲ್ಲಿ ತಳದಲ್ಲಿಯೇ ತಿರುಗುವ ಹುಳು ವುಂಟು, ಅದು ತಿರುಗುವಾಗ ನೆಲದ ಮೇಲೆ ಕಡ್ಡಿಯಿಂದ ಗೆರೆಯೆಳೆದಂತಾಗುವುದು. ಒಂದೊಂದು ವೇಳೆ ಆಗೆರೆಗಳು ಅಕ್ಷರದಂತೆ ಕಾಣಿಸುವುವು. ಅದು ಘಣಾಕ್ಷರ. ಅದರಂತೆ ಎಂಬರ್ಥದಲ್ಲಿ ನ್ಯಾಯ.

ಹೋದಾಗ, ಯಾತ್ರಿಕನಿಗೆ ಧೈರ್ಯವಾದರೂ ಇದ್ದರೆ ಏನಾದರೂ ಮಾಡಿ ಬದುಕಬಹುದು. ಅದರಂತೆ, ಈಗ ನಾನು ಅವರಿಬ್ಬರಿಗೂ ಅರ್ಥವಾಗದಂತೆ, ಇಬ್ಬರಿಗೂ ಜಗಳ ತಂದಿಡುವೆನು.''

"ನೀನು ಹೇಳುವಂತೆಯೇ ನೀನು ಮಾಡಬಲ್ಲೆ ಎಂಬ ನಂಬಿಕೆಯು ನನಗಿದ್ದರೂ, ದಮನಕ, ನನಗೆ ಏಕೋ ದೊಡ್ಡ ದಿಗಿಲಾಗುತ್ತಿರುವುದು. ಏಕೆ ಎನ್ನುವಿಯಾ? ನೋಡು, ಸಂಜೀವಕನು ಬುದ್ಧಿವಂತನು. ಪಿಂಗಲಕನು ಭಯಂಕರನು ನೀನು ಬುದ್ಧಿವಂತನೇ ಆಗಿದ್ದರೂ ಅವರಿಬ್ಬರನ್ನೂ ನಿಜವಾಗಿ ಒಡೆಯಬಲ್ಲೆಯಾ ಎಂಬು ನನಗೆ ಸಂದೇಹವಾಗುತ್ತಿರುವುದು.''

"ಅಣ್ಣ, ನಾನು ಒಡೆಯಬಲ್ಲೆನು. ಉಪಾಯದಿಂದ ಸಾಧ್ಯವಾದುದು ಪರಾಕ್ರಮದಿಂದ ಸಾಧ್ಯವಾಗದು. ಕಾಗೆಯು, ಚಿನ್ನದ ಸರದಿಂದ ಹಾವನ್ನು ಕೊಲ್ಲಲಿಲ್ಲವೆ?''

"ಅದು ಹೇಗೆ?''

"ಕೇಳು'':—



# ಹೊಸಗನ್ನಡ ಪಂಚತಂತ್ರ

## ಒಡೆಯುವುದು

### ಕಾಗೆಯು ಹಾವನ್ನು ಕೊಂದ ಕಥೆ

ಒಂದಾನೊಂದು ಕಡೆ ಒಂದು ದೊಡ್ಡ ಆಲದ ಮರವಿರುವುದು. ಅಲ್ಲಿ ಒಂದು ಜೊತೆ ಕಾಗೆಗಳು ವಾಸವಾಗಿದ್ದುವು. ಅವು ಮೊಟ್ಟೆಯಿಡುವ ವೇಳೆಗೆ ಸರಿಯಾಗಿ ಆ ಮರದ ಪೊಟ್ಟರೆಯಿಂದ ಒಂದು ಕರಿಯ ನಾಗರಹಾವು ಬಂದು ಆ ಮೊಟ್ಟೆಗಳನ್ನು ತಿಂದು ಬಿಡುವುದು. ಅವು ಈ ದುಃಖವನ್ನು ಸಹಿಸಲಾರದೆ ತಮ್ಮ ಮಿತ್ರನಾಗಿದ್ದ ನರಿಯನ್ನು ಕೇಳಿದುವು. "ಏನು ಮಾಡೋಣ? ಹೇಳು. ನದೀ ತೀರದಲ್ಲಿ ಬೆಳೆಯಿಟ್ಟವನು, ಹಾವಿರುವ ಮನೆಯಲ್ಲಿ ವಾಸ ಮಾಡುವವನು ಇಬ್ಬರಿಗೂ ಸುಖವೆಲ್ಲಿಯದು? ಆ ಹಾಳು ಹಾವು ನಮ್ಮನ್ನು ಯಾವೊತ್ತು ಹಿಡಿದು ತಿಂದು ಬಿಡುವುದೋ?'' ಎಂದು ಅತ್ತು ಕೊಂಡುವು.



ನರಿಯು ಒಂದು ಗಳಿಗೆ ಯೋಚಿಸಿ ಹೇಳಿತು: "ಇದಕ್ಕಾಗಿ ನೀವು ಇಷ್ಟು ದುಃಖ ಪಡಬೇಕಾಗಿಲ್ಲ. ಉಪಾಯ ಮಾಡದಿದ್ದರೆ ಆ ಕೆಟ್ಟ ಹಾವು ಸಾಧ್ಯವಾಗುವುದಿಲ್ಲ. ಶತ್ರುಗಳನ್ನು ಗೆಲ್ಲುವುದಕ್ಕೆ ಆಯುಧಗಳಿಗಿಂತಲೂ ಉಪಾಯವೇ ಸುಲಭ. ಉಪಾಯಕ್ಕೆ ಬುದ್ಧಿಯು ಬೇಕು. ಬುದ್ಧಿಯಿಲ್ಲದೆ ಆಸೆಗೆ ವಶವಾಗಿ ಕೊಕ್ಕರೆಯು

ಪ್ರಾಣ ಬಿಟ್ಟಿತು. ಹಾಗಾಗಬಾರದು. ಅಷ್ಟೆ!'' ಎಂದಿತು.

ಕಾಗೆಗಳು ಅದು ಹೇಗೆ ಎಂದು ಕೇಳಲು ನರಿಯು ಹೇಳಿತು.



## ಆಶೆಗೆ ವಶವಾಗಿ ಸತ್ತ ಕೊಕ್ಕರೆಯು ಕಥೆ

ಒಂದು ಕಾಡಿನಲ್ಲಿ ಒಂದಾನೊಂದು ಸರೋವರವಿರುವುದು. ಅಲ್ಲಿ ಅನೇಕ ಜಾತಿಯ ಮೀನುಗಳುಂಟು. ಅದೇ ಸರೋವರದಲ್ಲಿ ಒಂದು ಕೊಕ್ಕರೆಯು ಮನೆ ಮಾಡಿಕೊಂಡಿರುವುದು. ಅದಕ್ಕೆ ಮುಪ್ಪು ಬಂತು. ಮೀನು ಹಿಡಿಯುವುದಕ್ಕೂ ಕೈಯಲ್ಲಾಗದು ಎನ್ನಿಸಿತು. ಆಗ ಆ ಸರಸ್ಸಿನ ತೀರದಲ್ಲಿ ಕಣ್ಣೀರು ಸುರಿಸಿಕೊಂಡು ದೊಡ್ಡದಾಗಿ ಅಳುತ್ತ ನಿಂತುಕೊಂಡಿತು. ಆಗ ಆ ಸರಸ್ಸಿನಲ್ಲಿದ್ದ ಏಡಿಯೊಂದು ಅಲ್ಲಿಗೆ ಬಂದು ''ಮಾವ, ಇದೇನಿದು? ಊಟದ ಯೋಚನೆಯನ್ನೇ ಬಿಟ್ಟು ಅಳುತ್ತ ನಿಂತಿರುವೆಯಲ್ಲ?'' ಎಂದು ಕೇಳಿತು.

ಕೊಕ್ಕರೆಯು, ''ಅಪ್ಪಾ, ಏನು ಹೇಳಲಿ? ನಾನು ಇನ್ನು ಮೇಲೆ ಮೀನು ತಿನ್ನುವುದಿಲ್ಲ. ನಾನು ಉಪವಾಸ ಮಾಡಿ ಪ್ರಾಣ ಬಿಡಬೇಕು ಎಂದು ಗೊತ್ತು ಮಾಡಿಕೊಂಡಿರುವೆನು.'' ಎಂದಿತು. ಏಡಿಗೆ ಆಶ್ಚರ್ಯವಾಗಿ ''ಮಾವ, ಇದೇನು ಇಂತಹ ವೈರಾಗ್ಯಕ್ಕೆ ಕಾರಣವೇನು?'' ಎಂದು ಕೇಳಿತು. ಕೊಕ್ಕರೆಯು, ''ಮಗು, ನಾನು ಇದೇ ಸರಸ್ಸಿನಲ್ಲಿ ಹುಟ್ಟಿ ಬೆಳೆದವನು. ಹನ್ನೆರಡು ವರ್ಷದ ಅನಾವೃಷ್ಟಿ, * ಯೋಗವು ಬಂದಿರುವುದಂತೆ!'' ಎಂದು ಅತ್ತಿತು.

''ನಿನಗೆ ಯಾರು ಹೇಳಿದರು ಮಾವ?''

---

* (ವೃಷ್ಟಿ = ಮಳೆ. ಅದಿಲ್ಲದೆ ಹೋಗುವುದು ಅನಾವೃಷ್ಟಿ.)

"ಜೋಯಿಸರಿಂದ ಈಗ ತಾನೇ ತಿಳಿಯಿತು. ಈ ಸರೋವರವೋ ಕೊಂಚ ನೀರುಳ್ಳುದು. ಬೇಗ ಒಣಗಿ ಹೋಗುವುದು. ಇದು ಒಣಗಿ ಹೋದರೆ, ಯಾರೊಡನೆ ಬೆಳೆದನೋ, ಯಾರೊಡನೆ ಆಟ ಪಾಡಿದನೋ, ಅವರೆಲ್ಲರೂ ನಾಶವಾಗಿ ಹೋಗುವರು. ಅವರೆಲ್ಲರ ಸಾವನ್ನು ನಾನು ನೋಡಲಾರೆ. ಅದರಿಂದ ಅವರು ಸಾಯುವುದಕ್ಕೆ ಮುಂಚೆ ನಾನೇ ಸಾಯುವೆನು. ಈಗಾಗಲೇ ಕೊಂಚ ನೀರಿರುವ ಕಡೆಯಿದ್ದ ಜಲಚರಗಳು ಹೆಚ್ಚು ನೀರು ಇರುವ ಕಡೆಗೆ ಹೋಗುತ್ತಿವೆ. ಇಲ್ಲಿನವೋ ನಿಶ್ಚಿಂತೆಯಾಗಿವೆ. ಅದನ್ನು ಕಂಡು ನನಗೆ ಅಳು ಬರುತ್ತಿದೆ."

ಏಡಿಯು ಹೋಗಿ ಈ ಸುದ್ದಿಯನ್ನು ಮಿಕ್ಕ ಪ್ರಾಣಿಗಳಿಗೆಲ್ಲ ಹೇಳಿತು. ಅದನ್ನು ಕೇಳಿ ಎಲ್ಲರಿಗೂ ಹೆದರಿಕೆಯಾಯಿತು. ಮೀನು ಆಮೆ, ಮೊದಲಾದವೆಲ್ಲ ಕೊಕ್ಕರೆಯ ಹತ್ತಿರಕ್ಕೆ ಹೋಗಿ "ಮಾವ, ಏನಾದರೂ ಉಪಾಯ ಮಾಡು ನಮ್ಮನ್ನು ಕಾಪಾಡು" ಎಂದು ಕೇಳಿಕೊಂಡುವು. ಕೊಕ್ಕರೆಯು, "ಇಲ್ಲಿಗೆ ಸ್ವಲ್ಪ ದೂರದಲ್ಲಿ ಇನ್ನೊಂದು ಸರೋವರವಿದೆ. ಅಲ್ಲಿ ಕಮಲಗಳು ಕೂಡ ಬೆಳೆದಿವೆ. ಅಲ್ಲಿ ನೀರು ಬೇಕಾದಷ್ಟು ಇದೆ. ಇಪ್ಪತ್ತನಾಲ್ಕು ವರ್ಷ ಮಳೆಯು ಬರದಿದ್ದರೂ ಅದು ಒಣಗುವ ಹಾಗಿಲ್ಲ. ಯಾರಾದರೂ ನನ್ನ ಬೆನ್ನಿನ ಮೇಲೆ ಕುಳಿತುಕೊಂಡರೆ ನಾನು ಅವರನ್ನು ಅಲ್ಲಿಗೆ ಕರೆದುಕೊಂಡು ಹೋಗುವೆನು." ಎಂದಿತು.

ಅದರ ಮಾತನ್ನು ನಂಬಿ ಮೀನುಗಳು ತಾನು ಮುಂದು ತಾನು ಮುಂದು ಎಂದು ಬಂದು ಅದರ ಮೇಲೆ ಹತ್ತಿಕೊಂಡುವು. ಆ ಕಳ್ಳನು ಅವುಗಳನ್ನು ಹೊತ್ತುಕೊಂಡು ಹೋಗಿ ಒಂದು ಬಂಡೆಯಮೇಲೆ ಹಾಕಿಕೊಂಡು ಕೊಂದು ತಿಂದು ತೇಗಿ, ಹಿಂತಿರುಗಿ ಬಂದು ಮಿಕ್ಕ ಮೀನುಗಳಿಗೆ ಅವೆಲ್ಲ ಅಲ್ಲಿ ಹಾಗಿರುವುವು: ಹೀಗಿರುವುವು" ಎಂದು ಕಥೆಗಳನ್ನು ಹೇಳುತ್ತಾ ಕಾಲ ಕಳೆಯುತ್ತಿತ್ತು.

ಒಂದು ದಿನ ಏಡಿಯು ಬಂದು "ಮಾವ, ನೀನು ನನ್ನ ಸಂಗಡ ಮಾತಾಡಿದುದು ನನ್ನೊಡನೆ, ಆದರೂ ನನ್ನನ್ನು ಬಿಟ್ಟು ಮಿಕ್ಕೆಲ್ಲ ರನ್ನೂ ಕರೆದುಕೊಂಡು ಹೋಗುತ್ತಿರುವೆಯಲ್ಲ ಅದೇನು? ಇವೊತ್ತು ನನ್ನನ್ನು ಕರೆದುಕೊಂಡು ಹೋಗು."



ಎಂದಿತು. ಅದನ್ನು ಕೇಳಿ ಕೊಕ್ಕರೆಯು ನನಗೂ ಮೀನುಗಳನ್ನು ತಿಂದು ತಿಂದು ಸಾಕಾಗಿ ಹೋಗಿದೆ. ಇರಲಿ. ಇವೊತ್ತು ಈ ಏಡಿಯನ್ನು ನೆಂಜಿಕೊಳ್ಳೋಣ" ಎಂದು, ಅದನ್ನು ಬೆನ್ನಿನ ಮೇಲೆ ಹೊತ್ತುಕೊಂಡು ಆ ಬಂಡೆಯ ಮೇಲಕ್ಕೆ ಹೋಯಿತು.

ಬಂಡೆಯನ್ನು ದೂರದಿಂದಲೇ ನೋಡಿ ಆ ಏಡಿಯು ಅದರ ಮೇಲೆ ಬಿದ್ದಿರುವ ಮೀನಿನ ಮೂಳೆಗಳ ಗುಡ್ಡೆಯನ್ನೂ ನೋಡಿ. "ಮಾವ, ಇನ್ನೂ ಎಷ್ಟು ದೂರ ಹೋಗಬೇಕು? ನನ್ನ ಭಾರದಿಂದ ನಿನಗೆ ಬಹಳ ಆಯಾಸವಾಗಿದೆಯೇನೋ?" ಎಂದು ಒಳ್ಳೆಯ ಮಾತಿನಿಂದಲೇ ಕೇಳಿತು. ಕೊಕ್ಕರೆಯು ಏಡಿಯೆಷ್ಟಾಗಲಿ ನೀರಿನ ಪ್ರಾಣಿ, ನೆಲದ ಮೇಲೆ ಏನು ಮಾಡೀತು. ಎಂದು ಉದಾಸೀನತೆ ಯಿಂದ, "ಇದೇ ನನ್ನ ಜೀವನದ ಉಪಾಯ. ನೀನೂ ನಿನ್ನ ಇಷ್ಟ ದೇವತೆಯನ್ನು ಸ್ಮರಿಸಿಕೋ. ನಿನಗೆ ಕೊನೆಯ ಕಾಲವು ಬಂತು. ಈ ಬಂಡೆಯ ಮೇಲೆ ನಿನ್ನನ್ನು ಇಟ್ಟುಕೊಂಡು ತಿನ್ನುವೆನು" ಎಂದು ಜಂಭವಾಗಿ ಹೇಳಿತು.

ಕೂಡಲೇ ಆ ಏಡಿಯು ತನ್ನ ಕೊಂಡಿಗಳಿಂದ ಆ ಕೊಕ್ಕರೆಯ ಕತ್ತನ್ನು ಹಿಡಿಯಿತು. ಕಡಿದು ತುಂಡು ಮಾಡಿ ಅದನ್ನು ಸಾಯಿ ಸಿತು.

ಅದರಿಂದ ಹೇಳಿದೆನು: ಉಪಾಯ ಮಾಡಿದರೂ ಕೊಕ್ಕರೆಯ ಹಾಗಾಗಬಾರದು. "ಎಂದು."

ಕಾಗೆಗಳು ಕೇಳಿದುವು:— "ಮಿತ್ರ, ಆ ಕೆಟ್ಟ ಹಾವನ್ನು ಕೊಲ್ಲುವ ಉಪಾಯವನ್ನು ಹೇಳು.'' ಎಂದು. ನರಿಯು ಹೇಳಿತು: ಯಾವುದಾದರೊಂದು ಊರಿಗೆ ಹೋಗಿ, ಅಲ್ಲಿ ಯಾರದಾದರೂ ಒಂದು ಒಡವೆಯನ್ನು ಹಾರಿಸಿಕೊಂಡು, ಆ ಒಡವೆಯವರು ಕಾಣುವ ಹಾಗೆ ತಂದು, ಆ ಹಾವಿನ ಪೊಟ್ಟರೆಯಲ್ಲಿ ಹಾಕಿ ಬಿಡಿ. ಅವರು ಒಡವೆಗಾಗಿ ಆ ಹಾವನ್ನು ಕೊಲ್ಲುವರು.''

ಕಾಗೆಗಳು ಹಾಗೆಯೇ ಹುಡುಕಿಕೊಂಡು ಹೋದುವು. ಒಂದು ಕೊಳದಲ್ಲಿ ಹೆಂಗುಸರು ತಮ್ಮ ಒಡವೆಗಳನ್ನು ದಡದಲ್ಲಿಟ್ಟು ನೀರಿನಲ್ಲಿ ಳಿದು ಸ್ನಾನವನ್ನು ಮಾಡುತ್ತಿದ್ದರು. ಆ ಒಡವೆಗಳಲ್ಲಿ ಒಂದು ಚಿನ್ನದ ಸರವನ್ನು ಒಂದು ಕಾಗೆಯು ಕಚ್ಚಿಕೊಂಡು ಹಾರಿತು. ಇನ್ನೊಂದು ಕಾಗೆಯು ಕೂಗಿತು. ಕಾವಲಿನವರು ದೊಣ್ಣೆ ತೆಗೆದುಕೊಂಡು ಅದರ ಹಿಂದೆ ಓಡಿದರು. ಕಾಗೆಯು ಆ ಸರವನ್ನು ಅವರು ನೋಡುತ್ತಿದ್ದ ಹಾಗೇ ತಂದು ಹಾವಿನ ಪೊಟ್ಟರೆಯಲ್ಲಿ ಹಾಕಿತು. ಕಾವಲುಗಾರರು ಆ ಸರವನ್ನು ತೆಗೆದುಕೊಳ್ಳಲು ಹೋದರು. ಹಾವು ಭುಸ್ಸೆಂದು ಮೇಲಕ್ಕೆ ಎದ್ದಿತು. ಅವರು ಅದನ್ನು ಕೊಂದು ಒಡವೆಯನ್ನು ತೆಗೆದುಕೊಂಡು ಹೋದರು. ಕಾಗೆಗಳಿಗೆ ನೆಮ್ಮದಿಯಾಯಿತು.

ಅದರಿಂದ ಬುದ್ಧಿವಂತರಿಗೆ ಅಸಾಧ್ಯವಾದುದೇ ಇಲ್ಲ. ಬುದ್ಧಿಯಿರುವವನಿಗೆ ಬಲವೇ ಹೊರತು ಬುದ್ಧಿಯಿಲ್ಲದವನಿಗೆ ಬಲವೆಲ್ಲಿ ಬಂತು? ಮದದಿಂದ ಕೊಬ್ಬಿದ ಸಿಂಹವನ್ನು ಮೊಲವು ಕೊಲ್ಲಲಿಲ್ಲವೆ?''

" ಹಾಗೆಂದರೇನು? ''

ದಮನಕನು ಹೇಳಿತು:—



# ಸಿಂಹವನ್ನು ಕೊಂದ ಮೊಲದ ಕಥೆ

ಒಂದಾನೊಂದು ವನದಲ್ಲಿ ಭಾಸುರಕನೆಂಬ ಸಿಂಹವೊಂದಿತ್ತು ಅದಕ್ಕೆ ಮದವು ಬಂದು ದಿನ ದಿನವೂ ಸಿಕ್ಕಿಸಿಕ್ಕಿದ ಮೃಗಗಳನ್ನೆಲ್ಲಾ ಕೊಲ್ಲುತ್ತಾ ಬಂತು. ಆಗ ಕಾಡಿನಲ್ಲಿದ್ದ ಜಿಂಕೆ ಹಂದಿ ಎಮ್ಮೆ ಮೊಲ ಮೊದಲಾಗಿ ಎಲ್ಲಾ ಪ್ರಾಣಿಗಳೂ ಒಂದು ಗೂಡಿ,ಆ ಸಿಂಹದ ಬಳಿಗೆ ಹೋದುವು. "ಸ್ವಾಮಿಯೇ, ನಿತ್ಯವೂ, ಹೀಗೆ ಅನ್ಯಾಯವಾಗಿ ವಧೆ ಮಾಡಿದರೆ ನಿನಗೇನು ಲಾಭ? ನಿನಗೆ ಊಟಕ್ಕೆ ಒಂದು ಮೃಗವು ಸಾಕು. ಅದರಿಂದ ನಮ್ಮೊಡನೆ ಒಂದು ನಿಬಂಧವನ್ನು ಮಾಡಿಕೊ. ಇವೊತ್ತಿನಿಂದ ನಿನಗೆ ಊಟದಹೊತ್ತಿಗೆ ಸರಿಯಾಗಿ ಯಾವುದಾದರೂ ಒಂದು ಮೃಗವನ್ನು ಸರ್ತಿ ಪ್ರಕಾರ ಕಳುಹಿಸಿಕೊಡುವೆವು. ಇದ ರಿಂದ ನಿನಗೂ ಬೇಟೆಯ ಕಷ್ಟ ತಪ್ಪುವುದು. ನಮಗೆ ಅನೇಕರು ಸಾಯುವುದು ತಪ್ಪುವುದು. ಇದು ರಾಜ ಧರ್ಮಕ್ಕೂ ಅನುಸಾರ ವಾಗಿರುವುದು. ಕೇಳಿಲ್ಲವೆ?

ಅರಸಾದವನು ರಾಜ್ಯವನ್ನು ರಸಾಯನವನ್ನು ಒಂದೇಸಲ ನುಂಗದೆ ಚಪ್ಪರಿಸುವಂತೆ,ಮೆಲ್ಲ ಮೆಲ್ಲಗೆ ಉಪಭೋಗಿಸುತ್ತಿರಬೇಕು. ಹಾಗಿದ್ದರೆ, ಆ ಬುದ್ಧಿವಂತನಿಗೆ ರಾಜ್ಯಲಕ್ಷ್ಮಿಯು ಬೇಕಾದುದನ್ನು ಕೊಡುವಳು. ಕಡೆದು ಕಡೆದು ಅರಣಿಯಿಂದ ಅಗ್ನಿಯನ್ನು ಪಡೆದು ಕೊಳ್ಳುವಂತೆ, ಭೂಮಿಯನ್ನೂ ಪಾಲಿಸುತ್ತ ಪಾಲಿಸುತ್ತ ತನಗೆ ಬೇಕಾದುದನ್ನು ಪಡೆದುಕೊಳ್ಳಬೇಕು. ಪ್ರಜೆಗಳನ್ನು ನ್ಯಾಯವಾಗಿ ಪಾಲಿಸಿದರೆ ಸ್ವರ್ಗವು ಸಿಕ್ಕುವುದು. ಅನ್ಯಾಯಮಾಡಿ ಪ್ರಜೆಗ ಳನ್ನು ಪೀಡಿಸಿದರೆ, ಧರ್ಮವು ನಾಶವಾಗುವುದು. ಪಾಪವೂ ಅಪ ಕೀರ್ತಿಯೂ ತಪ್ಪದೆ ಬರುವುವು. ಗೋಪನು ಹಸುವನ್ನು ತಿಂಡಿ ತೀರ್ಥಗಳನ್ನು ಕೊಟ್ಟು ಕಾಪಾಡಿ ಹಾಲನ್ನು ಕರೆದು ಕೊಳ್ಳುವಂತೆ ದೇಶವನ್ನು ಕಾಪಾಡಿ ಅರಸು ತನಗೆ ಬರಬೇಕಾದುದನ್ನು ತೆಗೆದು

ಕೊಳ್ಳಬೇಕು. ಹಾಗಿಲ್ಲದೆ ಮೇಕೆಯನ್ನು ಕೊಂದು ತಿಂದಂತೆ ಮಾಡಿದರೆ ಏನು ಫಲವಾದೀತು? ಫಲವನ್ನು ಪಡೆಯಬೇಕೆಂಬ ಅರಸು ಪ್ರಯತ್ನಮಾಡಿ ದಾನ ಮಾನಗಳೆಂಬ ನೀರನ್ನು ಹೊಯ್ದು, ತೋಟಗಾರನು ಗಿಡಗಳನ್ನು ಕಾಪಾಡುವಂತೆ ಭೂಮಿಯನ್ನು ಕಾಪಾಡಬೇಕು. ಅರಸು ಎಂಬ ದೀಪವು ತನ್ನ ಶುಭಗುಣಗಳೆಂಬ ದಾರಗಳನ್ನು ಪ್ರಜೆಗಳಲ್ಲಿ ಹರಡಿ, ಅವರಲ್ಲಿರುವ ಸ್ನೇಹವನ್ನು ವಿಶ್ವಾಸದಿಂದ ಎಳೆದುಕೊಳ್ಳಬೇಕು. ಮೊಳಕೆಯನ್ನು ಕಾಪಾಡಿದರೆ ಅದು ಮರವಾಗಿ ಕಾಲದಲ್ಲಿ ಹಣ್ಣು ಕೊಡುವುದಲ್ಲವೆ? ಹಾಗೆ ಲೋಕವನ್ನು ಅನುಗ್ರಹ ಮಾಡುವ ಅರಸುಗಳು ತಾವೂ ಬೆಳೆಯುವರು. ಅದರಿಂದ ನಮ್ಮ ಮಾತನ್ನು ನಡೆಸಿಕೊಡಬೇಕು.'' ಎಂದು ಪ್ರಾರ್ಥಿಸಿಕೊಂಡುವು.

ಆ ಪ್ರಜೆಗಳ ಮಾತನ್ನು ಕೇಳಿ ಭಾಸುರಕನು:– ನೀವು ಹೇಳಿದುದು ಸರಿ. ಆದರೆ, ಯಾವುದಾದರೊಂದು ದಿನ ನೀವು ಮೃಗವನ್ನು ಕಳುಹಿಸುವುದು ತಪ್ಪಿದರೆ ಎಲ್ಲರನ್ನೂ ಹೊಡೆದು ಹಾಕುವೆನು.'' ಎಂದು ಅವರೊಡನೆ ನಿಬಂಧನವನ್ನು ಮಾಡಿಕೊಂಡು ಅವರನ್ನೆಲ್ಲ ಕಳುಹಿಸಿಕೊಟ್ಟಿತು. ಅಂದಿನಿಂದ ಪ್ರತಿದಿನವೂ ಕ್ರಮವಾಗಿ ಒಂದೊಂದು ಮೃಗವು ಸಿಂಹದ ಊಟಕ್ಕೆ ಬರುವುದು. ಮಿಕ್ಕ ಮೃಗಗಳು ನಿರ್ಭಯವಾಗಿ ಅರಣ್ಯದಲ್ಲಿ ತಿರುಗಿಕೊಂಡಿದ್ದುವು.

ಒಂದು ಸಲ ಮೊಲವು ಬರಬೇಕಾಗಿ ಬಂತು. ಎಲ್ಲರೂ ಮೊಲವು ಹೋಗಬೇಕು ಎಂದುವು. ಅದಕ್ಕೆ ಇಷ್ಟವಿಲ್ಲದಿದ್ದರೂ ಯತ್ನವಿಲ್ಲದೆ ಮೆಲ್ಲ ಮೆಲ್ಲಗೆ ಬರುತ್ತ, ಏನಾದರೂ ಮಾಡಿ ಈ ಸಿಂಹವನ್ನು ಮುಗಿಸಬೇಕು ಎಂದು ಒಂದು ಉಪಾಯವನ್ನು ಚಿಂತಿಸಿತು. ಹಾಗೆ ಮೆಲ್ಲಗೆ ತೂಕಡಿಸುತ್ತ ಬರುವುದರಲ್ಲಿ ಸಿಂಹದ ಊಟದ ವೇಳೆಯು ಕಳೆದು ಹೋಯಿತು. ಆದರೂ ಅದು ಅವಸರ ಪಡದೆ

ಬರುತ್ತಿರುವಾಗ ದಾರಿಯಲ್ಲಿ ಒಂದು ಭಾವಿಯು ಸಿಕ್ಕಿತು. ಅದರಲ್ಲಿ ಬಗ್ಗಿ ನೋಡಿದರೆ ಅದರ ಪ್ರತಿಬಿಂಬವು ಕಾಣಿಸಿತು. ಅದನ್ನು ನೋಡಿ "ಆಹಾ! ಇದೇ ಸರಿಯಾದ ಉಪಾಯ. ಭಾಸುರಕನನ್ನು ರೇಗಿಸಿ, ಈ ಭಾವಿಗೆ ಹಾಕುನಂತೆ ಮಾಡುವೆನು." ಎಂದು ಮಾಡಬೇಕಾದುದೆಲ್ಲವನ್ನೂ ಗೊತ್ತುಮಾಡಿಕೊಂಡು ಭಾಸುರಕನ ಬಳಿಗೆ ಸಂಜೆಯುವೇಳೆಗೆ ಬಂತು. ಸಿಂಹವು ಹಸಿವಿನಿಂದ ರೇಗಿ ಕಟವಾಯಿಗಳನ್ನು ಸವರಿಕೊಳ್ಳುತ್ತಾ ರೇಗಿ ರೇಗಿ ಬೀಳುತ್ತಿತ್ತು. "ಎಲೆ ಮೊಲವೆ, ಮೊದಲನೆಯದಾಗಿ ನೀನು ಅಲ್ಪನು. ನನ್ನ ಹೊಟ್ಟೆಗೆ ನಿನ್ನನ್ನು ತಿಂದರೆ ಸಾಲದು. ಎರಡನೆಯದಾಗಿ ನೀನು ಇಷ್ಟು ಹೊತ್ತು ಮಾಡಿಕೊಂಡು ಬಂದಿರುವೆ. ಈ ಅಪರಾಧಕ್ಕಾಗಿ ನಿನ್ನನ್ನು ಮೊದಲು ಸಂಹಾರಮಾಡಿ, ನಾಳೆ ಬೆಳಗಿನೂಟಕ್ಕೆ ಮಿಕ್ಕ ಮೃಗಗಳನ್ನೆಲ್ಲಾ ಕೊಲ್ಲುವೆನು" ಎಂದು ಹಾರಾಡಿತು.

ಮೊಲವು ವಿನಯವಾಗಿ ಹೇಳಿತು:— ಸ್ವಾಮಿ, ಅಪರಾಧವು ನನ್ನದಲ್ಲ. ಮೃಗಗಳದೂ ಅಲ್ಲ. ಕಾರಣವನ್ನು ಆಲಿಸಬೇಕು. ಮೃಗಗಳು ನಾನು ಸಣ್ಣದೇಹದವನು ಎಂದು ಒಟ್ಟು ಐದು ಮೊಲಗಳನ್ನು ಕಳುಹಿಸಿಕೊಟ್ಟರು. ದಾರಿಯಲ್ಲಿ ಬರುವಾಗ ಇನ್ನೊಂದು ಸಿಂಹವು ಅಡ್ಡಗಟ್ಟಿ "ಲೋ, ಎಲ್ಲಿಗೆ ಹೊರಟಿರುವಿರಿ? ನಿಮ್ಮ ದೇವರನ್ನು ಸ್ಮರಿಸಿ" ಎಂದಿತು. "ನಾವು ಕಾಡಿನ ಮೃಗಗಳು ಮಾಡಿಕೊಂಡಿರುವ ನಿಬಂಧನವಂತೆ ನಮ್ಮ ಅರಸ ಭಾಸುರಕನ ಊಟಕ್ಕೆ ಹೋಗುತ್ತಿರುವೆವು." ಎಂದು ನಾನು ಹೇಳಿದೆನು. ಅದಕ್ಕೆ ಅದು "ಈ ಕಾಡೆಲ್ಲ ನನ್ನದು ನಿಮ್ಮ ಮೃಗಗಳು ಇನ್ನುಮೇಲೆ ನನ್ನೊಡನೆ ನಿಬಂಧನ ಮಾಡಿಕೊಳ್ಳಬೇಕು. ಆ ಭಾಸುರಕನು ಕಳ್ಳ, ಅವನೇ ಅರಸನಾಗಿದ್ದರೆ, ಇಲ್ಲಿ ನಾಲ್ಕು ಮೊಲಗಳಿರಲಿ. ನೀನು ಹೋಗಿ ಅವನನ್ನು ಬೇಗ ಕರೆದುಕೊಂಡುಬಾ. ನಮ್ಮಿಬ್ಬರಿಗೂ ಯುದ್ಧವಾಗಿ ಗೆದ್ದವನು ರಾಜನಾಗಿ ನಿಮ್ಮೆಲ್ಲರನ್ನೂ ತಿನ್ನಲಿ" ಎಂದು ಆರ್ಭಟಿಸಿತು.

ನಾನು ಅದರಂತೆ ತಮ್ಮಬಳಿಗೆ ಬಂದಿರುವೆನು. ಅದರಿಂದ ಹೊತ್ತಾಯಿತು. ಇನ್ನುಮುಂದೆ ತಮಗೆ ತೋರಿದಂತೆ ಮಾಡಬಹುದು.'' ಎಂದಿತು. ಭಾಸುರಕನು "ಹಾಗೇನು? ಮೊದಲು ಆ ಕಳ್ಳನನ್ನು ತೋರಿಸು. ನಡೆ. ನನ್ನ ಕೋಪವನ್ನು ಅವನಮೇಲೆ ತೋರಿಸುವೆನು.'' ಎಂದು ಗರ್ಜಿಸಿತು.

ಮೊಲವು ಹೇಳಿತು: "ಮಹಾಸ್ವಾಮಿ, ಆ ಕಳ್ಳನು ದುರ್ಗಮಧ್ಯದಲ್ಲಿರುವನು. ದುರ್ಗದಿಂದ ಈಚೆಗೆ ಬಂದು ನಮ್ಮನ್ನು ಹಿಡಿದನು. ಈಗ ಮತ್ತೆ ದುರ್ಗದಲ್ಲಿರುವನು. ಆದರಿಂದ ಅವನನ್ನು ಹಿಡಿಯುವುದು ಸುಲಭವಲ್ಲ,''ಎನ್ನಲು, ಭಾಸುರಕನು ರೇಗಿ ಹೇಳಿತು: "ಅವನು ದುರ್ಗದಲ್ಲೇ ಇರಲಿ, ನೀನು ನನಗೆ ಆ ದುರ್ಗವನ್ನೇ ತೋರಿಸು. ಶತ್ರುವನ್ನೂ ರೋಗವನ್ನೂ ಹುಟ್ಟುತ್ತಿದ್ದ ಹಾಗೆಯೇ ಮಟ್ಟಹಾಕಬೇಕು. ಬೆಳೆಯಲು ಬಿಟ್ಟರೆ ನಮ್ಮನ್ನೇ ತಿಂದೀತು.''

ಮೊಲವು ಇನ್ನೂ ರೇಗಿಸಬೇಕೆಂದು "ಪ್ರಭು, ಅವನು ಬಲವಂತನಂತೆ ಕಾಣಿಸುತ್ತಾನೆ. ಶತ್ರುವಿನ ಸಾಮರ್ಥ್ಯವನ್ನು ತಿಳಿಯದೆ ಹೋಗವುದೇ?'' ಎಂದಿತು. ಭಾಸುರಕನು ಇನ್ನೂ ರೇಗಿ "ನಿನಗೇಕೆ ಅದೆಲ್ಲ? ದುರ್ಗವನ್ನು ತೋರಿಸು ನಡೆ'' ಎಂದು ನುಗ್ಗಿತು. ಮೊಲವು "ಹಾಗಾದರೆ ಸ್ವಾಮಿಯ ಚಿತ್ತ'' ಎಂದು ಮುಂದೆ ನಡೆಯಿತು. ಕರೆದುಕೊಂಡುಹೋಗಿ ಆ ಬಾವಿಯನ್ನು ತೋರಿಸಿ, "ದೇವ. ಇದೇ ಶತ್ರುವಿನ ದುರ್ಗ. ಆ ಕಳ್ಳನು ಇದರಲ್ಲಿ ಅವಿತಿರುವನು''ಎಂದಿತು. ಆ ಮೂರ್ಖ ಸಿಂಹವು ಬಾವಿಯಲ್ಲಿ ಬಗ್ಗಿನೋಡಿ, ಅದರಲ್ಲಿ ಕಂಡ ತನ್ನ ಪ್ರತಿಬಿಂಬವನ್ನು ಶತ್ರು ಸಿಂಹವೆಂದುಕೊಂಡು ತಾನು ಗರ್ಜಿಸಿತು. ಆ ಗರ್ಜನವು ಬಾವಿಯಿಂದ ಮೊಳಗಿ ಬರಲು, ಅದು ಶತ್ರುವಿನ ಪ್ರತಿ ಗರ್ಜನವೆಂದುಕೊಂಡು ಶತ್ರುವಿನಮೇಲೆ ಹಾರುವೆನೆಂದು ಹಾರಿ ನೀರಿನಲ್ಲಿ ಬಿದ್ದು ಪ್ರಾಣಬಿಟ್ಟಿತು. ಆದರಿಂದ

ಬುದ್ಧಿಯಿದ್ದವನೇ ಬಲಶಾಲಿಯೆಂದು ನಾನು ಹೇಳಿದುದು. ಅದ ರಿಂದ ನೀನು ಒಪ್ಪಿದರೆ ಹೋಗಿ ಅವರ ಮೈತ್ರಿಯನ್ನು ಒಡೆಯು ವೆನು'' ಎಂದಿತು.

ಕರಟಕನು '' ಹಾಗಾದರೆ ಹೋಗು. ನಿನಗೆ ಒಳ್ಳೆಯ ದಾಗಲಿ '' ಎಂದು ಆಶೀರ್ವಾದವಮಾಡಿ ಕಳುಹಿಸಿಕೊಟ್ಟಿತು.

ದಮನಕನು ಹೋಗಿ ಸಂಜೀವಕನು ಇಲ್ಲದ ಸಮಯವನ್ನು ನೋಡಿ ಪಿಂಗಲಕನ ಬಳಿಗೆ ಹೋಗಿ ನಮಸ್ಕಾರ ಮಾಡಿ ನಿಂತು ಕೊಂಡಿತು. ಪಿಂಗಲಕನು ''ಏನಯ್ಯಾ, ಬಹುದಿನದಿಂದ ಕಾಣ ಲಿಲ್ಲ?'' ಎನ್ನಲು, ನರಿಯು ''ದೇವ, ನಮ್ಮಿಂದ ತಮಗೆ ಆಗಬೇ ಕಾದ ಕಾರ್ಯವು ಯಾವುದೂ ಇಲ್ಲ. ಅದರಿಂದ ನಾನು ಬರಲಿಲ್ಲ. ಆದರೆ ರಾಜಕಾರ್ಯವು ಕೆಡುವುದಲ್ಲಾ ಎಂದು ಹೊಟ್ಟೆಯುರಿಯಿತು. ಅದಕ್ಕಾಗಿ ನಾನೇ ತಮ್ಮ ಬಳಿಗೆ ಬಂದೆನು.'' ಕೇಳಿಲ್ಲವೆ?

ಪ್ರಿಯವಪ್ರಿಯವಿದು ಎನ್ನದೆ। ಶುಭವಶುಭವಿದೆಂದೆನ್ನದೆ ||
ಕೇಳದೆ ಇರೆಯುಂ ತನ್ನ। ಹಿತವಂ ನುಡಿವುದೆ ಧರ್ಮ|| ಎಂದಿತು

ಅದು ಏನೋ ಹೇಳಬೇಕೆಂದು ಬಂದಿರುವುದನ್ನು ತಿಳಿದು ಸಿಂಹವು ''ಏನು ಹೇಳಬೇಕೆಂದಿರುವೆಯೋ ಹೇಳು.'' ಎಂದು ಧೈರ್ಯಗೊಟ್ಟಿತು. ನರಿಯು ಧೈರ್ಯವಾಗಿ ''ದೇವ, ಸಂಜೀವಕನು ಮಹಾ ಪಾದಗಳಿಗೆ ದ್ರೋಹವನ್ನು ಎಣಿಸಿರುವನು. ನಾನು ಅವನ ವಿಶ್ವಾಸಪಾತ್ರನು. ನನ್ನನ್ನು ಏಕಾಂತದಲ್ಲಿ ಕರೆದು, ದಮನಕ, ನಿಮ್ಮ ಅರಸು ಪಿಂಗಲಕನ ಗುಟ್ಟೆಲ್ಲ ತಿಳಿಯಿತು. ಅದರಿಂದ ಅವ ನನ್ನು ವಧಿಸಿ, ನಾನೇ ಮೃಗರಾಜನಾಗುವೆನು. ನೀನೇ ಮಂತ್ರಿಯು ''ಎಂದಿತು.'' ಎಂದು ಹೇಳಿತು.

ಪಿಂಗಲಕನು ವಜ್ರಾಯುಧದ ಏಟನಂತೆ ಕಠೋರವಾದ ಆ ಮಾತುಗಳನ್ನು ಕೇಳಿ ಏನು ಉತ್ತರ ಕೊಡಬೇಕೆಂದು ತೋರದೆ

ಸೊಂಕಾಗಿ ಕುಳಿತುಬಿಟ್ಟಿತು. ದಮನಕನು ಹೇಳಿತು: "ಸ್ವಾಮಿ ತಾವು ಸಂಜೀವಕನ ಮೇಲೆ ಅಭಿಮಾನವಿಟ್ಟು ಮಂತ್ರಿಯನ್ನು ಮಾಡಿದಿರಿ. ಅವನೇ ತಮ್ಮನ್ನು ಕೊಲ್ಲುವನು. ಕೇಳಿಲ್ಲವೆ? ಅರಸು ರಾಜ್ಯವಾಳುವುದರಲ್ಲಿ ಒಬ್ಬನನ್ನೇ ಕೇಳಿ ಮಾಡುವುದಾದರೆ, ಆ ಮಂತ್ರಿಗೆ ತನ್ನನ್ನು ಬಿಟ್ಟರೆ ಇನ್ನಿಲ್ಲ ಎನ್ನಿಸಿ, ಅವನಿಗೆ ತಾನು ಆಳು ಎನ್ನುವುದು ಮರೆತು ಹೋಗುವುದು. ಅವನಿಗೆ ಸ್ವತಂತ್ರನಾಗುವ ಆಸೆಯು ಹುಟ್ಟುವುದು. ಆ ಆಸೆಯಿಂದ ಅವನು ಅರಸನ ಪ್ರಾಣಕ್ಕೆ ಸಂಚಕಾರ ತರುವನು. ಅಲ್ಲವೇನೋ ನೋಡಿ."

ಆ ವೇಳೆಗೆ ಪಿಂಗಲಕನಿಗೆ ಮತ್ತೆ ಚೈತನ್ಯವು ತೋರಿತು. ಹೇಳಿದನು:—"ಸಂಜೀವಕನು ನನಗೆ ಪ್ರಾಣ ಸಮಾನನಾದ ಭೃತ್ಯನು. ಅವನು ನನ್ನ ಮೇಲೆ ಕತ್ತಿ ಕಟ್ಟುವನೇ?"

"ದೇವ, ಭೃತ್ಯನೋ ಅಭೃತ್ಯನೋ, ಆ ವಿಚಾರವಿರಲಿ. ಕೇಳಿಲ್ಲವೆ? ಅರಸನ ಐಶ್ವರ್ಯವನ್ನು ಕಂಡು ಬಾಯಿ ಬಾಯಿ ಬಿಡದವರೂ ಉಂಟೆ? ಅದನ್ನು ಹಿಡಿಯುವುದಕ್ಕೆ ಕೈಲಾಗದ ದುರ್ಬಲರು ಅರಸನನ್ನೇ ಸೇವಿಸುವರು. ಅಷ್ಟೆ!"

"ನೀನು ಇಷ್ಟು ಹೇಳಿದರೂ, ದಮನಕ, ಅವನ ಮೇಲೆ ನನ್ನ ಮನಸ್ಸು ಕೋಪಗೊಳ್ಳದಿರುವುದು. ರೋಗವಿದ್ದರೂ ದೇಹವು ಯಾರಿಗೆ ಬೇಡವಾಗುವುದು? ಹಾಗೆಯೇ ದುಷ್ಟನೆಂದು ಹೇಳುತ್ತಿದ್ದರೂ ಸಂಜೀವಕನು ನನಗೆ ಪ್ರಿಯನೇ ಆಗಿರುವನು."

"ಅದರಿಂದಲೇ ಈ ದೋಷವು. ಕೇಳಿಲ್ಲವೆ?

ಅರಸನು ಕಣ್ಣಿಂ ನೋಡಲು ಸಾಕು ||
**ಸಿರಿಯೊಲಿವಳಲಾ ಕುಲವಂ ಗಣಿಸದೆ || ೩೧ ||**

ಜೊತೆಗೆ ಸ್ವಾಮಿಯು ಸಂಜೀವಕನಲ್ಲಿ ಯಾರಲ್ಲಿಯೂ ಇಲ್ಲದ ಯಾವ ಗುಣ ವಿಶೇಷವನ್ನು ಕಂಡು ಹತ್ತಿರದಲ್ಲಿ ಇಟ್ಟುಕೊಂಡಿರಿ.

ತಾವು 'ಇದು ದೊಡ್ಡ ಆಕಾರವುಳ್ಳುದು; ಶತ್ರುಗಳನ್ನು ಗೆಲ್ಲುವುದರಲ್ಲಿ ಸಹಾಯವಾಗುವುದು' ಎಂದುಕೊಂಡಿದ್ದರೆ, ಇದು ಹುಲ್ಲು ತಿನ್ನುವ ಪ್ರಾಣಿ, ತಮಗೆ ಇರುವ ಶತ್ರುಗಳು ಮಾಂಸ ಭೋಜನರು. ಅವರ ಮೇಲೆ ಈ ಎತ್ತು ಹಾಯಲಾರದು. ಆದರಿಂದ ಇದನ್ನು ಮೊದಲು ಕೊಲ್ಲೋಣವಾಗಲಿ.''

ಪಿಂಗಲಕನು ಒಪ್ಪಲಿಲ್ಲ ಹೇಳಿತು:-

ಮೊದಲು ಗುಣವಂತನೆನೆ ಸಭೆಯಲ್ಲಿ ಹೊಗಳಿ ॥
ಮತ್ತೆ ದೋಷವನೆತ್ತಿ ನುಡಿಯುವುದು ತರವೆ ?
ಹಿಂದೆ ಆಡಿದ ಮಾತು ಭಂಗವಾಗುವುದು || ೩೨ ||

ಅಲ್ಲದೆ, ನೀನೇ ಇವರಿಗೆ ನನ್ನಿಂದ ಅಭಯ ಪ್ರದಾನ ಮಾಡಿಸಿರುವೆಯಲ್ಲವೆ? ಹೀಗಿರಲು ನಾನೇ ಕೊಲ್ಲುವುದೆಂತು? ಸಂಜೀವಕನು ಸರ್ವಪ್ರಕಾರದಿಂದಲೂ ನಮಗೆ ಸ್ನೇಹಿತನೇ! ಅವನ ಮೇಲೆ ನಮಗೆ ಕೊಂಚವೂ ಕೋಪವಿಲ್ಲ. ಅವನು ದ್ರೋಹಿಯೇ ಆದರೂ ನಾನು ಅವನಿಗೆ ವಿರೋಧವನ್ನು ಮಾಡುವುದಿಲ್ಲ.''

ದಮನಕನು ಮತ್ತೆ ಒತ್ತಿ ಹೇಳಿದನು: ''ದೇವ, ದ್ರೋಹಿಯೆಂದು ತಿಳಿದ ಮೇಲೂ ಸುಮ್ಮನಿರುವುದೂ ಕ್ಷಮಿಸುವುದೂ ರಾಜಧರ್ಮವಲ್ಲ. ಕೇಳಿಲ್ಲವೆ?

ಅರ್ಥದಲಿ ಸಾಮರ್ಥ್ಯದಲಿ ಸರಿಗೆ ಸರಿಯಾಗಿ ||
ಮರ್ಮಗಳ ಭೇದಿಸುತ ಬಯಸಿ ರಾಜ್ಯಾರ್ಥವನು ॥
ಕಾರ್ಯಪರನಾಗಿರುವ ಭೃತ್ಯನನು ಭೇದಿಸದಿರೆ ||
ಭೂಪತಿಯು ಸಾವನಪ್ಪುವನು ತಾನಾಗಿ ॥ ೩೩ ॥

ಅಲ್ಲದೆ ಇನ್ನೂ ಒಂದು ಅಂಶವುಂಟು. ತಾವು ಇವನ ಸ್ನೇಹಕ್ಕಾಗಿ ರಾಜ ಧರ್ಮವನ್ನೆಲ್ಲ ತ್ಯಾಜಿಸುತ್ತಿರುವಿರಿ. ರಾಜ ಧರ್ಮವನ್ನು ತಾವು ಬಿಟ್ಟರೆ ಎಂದು ತಮ್ಮ ಪರಿಜನರೆಲ್ಲರೂ ತಮ್ಮನ್ನು ಬಿಡುತ್ತಿರುವರು. ತಾವೂ ತಮ್ಮ ಪರಿವಾರದವರಾದ ನಾವೂ

ಮಾಂಸ ಭೋಜನರು. ಸಂಜೀವಕನು ತೃಣಭೋಜನನು*. ತಾವೂ ಸಂಜೀವಕನಂತೆ ಯಾರನ್ನೂ ವಧಿಸುವುದಿಲ್ಲ ಎಂದು ವ್ರತವನ್ನು ತೊಟ್ಟರೆ, ತಮ್ಮ ಪರಿವಾರದವರ ಹೊಟ್ಟೆಗೇನು ಗತಿ? ಹೊಟ್ಟೆಗಿಲ್ಲದೆ ಯೂ ಇವರೆಲ್ಲ ತಮ್ಮನ್ನು ಸೇವಿಸುವರೋ? ಹಾಗೂ ತಾವು ನಾಶ ವಾಗುವಿರಿ. ಅಂತೂ ಇವನ ಸಹವಾಸದಿಂದ ತಮಗೆ ಬೇಟೆಯ ಲ್ಲಿದ್ದ ಮನಸ್ಸು ಹೋಯಿತು.

ದುಷ್ಟರ ಜೊತೆಯೊಳು ಸಜ್ಜನ ದುರ್ಜನನಾಗುವನು ||
ಕೌರವ ಸಂಗದೆ ಭೀಷ್ಮನು ಕದ್ದನು ಗೋವುಗಳ || ೩೪ ||

ಆದರಿಂದಲೇ ಸಜ್ಜನರು ನೀಚ ಸಂಗವನ್ನು ಬಿಡು ಎನ್ನುವರು. ಕೇಳಲ್ಲವೆ?

ಅರಿಯದೆ ಕುಲಶೀಲಂಗಳ ಕೊಡಬಾರದು ಆಶ್ರಯುವ ||
ಮಂದವಿಸರ್ಪಿಣಿ ತಿಗುಣೆಯ ತಪ್ಪಿಗೆ ತೆತ್ತಿತು ಜೀವ || ೩೫ ||

ಪಿಂಗಲಕನು ಅದೆಂತು ಎನಲು ದಮನಕನು ಹೇಳಿತು:—



## ಹೇನು ಜೀವ ತೆತ್ತ ಕಥೆ

ಒಬ್ಬಾನೊಬ್ಬ ಅರಸನಿಗೆ ಮನೋಹರವಾದ ಮಲಗುವ ಮನೆಯೊಂದಿರುವುದು. ಅಲ್ಲಿ ಸೋರೆಯ ಹೂವಿನ ಹಾಗೆ ಬೆಳ್ಳಗಿ ರುವ ಮೃದುವಾದ ದುಪಟಿಗಳನ್ನು ಹಾಸಿರುವ ಒಂದು ಹಾಸುಗೆ ಯಲ್ಲಿ ಮಂದವಿಸರ್ಪಿಣಿಯೆಂಬ ಕೂರೆಯೊಂದು ಸೇರಿಕೊಂಡಿರು ವುದು. ಆ ಕೂರೆಯು ಆ ಅರಸನ ರಕ್ತವನ್ನು ಕುಡಿದುಕೊಂಡು ಸುಖವಾಗಿ ಬಾಳಿಕೊಂಡಿತ್ತು.

* ತೃಣ=ಹುಲ್ಲು

ಅಗ್ನಿಮುಖನೆಂಬ ತಿಗುಣೆಯು ಎಲ್ಲೆಲ್ಲಿಯೂ ಹುಡುಗಿ ಕೊಂಡು, ಅಲ್ಲಿಗೆ ಬಂತು. ಅದನ್ನು ಕಂಡು ಕೂರೆಯು "ಅಯ್ಯಾ, ನೀನೇಕೆ ಇಲ್ಲಿಗೆ ಬಂದೆ? ಯಾರಾದರೂ ಕಾಣುವುದಕ್ಕೆ ಮುಂಚೆಯೇ ಹೊರಟು ಹೋಗು." ಎಂದು ಹೇಳಿತು. ಅದಕ್ಕೆ ಆ ತಿಗುಣೆಯು ಅಮ್ಮಾ, ಮನೆಗೆ ಬಂದವನು ಅಯೋಗ್ಯನಾದರೂ ಹೀಗೆ ಹೇಳ ಬಾರದು. ಯಾರೇ ಬಂದರೂ ಗೌರವಿಸುವುದು ಗೃಹಸ್ಥರ ಧರ್ಮವು. ಜೊತೆಗೆ ನಾನು ಇದುವರೆಗೆ ಅನೇಕ ಮನುಷ್ಯರ ಅನೇಕಾನೇಕ ವಿಧವಾದ ರಕ್ತಗಳನ್ನು ರುಚಿ ನೋಡಿರುವೆನು. ಶುದ್ಧ ವಾದ ಆಹಾರವಿಲ್ಲದೆ ಅವರ ರಕ್ತಗಳು ಖಾರ, ಕಹಿ, ಒಗರು, ಹುಳಿ, ಯಾಗಿದ್ದುವು. ಇದುವರೆಗೆ ನಾನು ಯಾವಾಗಲೂ ಸಿಹಿ ರಕ್ತವನ್ನು ಕುಡಿದೇಇಲ್ಲ. ನೀನು ದೊಡ್ಡಮನಸ್ಸುಮಾಡಿ ಆಗಬಹುದು ಎಂದರೆ, ನಾನಾವಿಧವಾದ ತಿಂಡಿ ತೀರ್ಥಗಳಿಂದ ಪುಷ್ಟನಾಗಿರುವ ಈ ನರಪ ತಿಯ ದೇಹದಲ್ಲಿರುವ ಮಧುರ ರಕ್ತವನ್ನು ಒಂದಷ್ಟು ಕುಡಿದು ಸೌಖ್ಯ ಪಡುವೆನು. ಎಲ್ಲರೂ ಬದುಕಿರುವುದೇ ಒಂದು ಭೋಜನಸೌಖ್ಯಕ್ಕಾಗಿ.

ಸುಳ್ಳು ಹೇಳುವದೇಕೆ? ಕೆಟ್ಟವರ ಸೇವಿಪರದೇಕೆ?
ತನ್ನೂರ ಬಿಡಲೇಕೆ? ಎಲ್ಲವೂ ಉದರಾರ್ಥವಲ್ತೇ || ೩೬ ||

ನಾನು ಈಗ ಅತಿಥಿಯಾಗಿ ಮನೆಗೆ ಬಂದಿರುವೆನು. ನನಗೋ ಹಸಿವು ತಾನೇ ತಾನಾಗಿ ಪೀಡಿಸುವಷ್ಟು ಬಲವಾಗುತ್ತಿರುವುದು. ನೀನು ನನಗೆ ಊಟಕ್ಕಿಡಲೇಬೇಕು. ಅಲ್ಲದೆ ನೀನೊಬ್ಬಳೇ ಅರಸನ ರಕ್ತ ವನ್ನು ಭೋಜನ ಮಾಡುವುದು ನ್ಯಾಯವೆ?" ಎಂದು ಅನೇಕವಾಗಿ ಹೇಳಿಕೊಂಡಿತು. ಅದನ್ನು ಕೇಳಿ ಮಂದವಿಸರ್ಪಿಣಿಯು "ಎಲೈ ತಿಗುಣೆಯೆ, ನಾನು ಈ ಅರಸನಿಗೆ ಚೆನ್ನಾಗಿ ನಿದ್ದೆ ಹತ್ತುವವರೆಗೂ ಸುಮ್ಮನಿದ್ದು ಅನಂತರ ಊಟ ಮಾಡುವೆನು. ನೀನು ಮೊದಲೇ ನಿನ್ನ ಹೆಸರಿಗೆ ತಕ್ಕಂತೆ ಅಗ್ನಿಮುಖನು. ಅಲ್ಲದೆ ಅಷ್ಟುಹೊತ್ತು ಕಾಯುವವನಲ್ಲ. ಆದರೂ ನೀನೂ ನನ್ನಂತೆ ಕಾಯುವೆಯಾದರೆ

ಇದು.'' ಎಂದಿತು. ತಿಗಣೆಯು ''ಹಾಗೇ ಆಗಲಿ, ನಿನಗಿಂತ ಮುಂಚೆ ಅರಸನನ್ನು ಕಚ್ಚಿದರೆ ದೇವರಾಣೆ'' ಎಂದು ಆಣೆಯನ್ನು ಇಟ್ಟು ಕೊಂಡಿತು.

ಇವೆರಡೂ ಹೀಗೆ ಮಾತುಗಳನ್ನು ಆಡುತ್ತಿರುವಾಗಲೇ ಅರಸು ಬಂದು ಹಾಸುಗೆಯನ್ನು ಸೇರಿದನು. ಆ ತಿಗುಣೆಗೆ ನಾಲಗೆಯ ಚಪಲವು ತಾನೇ ತಾನಾಗಿ, ಆಣೆಯನ್ನು ಮರೆತು, ನಿದ್ದೆ ಹಿಡಿಯು ವುದಕ್ಕೆ ಮುಂಚೆಯೇ ಅರಸನನ್ನು ಕಚ್ಚಿಬಿಟ್ಟಿತು. ಹಿರಿಯರ ಮಾತು ಸುಳ್ಳಾದೀತೆ?

ಉಪದೇಶದಿಂ ಸ್ವಭಾವವನು ತಿದ್ದುವುದು ಅರಿದು * ||
ಚೆನ್ನಾಗಿ ಕುದಿಸಿದರು ನೀರು ತಣ್ಣಗಾಗುವುದು || ೩೭ ||

ಬೆಂಕಿ ತಣ್ಣಗಾದೀತು | ಚಂದ್ರಿಕೆಯು ಸುಟ್ಟೀತು ||
ಮಾನವ ಸ್ವಭಾವವದು | ಏಗೈದು*1 ತಿದ್ದಲರಿದು || ೩೮ ||

ಆಗ ಆ ಅರಸನು ಸೂಜಿಯಿಂದ ತಿವಿಸಿಕೊಂಡವನಂತೆ ಥಟ್ಟನೆ ಹಾಸುಗೆಯಿಂದ ಎದ್ದನು. ಆಳುಗಳನ್ನು ಕರೆದು ಈ ದುಪ್ಪಟಿಯಲ್ಲಿ ಏನೋ ಸೇರಿಕೊಂಡಿದೆ ನೋಡಿ'' ಎಂದನು. ಅಷ್ಟರೊಳಗಾಗಿ ತಿಗುಣೆಯು ಮಂಚದಲ್ಲಿ ಎಲ್ಲಿಯೋ ಸೇರಿಕೊಂಡಿತು. ಆಳುಗಳು ಬಂದು ದುಪ್ಪಟಿಯನ್ನು ತೆಗೆದುಕೊಂಡು ಚೆನ್ನಾಗಿ ಹುಡುಕಿ ಅಲ್ಲಿದ್ದ ಕೂರೆಯನ್ನು ಕೊಂದರು. ಹಾಗಾಗಬಾರದು. ಅದರಿಂದ ತಾವು ಸಂಜೀವಕನನ್ನು ಕೊಲ್ಲಬೇಕು. ಇಲ್ಲದಿದ್ದರೆ ಸಂಜೀವಕನಿಗೆ ತಾವು ಬಲಿಯಾಗಬೇಕು.''

ಅದನ್ನು ಕೇಳಿ ಪಿಂಗಲಕನು ಹೇಳಿದನು:– ದಮನಕ, ನೀನು ಹೇಳುವಂತೆ, ಸಂಜೀವಕನು ನನ್ನ ಮೇಲೆ ಬೀಳಬೇಕು ಎಂದಿರು ವನು ಎಂಬುದಕ್ಕೆ ಸಾಕ್ಷಿಯೇನು?''

---

*ಅರಿದು =ಅಸಾಧ್ಯವು. *1ಏಗೈದು =ಏನೇ ಮಾಡಿದರು.

ದಮನಕನು ಹೇಳಿತು: "ನಾನೇ ಸಾಕ್ಷಿ. ನನ್ನ ಎದುರಾಗಿ ನಾಳೆಬೆಳಿಗ್ಗೆ ಪಿಂಗಲಕನನ್ನು ಕೊಲ್ಲುವೆನು ಎಂದು ಪ್ರತಿಜ್ಞೆ ಮಾಡಿತು. ಇನ್ನೂ ಸಾಕ್ಷಿಯು ಬೇಕೆಂದರೆ, ನಾಳೆ ಬೆಳಿಗ್ಗೆ ತಮ್ಮನ್ನು ಕಾಣುವು ದಕ್ಕೆ ಬರುವಾಗ ಆದರ ಕಣ್ಣು ಮೊಕಗಳು ಕೆಂಪಾಗಿರುವುವು: ತುಟಿ ಗಳು ನಡುಗುತ್ತಿರುವುವು. ದಿನವೂ ಕುಳಿತುಕೊಳ್ಳುವ ಸ್ಥಾನದಲ್ಲಿ ಕುಳಿತುಕೊಳ್ಳುವುದಿಲ್ಲ. ತಮ್ಮನ್ನು ಕ್ರೂರ ದೃಷ್ಟಿಯಿಂದ ನೋಡು ವುದು. ಇದೆಲ್ಲವನ್ನು ನೋಡಿಯಾದರೂ ಮುಂದೆ ಮಾಡಬೇಕಾದು ದನ್ನು ಮಾಡಿ"

ಹೀಗೆಂದು ಹೇಳಿ ಪಿಂಗಳಕನನ್ನು ಒಪ್ಪಿಸಿ, ಅಲ್ಲಿಂದ ದಮನ ಕನು ಸಂಜೀವಕನ ಬಳಿಗೆ ಬಂದು ನಮಸ್ಕಾರ ಮಾಡಿತು. ಸಂಜೀ ವಕನು ಬಾಡಿದ ಮುಖ ಮಾಡಿಕೊಂಡು, ಮೆಲ್ಲ ಮೆಲ್ಲಗೆ ಬಂದ ಆ ದಮನಕನನ್ನು ಕಂಡು "ಮಿತ್ರ, ಬಾ. ನಿನ್ನನ್ನು ನೋಡಿ ಬಹು ಕಾಲವಾಯಿತು. ಚೆನ್ನಾಗಿರುವೆಯಾ? ಏನಾದರೂ ಆಗಬೇಕಾದ ಕಾರ್ಯವಿದೆಯೇ ಹೇಳು. ಮಾಡುವೆನು." ಎಂದಿತು.

ದಮನಕನು "ಮಿತ್ರ, ಸೇವಕರಾದವರಿಗೆ ಚೆನ್ನೇನು? ಚಾರೇನು? ಅವರ ಸಂಪತ್ತುಗಳು ಪರಾಧೀನಗಳು. ಚಿತ್ತವು ಯಾವಾಗಲೂ ಕುದಿಯುತ್ತಿರುವುದು. ಜೀವನದಲ್ಲೂ ಅವರಿಗೆ ಬೇಸರವು. ಇದು ರಾಜಸೇವಕರ ಬಾಳು. ಅಲ್ಲದೆ ನೋಡು. ಒಂದಿಷ್ಟು ಧನಕ್ಕಾಗಿ ಸೇವೆಯನ್ನು ಒಪ್ಪಿಕೊಂಡು, ತಮ್ಮ ಶರೀರವನ್ನೇ ಮಾರಿಕೊಳ್ಳುವ ಈ ಮೂರ್ಖರನ್ನು ಕುರಿತು ಏನು ಹೇಳಲಿ

ಬದುಕಿಯುಂ ಸತ್ತವರು ಐವರಿಂ ದೊರೆವುದಾಭಾರತವು ||
ವ್ಯಾಧಿತನು, ದರಿದ್ರನು, ಮೂರ್ಖನೂರ ಬಿಟ್ಟವ, ನಿತ್ಯ ಸೇವಕನು ||೩೯||

ಸೇವೆಯೆಂಬುದು ನಾಯಿ ಪಾಡೆಂಬ ನುಡಿಯು ನಿಜವಲ್ಲ ||
ನಾಯಿ ತಿರುಗಿದರೆ ತನ್ನಿಚ್ಛೆ ಬಂದಂತೆ ಸೇವಕನು ||
ತಿರುಗಬೇಕೈಯ ತನ್ನೊಡೆಯ ನಿಚ್ಛೆಯಾದಂತೆ || ೪೦ ||

ಅಷ್ಟೇನು? ಹಸನಾಗಿ ಮಾಡಿದ ಕರಿಗಡುಬೂ ಅವನಿಗೆ ರುಚಿಸುವುದೇನು?"

ಸಂಜೀವಕನು ಕೇಳಿದನು:— "ಆಯಿತು, ಏನು ಹೇಳಬೇಕೆಂದಿರುವೆ?"

ದಮನಕನು ಹೇಳಿದನು:— "ಮಿತ್ರ, ಮಂತ್ರಿಗಳಾದವರು ಅರಸರ ರಹಸ್ಯವನ್ನು ಭೇದಿಸಬಾರದು. ಆದರೂ ನಾನು ನಿನ್ನ ಮೇಲಿನ ವಿಶ್ವಾಸದಿಂದ ರಹಸ್ಯವನ್ನೂ ಭೇದಿಸಬೇಕಾಗಿ ಬಂತು. ನೀನು ನನ್ನ ಮಾತಿನ ಮೇಲೆ ಅರಸನ ಬಳಿಗೆ ಬಂದವನು. ಯಾವನಾದರೂ ಒಬ್ಬನನ್ನು ನಂಬಿ ಒಬ್ಬನು ಸತ್ತರೆ, ಆ ಹತ್ಯವು ಆ ನಂಬಿಕೆ ಕೊಟ್ಟವನಿಗೆ ಬರುವುದು ಎಂದು ಮನುವು ಹೇಳಿರುವನು. ಈಗ ಪಿಂಗಲಕನು ನಿನ್ನ ಮೇಲೆ ದ್ರೋಹವನ್ನು ಎಣಿಸಿರುವನು. ಇಂದು ನನ್ನ ಎದುರಾಗಿಯೇ "ನಾಳೆ ಬೆಳಿಗ್ಗೆ ಸಂಜೀವಕನನ್ನು ಸಿಗಿದು ಪರಿವಾರದವರಿಗೆಲ್ಲ ಹಾಕುವೆನು" ಎಂದು ಇನ್ನೊಬ್ಬನೊಡನೆ ಹೇಳುತ್ತಿದ್ದನು. ಆಗ ನಾನು "ಸ್ವಾಮಿ, ಇದು ಯುಕ್ತವಲ್ಲ, ಮಿತ್ರದ್ರೋಹ ಮಾಡಬಾರದು" ಎಂದು ಹೇಳಲು, ಕೋಪದಿಂದ, "ದುಷ್ಟ, ಸಂಜೀವಕನು ಸಸ್ಯಾಹಾರಿ, ನಾವು ಮಾಂಸಾಹಾರಿಗಳು, ನಮುನಮಗೆ ವೈರವು ಹುಟ್ಟುತ್ತಲೇ ಬಂದಿರುವುದು. ಶತ್ರುವನ್ನು ಹೇಗೆ ಕೊಂದರೂ ದೋಷವಿಲ್ಲ. ಸಾಮಾದಿ ಉಪಾಯಗಳು ಹುಟ್ಟಿರುವುದೆಲ್ಲ ಶತ್ರುವನ್ನು ಕೊಲ್ಲುವುದಕ್ಕೆ ತಾನೇ? ಕ್ಷತ್ರಿಯನು ಕೃತ್ಯ, ಅಕೃತ್ಯ, ಎಂದು ಯೋಚಿಸುತ್ತ ಕುಳಿತಿರುವುದೇ? ಕರ್ಮದಿಂದ ಕ್ಷತ್ರಿಯನಾದ ದ್ರೋಣಪುತ್ರನು (ಅಶ್ವತ್ಥಾಮನು) ಧೃಷ್ಟದ್ಯುಮ್ನನು ಮಲಗಿರುವಾಗಲೇ ಕೊಂದುದನ್ನು ಕೇಳಿಲ್ಲವೆ?" ಎಂದನು. ನಾನೂ ಆ ನಿಶ್ಚಯವನ್ನು ಕೇಳಿ, ಅಲ್ಲಿಂದ ಇಲ್ಲಿಗೆ ಬಂದೆನು. ನನಗೆ ಬರುತ್ತಿದ್ದ ವಿಶ್ವಾಸಘಾತಕ ದೋಷವು ತಪ್ಪಿತು. ರಹಸ್ಯವನ್ನು

ನಿನಗೆ ಹೇಳಿರುವೆನು. ಇನ್ನು ನಿನಗೆ ತೋರಿದಂತೆ ಮಾಡು.''

ಆ ಮಾತನ್ನು ಕೇಳಿ ಸಂಜೀವಕನಿಗೆ ತಲೆಯ ಮೇಲೆ ಸಿಡಿಲು ಬಿದ್ದಂತಾಯಿತು: ಎಚ್ಚರ ತಪ್ಪಿತು. ಒಂದು ಗಳಿಗೆಯಾದ ಮೇಲೆ ಪ್ರಜ್ಞೆ ಬಂತು. ವೈರಾಗ್ಯದಿಂದ,'' ಇಷ್ಟೇ ತಾನೇ? ಹಿರಿಯರು ಹೇಳಿಯೇ ಇದ್ದಾರೆ:—

ನೀಚಂಗೊಲಿವಳು ನಾರಿ | ಸ್ನೇಹವ ಕಾಣನು ಅರಸು ॥
ಕೃಪಣಗೆ ಧನ ಸೇರುವುದು | ಬೆಟ್ಟದೆ ಮಳೆಗರೆಯುವುದು ॥ ೪೧ ॥
ಅರಸಗೆ ಸಂಮತ ತಾನೆಂದು| ತಿಳಿದವ ನಿಜದಿಂ ದುರ್ಬುದ್ಧಿ || ೪೨ ||
ವನದೊಳಿರುವುದು ಲೇಸು | ತಿಂದು ತಿಂಬುದು ಲೇಸು ॥
ರೋಗ ಹಿಡಿವುದು ಲೇಸು | ಮೂಟೆ ಹೊರುವುದು ಲೇಸು ||
ಭೂಪತಿಯನಾಶ್ರಯಿಸಿ । ಬಾಳುವುದಕ್ಕಿಂತ ॥ ೪೩ ||

ನಾನು ಈ ಸಿಂಹದೊಡನೆ ಸ್ನೇಹ ಮಾಡಿದುದೇ ತಪ್ಪು.

ಧನದಲ್ಲಿ ಕುಲದಲ್ಲಿ ಸಮರು ಸಮರಾಗಿರಲು ||
ಪರಿಣಯವು ಗೆಳೆತನವು ಶೋಭಿಪುದು, ಅವರಲ್ಲಿ ॥ ೪೪ ||

ಸಮಾನ ಶೀಲ ವ್ಯಸನರಲ್ಲಿ ಮಾತ್ರ ಸಖ್ಯ* ಎಂಬುದನ್ನು ನಾನು ಮರೆತೆನು. ಈಗ ಹೋಗಿ ಆ ಸಿಂಹವನ್ನು ಒಲಿಸಿಕೊಳ್ಳು ವುದು ಎಂಬುದೂ ಸರಿಯಲ್ಲ. ನಾನು ಕೇಳಿಕೊಂಡರೆ ತಾನೇ ಅದು ಒಲಿಯುವುದೇನು? ಕಾರಣವಿಲ್ಲದೆ ಕೋಪ ಮಾಡಿಕೊಂಡವರನ್ನು ಒಲಿಸಿಕೊಳ್ಳುವುದು ಹೇಗೆ? ಸರಿ, ಅರಸನು ನನ್ನ ಮೇಲೆ ಹೆಚ್ಚಾಗಿ ವಿಶ್ವಾಸ ಮಾಡುತ್ತಿದ್ದಾನೆಂದು ಇನ್ನು ಉಳಿದವರು ಚಾಡಿ ಹೇಳಿರ ಬೇಕು. ಅದರಿಂದ ನಿರ್ದೋಷಿಯಾದ ನನ್ನಲ್ಲಿ ಆತನು ಹೀಗೆ ಕೋಪಗೊಂಡಿರುವನು. ಅದರಲ್ಲಿ ಆಶ್ಚರ್ಯವೇನು?''

---

* ಶೀಲವೆಂದರೆ ನಡತೆ, ವ್ಯಸನವೆಂದರೆ ಸಾಧಿಸಬೇಕು ಎಂದಿರುವುದು ಇವೆರಡೂ ಯಾರು ಯಾರಿಗೆ ಸಮವಾಗಿದೆಯೋ ಅವರವರಿಗೇ ಸಖ್ಯವು ಎಂದರೆ ಸ್ನೇಹವು.

ದಮನಕನು ಮತ್ತೆ ಹೇಳಿದನು:— "ಮಿತ್ರ, ಹೀಗೆ ಆಗಿದ್ದರೂ ನಿನಗೆ ಭಯವಿಲ್ಲ. ದುಷ್ಟರ ಮಾತಿನಿಂದ ಅರಸನು ಕೋಪಗೊಂಡಿದ್ದರೂ ನಿನ್ನ ಮಾತುಗಳನ್ನು ಕೇಳಿದರೆ ಮತ್ತೆ ಪ್ರಸನ್ನನಾಗುವನು."

"ಮಿತ್ರ, ನೀನು ಹೇಳುವುದು ಸರಿಯಲ್ಲ. ದುರ್ಜನರು ದುರ್ಬಲರೇ ಆಗಿದ್ದರೂ ಅವರೊಡನೆ ವಾಸಮಾಡುವುದು ಯೋಗ್ಯವಲ್ಲ. ಏನಾದರೂ ಉಪಾಯಮಾಡಿ ಅವರು ಕೊಂದೇ ಕೊಲ್ಲುವರು. ಕಾಕಾದಿಗಳು ಒಂಟೆಯನ್ನು ಕೊಲ್ಲಲಿಲ್ಲವೆ? ಹಾಗಾಗುವುದು."

ದಮನಕನು ಅದೆಂತು ಎಂದು ಕೇಳಲು ಸಂಜೀವಕನು ಹೇಳಿದನು:—



## ನಂಬಿ ಕೆಟ್ಟ ಒಂಟೆಯ ಕಥೆ

ಒಂದಾನೊಂದು ಕಾಡಿನಲ್ಲಿ ಮದೋತ್ಕಟವೆಂಬ ಸಿಂಹವಿತ್ತು. ಅದಕ್ಕೆ ಹುಲಿ, ನರಿ, ಕಾಗೆಗಳು ಮಂತ್ರಿಗಳಾಗಿದ್ದುವು. ಅವು ಅಲ್ಲಲ್ಲಿ ತಿರುಗುತ್ತಿರುವಾಗ ಕ್ರಥನಕ ಎಂಬ ಒಂಟೆಯನ್ನು ಕಂಡುವು. ಸಿಂಹವು "ಇದೇನು ಈ ವಿಚಿತ್ರ ಮೃಗ! ಇದೇನು ಗ್ರಾಮದ ಮೃಗವೋ? ಅರಣ್ಯದ ಮೃಗವೋ? ತಿಳಿದು ಬನ್ನಿ" ಎಂದು ಅಪ್ಪಣೆ ಮಾಡಿತು. ಅದಕ್ಕೆ ವಾಯಸವು "ದೇವ, ಇದು ಗ್ರಾಮದ ಮೃಗವು. ಇದನ್ನು ಒಂಟೆಯೆನ್ನುವರು. ಇದು ತಮಗೆ ಆಹಾರವು. ಕೊಲ್ಲಬಹುದು."

ಎಂದಿತ್ತು. ಸಿಂಹವು, "ಮನೆಗೆ ಬಂದವನನ್ನು ಕೊಲ್ಲಬಾರದು. ಅದರಿಂದ ಇದಕ್ಕೆ ಅಭಯಪ್ರದಾನ ಮಾಡಿ ನನ್ನ ಬಳಿಗೆ ಕರೆದು ತನ್ನಿ. ಅದು ಇಲ್ಲಿಗೇಕೆ ಬಂದಿದೆಯೆಂದು ತಿಳಿದುಕೊಳ್ಳೋಣ" ಎಂದಿತು. ಅವ ರಂತೆ ಒಂಟೆಯನ್ನು ನಂಬಿಸಿ ಅಲ್ಲಿಗೆ ಕರೆತಂದುದೂ ಆಯಿತು.



ಸಿಂಹವು ಅದರ ವೃತ್ತಾಂತವನ್ನೆಲ್ಲಾ ಕೇಳಿ "ಕ್ರಥನಕ, ನೀನು ಮತ್ತೆ ಗ್ರಾಮಕ್ಕೆ ಹೋಗಿ ಭಾರವನ್ನು ಹೊರುವ ಕಷ್ಟಕ್ಕೆ ಸಿಕ್ಕಬೇಡ. ಇಲ್ಲಿಯೇ ಅರಣ್ಯದಲ್ಲಿ ನಿರ್ಭಯವಾಗಿ ನನ್ನ ಜೊತೆ ಯಲ್ಲಿಯೇ ಇದ್ದುಕೊಂಡಿರು." ಎಂದಿತು. ಅದೂ ಆಗಲೆಂದು ಹಾಗೆಯೇ ಸುಖವಾಗಿತ್ತು.

ಹೀಗೆಯೇ ಇರುತ್ತಿರಲು, ಒಂದು ಸಲ ಮದೋತ್ಕಟನು ಕಾಡಿನಲ್ಲಿ ಒಂದು ಮದ್ದಾನೆಯ ಮೇಲೆ ಯುದ್ಧ ಮಾಡಿತು. ಅದು ಒನಕೆಯಂತಿರುವ ತನ್ನ ಕೊಂಬುಗಳಿಂದ ತಿವಿದು ಇದಕ್ಕೆ ನೋವು ಮಾಡಿತು. ಆ ನೋವಿನಿಂದ ಅದು ಎದ್ದು ಓಡಾಡುವುದೂ ಅಸಾಧ್ಯವಾಯಿತು. ಆಗ ಕಾಕಾದಿಗಳೆಲ್ಲರೂ ಬೇಟೆಯಿಲ್ಲದೆ ಹೋಗಿ ಹಸಿವಿನಿಂದ ಬಲುವಾಗಿ ಕಂಗೆಟ್ಟರು. ಆಗ ಸಿಂಹವು "ನೀವು ಹೋಗಿ ಒಂದು ಮೃಗವನ್ನು ಹುಡುಕಿಕೊಂಡು ಬನ್ನಿ. ಹೀಗಿದ್ದರೂ ಅದನ್ನು ಕೊಂದು ನಿಮಗೆ ಭೋಜನ ಮಾಡಿಸುವೆನು" ಎಂದಿತು. ಅವು ಎಷ್ಟು ಹುಡುಕಿದರೂ ಅರಣ್ಯದಲ್ಲಿ ಒಂದು ಮೃಗವೂ ಸಿಕ್ಕಲಿಲ್ಲ.

ಆಗ ನರಿ ಕಾಗೆಗಳು ಯೋಚಿಸಿದುವು. ನರಿಯು ಹೇಳಿತು:— "ಮಿತ್ರ, ಸುಮ್ಮನೆ ಅಲೆದು ಪ್ರಯೋಜನವಿಲ್ಲ. ನಮ್ಮ ಸ್ವಾಮಿಯ ಬಳಿ ಇರುವ ಕ್ರಥನಕನನ್ನೇ ಕೊಂದು ತಿಂದುಬಿಡೋಣ" ಕಾಗೆಯು

ಹೇಳಿತು:— ಆಗಬಹುದು. ಆದರೆ ಅರಸನು ಇದನ್ನು ಕೊಲ್ಲುವುದಿಲ್ಲವೆಂದು ಅಭಯ ಪ್ರದಾನ ಮಾಡಿದ್ದಾನಲ್ಲ?''

''ಮಿತ್ರ, ನಾನು ಅರಸನಿಗೆ ಹೇಳಿ ಇದನ್ನು ಕೊಲ್ಲುವಂತೆ ಮಾಡುವೆನು. ನೀನು ಇಲ್ಲಿಯೇ ಇರು. ನಾನು ಹೋಗಿ ಅಪ್ಪಣೆಯನ್ನು ತರುವೆನು.'' ಎಂದು ನರಿಯು ಸಿಂಹದ ಬಳಿ ಹೋಯಿತು. ಅದಕ್ಕೆ ''ಸ್ವಾಮಿ, ಕಾಡೆಲ್ಲವನ್ನೂ ತಿರುಗಿ ಬಂದೆವು. ಎಲ್ಲಿಯೂ ಯಾವ ಪ್ರಾಣಿಯೂ ಸಿಕ್ಕಲಿಲ್ಲ. ನೀವು ನೋಡೋಣ. ನಾವೋ ಹಸಿವಿನಿಂದ ಒಂದು ಕಾಲು ಕೂಡ ಎತ್ತಿಡಲಾರೆವು. ತಮಗೂ ಮೈಯಲ್ಲಿ ಸ್ವಸ್ಥವಿಲ್ಲ. ಆದರಿಂದ ಅಪ್ಪಣೆಯಾದರೆ ಈ ಒಂಟೆಯ ಮಾಂಸದಿಂದ ಸದ್ಯದಲ್ಲಿ ಕಾಲ ನೂಕೋಣ.'' ಎಂದು ವಿನಯವಾಗಿ ಹೇಳಿತು.

ಅದನ್ನು ಕೇಳಿ ಸಿಂಹವು ಕೋಪಮಾಡಿಕೊಂಡಿತು: ''ಪಾಪಿಷ್ಠ ಮತ್ತೆ ಇಂತಹ ಮಾತು ಆಡಿದರೆ ನಿನ್ನನ್ನು ಕೊಂದುಬಿಡುವೆನು. ನಾನು ಅದಕ್ಕೆ ಅಭಯವನ್ನು ಕೊಟ್ಟಿರುವುದು ಮರೆತೆಯಾ? ಎಲ್ಲಾ ದಾನಗಳಿಗಿಂತಲೂ ಅಭಯ ದಾನವೇ ಉತ್ತಮವೆನ್ನುವರು. ಅದನ್ನೂ ಮರೆತು ಒಂಟೆಯನ್ನು ಕೊಲ್ಲುವುದೇ?'' ಎಂದಿತು. ಅದಕ್ಕೆ ಉತ್ತರವಾಗಿ ನರಿಯು, ''ಸ್ವಾಮಿ, ತಾವು ವಧಿಸಿದರೆ ತಮಗೆ ಪಾಪ. ಅದೇ ತಾನಾಗಿ ಬಂದು ತನ್ನನ್ನು ತಮ್ಮ ಆಹಾರಕ್ಕೆಂದು ಒಪ್ಪಿಕೊಂಡರೆ ಊಟ ಮಾಡುವುದಕ್ಕೆ ತಮಗೇನು?'' ಎಂದು ಕೇಳಿತು. ''ಹಾಗಾದರೆ ನೋಡೋಣ'' ಎಂದು ಸಿಂಹವು ಹೇಳಿತು.

ಅದು ಅಷ್ಟು ಒಪ್ಪುತ್ತಲೂ ನರಿಯು ಓಡಿ ಹೋಗಿ ಎಲ್ಲರನ್ನೂ ಕರೆದು ಹೇಳಿತು: ''ಮಿತ್ರರೆ, ಅರಸನಿಗೆ ಮೈಗೆ ಚೆನ್ನಾಗಿಲ್ಲ. ತಿರುಗುವುದರಿಂದ ಪ್ರಯೋಜನವಿಲ್ಲ. ಅರಸನಿಲ್ಲದಿದ್ದರೆ ನಮ್ಮನ್ನು ಕಾಪಾಡುವವರಿಲ್ಲ. ಆದರಿಂದ ಹಸಿವಿನಿಂದ ಮಲಗಿರುವ ಅರಸನಿಗೆ ನಮ್ಮ ದೇಹವನ್ನು ಸಮರ್ಪಿಸೋಣ. ಅರಸನಿಗೆ ಏನಾದರೂ ಕೆಟ್ಟದ್ದಾದರೆ ಆಮೇಲೆ ನಾವು ಅಗ್ನಿಪ್ರವೇಶ ಮಾಡುವಂತಹ ಸಂದರ್ಭವು

ಒದಗುವುದು. ಈಗಲೇ ಆತನಿಗೆ ತನ್ನ ದೇಹವನ್ನು ಒಪ್ಪಿಸಿ ಆತನ ಸಾಲವನ್ನಾದರೂ ತೀರಿಸೋಣ. ಆತನು ನಮ್ಮ ಕಣ್ಣೆದುರು ತೀರಿ ಹೋದರೆ ನಮಗೆ ನರಕವು ನಿಜವಾಗಿಯೂ ತಪ್ಪುವುದಿಲ್ಲ.''

ಎಲ್ಲರೂ ಸರಿಸರಿಯೆಂದು ಒಟ್ಟಿಗೆ ಸಿಂಹದ ಗುಹೆಗೆ ಹೋದವು. ಸಿಂಹವು ನರಳುತ್ತಾ ಮಲಗಿತ್ತು. ''ಯಾವುದಾದರೂ ಮೃಗವು ಸಿಕ್ಕಿತೇ?'' ಎಂದು ಕೇಳಿತು. ಮಂತ್ರಿಗಳ ಪರವಾಗಿ ಕಾಗೆಯು ಹೇಳಿತು: ''ಸ್ವಾಮಿ, ಎಷ್ಟೋ ಹುಡುಕಿದೆವು. ಒಂದೂ ಸಿಕ್ಕಲಿಲ್ಲ. ಅದಿರಲಿ, ಈಗ ತಾವು ನನ್ನನ್ನು ತಿಂದು ಪ್ರಾಣಧಾರಣ ಮಾಡಿಕೊಳ್ಳಿರಿ. ಸ್ವಾಮಿಗೆ ತೃಪ್ತಿಯಾದರೆ ನನಗೆ ಸ್ವರ್ಗವು ಲಭಿಸುವುದು.

ಭೃತ್ಯನು ಭಕ್ತಿಯೊಳೊಪ್ಪಿಸೆ ಸ್ವಾಮಿಗೆ ಪ್ರಾಣವನು ||
ಅಜರಾಮರ ಪರಮ ಪದವ ತಪ್ಪದೆ ಪಡೆಯುವನು || ೪೫ ||

ಅದನ್ನು ಕೇಳಿ ನರಿಯು ಹೇಳಿತು:—''ಎಲೈ, ನಿನ್ನ ದೇಹವು ಚಿಕ್ಕದು. ನಿನ್ನನ್ನು ತಿಂದುದರಿಂದ ನಮ್ಮೊಡೆಯನಿಗೆ ಹೊಟ್ಟೆಯು ತುಂಬುವುದಿಲ್ಲ. ಅಲ್ಲದೆ ಕಾಗೆಯ ಮಾಂಸವೂ ನಾಯೆಂಜಲೂ ಎಷ್ಟಿದ್ದೀತು? ಅದನ್ನು ತಿಂದರೆ ತಾನೇ ಏನು ತೃಪ್ತಿಯಾದೀತು? ನೀನು ನಿನ್ನ ಸ್ವಾಮಿ ಭಕ್ತಿಯನ್ನು ತೋರಿಸಿದ್ದಾಯಿತು. ನೀನು ಅರಸನ ಉಪ್ಪಿನ ಋಣವನ್ನು ತೀರಿಸಿಕೊಂಡೆ, ಎರಡು ಲೋಕದಲ್ಲಿಯೂ ಭಲೆ ಎನ್ನಿಸಿಕೊಂಡೆ, ಇನ್ನು ನೀನು ಹಾದಿ ಬಿಡು. ನಾನು ಪ್ರಭುವಿನಲ್ಲಿ ವಿಜ್ಞಾಪನ ಮಾಡುವೆನು. ಪ್ರಭು, ನನ್ನನ್ನು ತಿಂದು ತಾವು ಪ್ರಾಣಯಾತ್ರೆಯನ್ನು ನಡೆಸಿ ನನಗೆ ಎರಡು ಲೋಕದಲ್ಲೂ ಸದ್ಗತಿಯಾಗುವಂತೆ ಅನುಗ್ರಹಿಸಬೇಕು.''

ಅದನ್ನು ಕೇಳಿ ಹುಲಿಯು ಹೇಳಿತು:—ನೀನು ಹೇಳಿದ್ದೇನೋ ಸರಿ. ಆದರೆ ನೀನೇನು ದೊಡ್ಡ ದೇಹದವನೇನು? ಜೊತೆಗೆ ನೀನೂ ಸ್ವಾಮಿಯಂತೆ ನಖಾಯುಧನು. ಅದರಿಂದ ಅಭಕ್ಷ್ಯನು. ಕೇಳಿಲ್ಲವೆ? ಪ್ರಾಣವು ಕತ್ತಿನವರೆಗೂ ಬಂದಿದ್ದರೂ ಅಭಕ್ಷ್ಯವನ್ನು ತಿನ್ನ

ಬಾರದು. ಹಾಗೆ ತಿಂದುದೇ ಆದರೆ ಎರಡು ಲೋಕಗಳಲ್ಲೂ ದುರ್ಗತಿಯಾಗುವುದು. ನೀನೇನೋ ನಿನ್ನ ಸ್ವಾಮಿ ಭಕ್ತಿಯಿಂದ ಹಾಗೆ ಹೇಳಿದೆ. ಆಯಿತು. ದಾರಿ ಬಿಡು. ನಾನೂ ಪ್ರಭುವಿನಲ್ಲಿ ಅರಿಕೆ ಮಾಡುವೆನು. ಪ್ರಭುವೆ, ನನ್ನನ್ನು ತಿಂದು ದೇಹ ಧಾರಣ ಮಾಡಿರಿ. ನನಗೆ ಅಕ್ಷಯವಾದ ಸ್ವರ್ಗವಾಸವನ್ನು ಪಾಲಿಸಿರಿ. ನನ್ನ ಕೀರ್ತಿಯು ಭೂಲೋಕದಲ್ಲಿ ಅಪಾರವಾಗಿ ಹರಡಲಿ. ಬೇರೆ ಯೋಚನೆ ಮಾಡಬೇಡಿರಿ.

ಇದೆಲ್ಲವನ್ನೂ ಕೇಳಿ ಒಂಟೆಯೂ ಯೋಚಿಸಿತು:— "ಇವರೆಲ್ಲರೂ ಒಳ್ಳೆ ಒಳ್ಳೆಯ ಮಾತುಗಳನ್ನು ಆಡಿದರು. ಸ್ವಾಮಿಯುಇವರೊಬ್ಬರನ್ನೂ ಕೊಲ್ಲಲಿಲ್ಲ. ಇವರಂತೆಯೇ ನಾನು ಮಾಡಬೇಕು." ಎಂದು ನಿಶ್ಚಯಿಸಿಕೊಂಡು "ನೀನು ಹೇಳಿದ್ದು ಸತ್ಯವಾದರೂ ನೀನು ನಖಾಯುಧನು. ಆದರಿಂದ ನಿನ್ನನ್ನು ಸ್ವಾಮಿಯು ಭಕ್ಷಿಸುವುದೆಂತು? ಆದರಿಂದ ದಾರಿಬಿಡು. ಸ್ವಾಮಿ, ಇವರೆಲ್ಲರೂ ಅಭಕ್ಷ್ಯರು. ಆದರಿಂದ ಸ್ವಾಮಿಯು ನನ್ನನ್ನು ತಿನ್ನೋಣವಾಗಲಿ, ಆದರಿಂದ ನನಗೆ ಇಹಪರಗಳೆರಡೂ ಸಿದ್ಧಿಸಲಿ."

ಒಂಟೆಯು ಹೀಗೆ ಹೇಳುತ್ತಿದ್ದಂತೆಯೇ ನರಿಯೂ ಹುಲಿಯೂ ಮೇಲೆಬಿದ್ದು ಅತ್ತಕಡೆ ಇತ್ತಕಡೆ ಹೊಟ್ಟೆಯನ್ನು ಬಗೆದುವು. ಅದನ್ನು ಹಂಚಿಕೊಂಡು ಎಲ್ಲವೂ ತಿಂದುವು. ಆದರಿಂದ ನಾನು ಹಾಗೆ ಹೇಳಿದೆನು. ನಿಮ್ಮ ಅರಸನು ಕ್ಷುದ್ರಪರಿವಾರವುಳ್ಳವನು ಎಂಬುದನ್ನು ನಾನು ಬಲ್ಲೆನು. ಸಜ್ಜನರು ಅಲ್ಲಿಗೆ ಹೋಗಬಾರದು. ಅಲ್ಲದೆ, ಚಾಡಿಯ ಮಾತನ್ನು ಕೇಳಿದವರು ಏನು ಬೇಕಾದರೂ ಮಾಡುವರು. ಕೇಳಿಲ್ಲವೆ?

ಕಚ್ಚಿ ಕೊಂದರೆ ಹಾವು ಕಿವಿ ಕಚ್ಚಿ ಕೊಲ್ಲುವನು ಚಾಡಿಕಾರ ||
ಹಾವು ತಾ ಕಚ್ಚಿದನ ಕೊಲ್ಲುವುದು ಮನುಜ ಧರ್ಮನು ಪಿಸುಣ ||೪೬||

ಹೇಗಿದ್ದರೂ ಸ್ನೇಹಿತನೆಂದು ನಿನ್ನನ್ನು "ಈಗ ನಾನೇನು ಮಾಡಲಿ?" ಎಂದು ಕೇಳುವೆನು. ಹೇಳು."

"ಹಾಗಾದರೆ ದೇಶಾಂತರ ಹೋಗುವುದು ಒಳ್ಳೆಯದು."

"ಅರಸನು ಕೋಪಗೊಂಡಿರುವಾಗ ದೇಶಾಂತರ ಹೋಗುವುದು ಹಿತವಲ್ಲ. ಸಾಧ್ಯವೂ ಅಲ್ಲ. ಆದ್ದರಿಂದ ಯುದ್ಧವನ್ನು ಬಿಟ್ಟು ಬೇರೆ ದಾರಿಯಿಲ್ಲ; ಅದೇ ಶ್ರೇಯಸ್ಕರವು.

ಒಳ್ಳೆಯ ನಡತೆಯ ಸಜ್ಜನರು ಧೀರರಾಗಿ ಯುದ್ಧದಲ್ಲಿ ಪ್ರಾಣ ಬಿಟ್ಟು ಒಂದೇ ಕ್ಷಣದಲ್ಲಿ ಯಾವ ಪುಣ್ಯಲೋಕಗಳನ್ನು ಪಡೆಯುವರೋ ಆ ಲೋಕಗಳನ್ನು ತಪಸ್ಸಿನಿಂದಾಗಲಿ ನೂರಾರು ದಾನಗಳಿಂದಾಗಲೀ ಪಡೆಯುವುದಕ್ಕೆ ಆಗುವುದಿಲ್ಲ. ಯುದ್ಧಕ್ಕೆ ಹೋದವರು ಸತ್ತರೆ ಸ್ವರ್ಗವು ಸಿಕ್ಕುವುದು; ಬದುಕಿದರೆ ಕೀರ್ತಿಯು ಲಭಿಸುವುದು. ಈ ಎರಡೂ ಶೂರರಿಗಲ್ಲದೆ ಇತರರಿಗೆ ದುರ್ಲಭವು. ಯುದ್ಧದಲ್ಲಿ ಶೂರನ ಹಣೆಯೊಡೆದು ಸುರಿಯುವ ರಕ್ತವು ಬಾಯಿಗಿಳಿದರೆ, ಅದು ಸೋಮಪಾನಕ್ಕೆ ಸಮವು. ಅಂತಹ ಸೋಮಪಾನವು ಸಂಗ್ರಾಮ ಯಜ್ಞದಲ್ಲಿ ಮಾತ್ರ ಲಭಿಸುವುದು. ಹೀಗೆ ಶ್ರೇಯಸ್ಸನ್ನು ಉಂಟುಮಾಡುವ ಯುದ್ಧವೊಂದೇ ನನಗೆ ಆಶ್ರಯವು."

ಅದನ್ನು ಕೇಳಿ ದಮನಕನಿಗೆ ದಿಗಿಲಾಯಿತು: "ಈ ದುರಾತ್ಮನು ಯುದ್ಧಕ್ಕೆ ಸಿದ್ಧನಾಗಿರುವಂತಿದೆ. ಇವನ ದೊಡ್ಡ ಕೊಂಬುಗಳಿಂದ ಒಂದುವೇಳೆ ನಮ್ಮೊಡೆಯನಿಗೆ ಪೆಟ್ಟುಬಿದ್ದರೆ ಬಹಳ ಅನರ್ಥವಾಗುವುದು. ಆದ್ದರಿಂದ ಇವನನ್ನು ದೇಶಾಂತರ ಕಳುಹಿಸುವ ಯೋಚನೆ ಮಾಡಬೇಕು." ಎಂದುಕೊಂಡು ಹೇಳಿತು:—

"ಮಿತ್ರ, ನೀನು ಹೇಳಿದುದೇನೋ ಸರಿ. ಆದರೂ ಸ್ವಾಮಿ ಭೃತ್ಯರಿಗೆ ಸಂಗ್ರಾಮವೆನ್ನುವುದಲ್ಲಿಯದು? ಶತ್ರುವಿನ ಬಲಾಬಲಗಳನ್ನು ತಿಳಿಯದೆ ವೈರವನ್ನು ಆರಂಭಿಸುವುದು ಎಲ್ಲಿಯ ನ್ಯಾಯ? ಸಮುದ್ರ ಟಿಟ್ಟಿಭಗಳ ಕಥೆಯು ಹಾಗಾಗಬಾರದು"

ಸಂಜೀವಕನು "ಅದು ಹೇಗೆ? ಎನ್ನಲು, ದಮನಕನು ಹೇಳಿತು:—



## ಸಮುದ್ರನನ್ನು ಗೆದ್ದ ಟಿಟ್ಟಿಭದ ಕಥೆ.

ಸಮುದ್ರ ತೀರದಲ್ಲಿ ಒಂದುಕಡೆ ಟಿಟ್ಟಿಭಗಳು ವಾಸಮಾಡಿ ಕೊಂಡಿದ್ದುವು. ಕಾಲವು ಬರಲು ಹೆಣ್ಣು ಬಸುರಾಯಿತು. ಆಗ ಅದು ಗಂಡನನ್ನು ಕುರಿತು—" ನಾಥ, ನಾನು ಮೊಟ್ಟೆಯನ್ನಿಡಬೇಕು. ಯಾವುದಾದರೂ ಭದ್ರವಾದ ಸ್ಥಳವನ್ನು ನೋಡು" ಎಂದಿತು. ಗಂಡು " ಪ್ರಿಯೆ, ಸಮುದ್ರತೀರವು ರಮ್ಯವಾಗಿದೆ, ಇಲ್ಲಿಯೇ ಇಡು" ಎಂದಿತು. ಹೆಣ್ಣು " ಹುಣ್ಣಿಮೆಯ ದಿನ ಸಮುದ್ರವು ಉಬ್ಬುವುದು. ಆಗ ಅದು ಮದ್ದಾನೆಗಳನ್ನೂ ಕೊಚ್ಚುವುದು. ಅದರಿಂದ ದೂರವಾಗಿ ಇನ್ನು ಯಾವುದಾದರೂ ಕಡೆಯನ್ನು ನೋಡು" ಎಂದಿತು.

ಗಂಡು ಅದನ್ನು ಕೇಳಿ ನಕ್ಕಿತು: " ಸಮುದ್ರನು ದೊಡ್ಡವನು ನಿಜ. ಆದರೆ ತಾನೆ, ಪ್ರಿಯೆ ನನ್ನ ಮೊಟ್ಟೆಗಳನ್ನು ಕೊಚ್ಚಿಸುವುದು ಎಂದರೆ ಸುಮ್ಮನಾಯಿತೆ? ಬೆಂಕಿಯ ಕೊಂಡವನ್ನು ನುಗ್ಗಿದಂತೆ, ಸಿಂಹವನ್ನು ಕೆಣಕಿದಂತೆ, ಯಮನನ್ನು ಮಾತಾಡಿಸಿದಂತೆ, ನನ್ನ ಸಹವಾಸ. ಅದರಿಂದ ಧೈರ್ಯವಾಗಿ ಇಲ್ಲಿ ಮೊಟ್ಟೆಯನ್ನಿಡು. ಇನ್ನೊಬ್ಬರಿಗೆ ಹೆದರಿಕೊಂಡು ಸ್ವಸ್ಥಾನವನ್ನು ಬಿಡುವವನನ್ನು ಜಡನೆನ್ನಬೇಕು. ಅಂತಹವನನ್ನು ಪಡೆದವಳೂ ಪುತ್ರವತಿ ಎನ್ನಿಸಿಕೊಂಡರೆ, ಇನ್ನು ಬಂಜೆ ಯೆಂಬವಳು ಯಾರು?" ಎಂದು ಗರ್ವದಿಂದ ನುಡಿಯಿತು.

ಅದನ್ನು ಕೇಳಿ ಸಮುದ್ರಕ್ಕೆ ನಗೆ ಬಂತು: "ಎಲೈ ಈ ಟಿಟ್ಟಿಭವು ಇರುವುದು ಒಂದು ಹಿಡಿಯ ಗಾತ್ರ. ಇದರ ಜಂಭವನ್ನು ನೋಡಿ ದೆಯಾ? ಟಿಟ್ಟಿಭವು ಬೆನ್ನಿನಮೇಲೆ ಮಲಗಿ ಆಕಾಶವು ಬಿದ್ದೀತೆಂದು ಕಾಲನ್ನು ಮೇಲಕ್ಕೆತ್ತಿ ಅದನ್ನು ಹಿಡಿದುಕೊಂಡಿದ್ದೇನೆ ಎನ್ನುವುದಂತೆ! ಆಗಲಿ. ಇದರ ಗರ್ವವಾದರೂ ಎಷ್ಟು ಮಟ್ಟಿಗೆ ಇರುವುದು ಎಂಬು ದನ್ನು ಪರಿಕ್ಷಿಸಿ ನೋಡುವೆನು. ಇದರ ಮೊಟ್ಟೆಗಳನ್ನು ಹಾರಿಸುವೆನು. ಏನುಮಾಡುವುದೋ ನೋಡುವೆನು. " ಎಂದುಕೊಂಡು, ಹೆಣ್ಣು ಮೊಟ್ಟೆಯನ್ನು ಇಟ್ಟಮೇಲೆ ಒಂದು ಹುಣ್ಣಿಮೆಯ ದಿನ ಉಬ್ಬಿ ಬಂದಾಗ ಬೇಕೆಂದು ಅವರ ಮೊಟ್ಟೆಗಳನ್ನು ಹಾರಿಸಿಕೊಂಡೇ ಹೋಯಿತು.

ಹೆಣ್ಣು ಗೂಡಿನಲ್ಲಿ ಮೊಟ್ಟೆಗಳು ಇಲ್ಲದಿರುವುದನ್ನು ನೋಡಿ, ಗಂಡನನ್ನು ಕರೆದು ತೋರಿಸಿ " ನಿನಗೆ ಬುದ್ಧಿಯಿಲ್ಲ. ಎಷ್ಟು ಹೇಳಿ ದರೂ ಕೇಳಲಿಲ್ಲ. ಇನ್ನಾದರೂ ಈ ಸ್ಥಳವನ್ನು ಬಿಟ್ಟು ಹೋಗೋಣ. ಗರ್ವದಿಂದ ನನ್ನಮಾತನ್ನು ಕೇಳದೆ ಇರಬೇಡ. ಹೇಳುವುದಿಲ್ಲವೆ?

ಹಿತವಂ ಪೇಳುವ ಗೆಳೆಯರ ನುಡಿಗಳ ಕೇಳದಿರೆ ॥
ದುರ್ಬುದ್ಧಿಯು ಕೆಡುವನು ಕಡ್ಡಿಯ ಬಿಟ್ಟಾಮೆಯ ತೆರದೆ ॥೪೭॥

ಟಿಟ್ಟಿಭವು ಅದು ಹೇಗೆ ಎಂದು ಕೇಳಲು ಟಿಟ್ಟಿಭಿಯು ಹೇಳಿತು:—



## ಬುದ್ಧಿ ಕೇಳದೆ ಕೆಟ್ಟ ಆಮೆಯ ಕಥೆ.

ಒಂದಾನೊಂದು ಸರೋವರದಲ್ಲಿ ಕಂಬುಗ್ರೀವನೆಂಬ ಒಂದು ಆಮೆಯುಂಟು. ಅದಕ್ಕೆ ಸಂಕಟ, ವಿಕಟ, ಎಂಬ ಎರಡು ಹಂಸೆ ಗಳು ಮಿತ್ರರಾಗಿದ್ದರು. ಅವೆರಡೂ ದಿನವೂ ಬಂದು ಆದರೊಡನೆ

ಅನೇಕಾನೇಕ ಪುಣ್ಯ ಪುರುಷರ ಚರಿತ್ರೆಗಳನ್ನು ಕುರಿತು ಮಾತನಾಡಿ ಸಂಜೆಯವರೆಗೂ ಅಲ್ಲಿದ್ದು ಸಂಜೆಯಾಗುತ್ತಲೂ ತಮ್ಮ ಗೂಡುಗಳಿಗೆ ಹೋಗುವುವು.

ಹೀಗೆ ಇರುತ್ತಿರಲು ದೈವಯೋಗದಿಂದ ಅನಾವೃಷ್ಟಿಯು ಬಂದು ಆ ಸರೋವರವು ಬರುಬರುತ್ತ ಒಣಗುತ್ತಾ ಬಂತು. ಆಗ ಆ ಹಂಸಮಿತ್ರರು, ಆಮೆಯ ಸ್ಥಿತಿಯನ್ನು ಕಂಡು ಮರುಕಪಟ್ಟು "ಮಿತ್ರ, ನಿನಗೆ ಎಂತಹ ಕಷ್ಟ ಬಂತು! ಈ ಸರೋವರವು ಕೆಸರಿನ ಕಟ್ಟೆಯಾಗಿರುವುದು. ನೀನು ಇನ್ನು ಇಲ್ಲಿ ಇರುವುದೆಂತು ಎಂದು ನಮಗೆ ದುಃಖವಾಗುತ್ತಿದೆ." ಎಂದುವು. ಅದನ್ನು ಕೇಳಿ ಕಂಬು ಗ್ರೀವನು ಹೇಳಿತು:—ಮಿತ್ರರೆ, ಇಲ್ಲಿ ನೀರಿಲ್ಲವಾಗಿ ನಾವು ಬದುಕು ವುದೇ ಕಷ್ಟವಾಗಿದೆ. ಏನಾದರೂ ಒಂದು ಉಪಾಯವನ್ನು ಚಿಂತಿಸಿ ಬುದ್ಧಿವಂತನಾದವನು ಮಿತ್ರರಿಗೂ ಬಂಧುಗಳಿಗೂ ಆಪತ್ತು ಬಂ ದಾಗ ಪ್ರಯತ್ನಪಟ್ಟು ಉಪಕಾರ ಮಾಡಬೇಕು ಎಂದು ಮನುವು ಹೇಳಿರುವನು. ನನಗೆ ಒಂದು ಉಪಾಯವು ತೋರುವುದು ಕೇಳಿ. ನೀವು ಒಂದು ಕಡ್ಡಿಯನ್ನು ತನ್ನಿ. ಅದನ್ನು ನಾನು ನನ್ನ ಹಲ್ಲು ಗಳಿಂದ ಭದ್ರವಾಗಿ ಕಚ್ಚಿಕೊಳ್ಳುವೆನು. ನೀವು ಅದನ್ನು ನಿಮ್ಮ ಕೊಕ್ಕುಗಳಲ್ಲಿ ಕಚ್ಚಿಕೊಳ್ಳಿ. ಯಾವುದಾದರೂ ನೀರು ಹೆಚ್ಚಾಗಿರುವ ಸರೋವರಕ್ಕೆ ಕರೆದುಕೊಂಡು ಹೋಗಿ" ಎಂದಿತು.

ಅವು ಹೇಳಿದುವು: "ಹೀಗೇನೋ ಆಗಬಹುದು. ಆದರೆ, ನೀನು ಮೌನವಾಗಿರಬೇಕು. ಇಲ್ಲವಾದರೆ ಬಾಯಿಬಿಟ್ಟರೆ ಕೆಳಗೆ ಬಿದ್ದು ಹೋಗುವೆ!" ಆಮೆಯು ಒಪ್ಪಿಕೊಂಡಿತು. ಹಂಸೆಗಳು ಅದ ರಂತೆಯೇ ಒಂದು ಕಡ್ಡಿಯನ್ನು ತಂದುವು ಅದನ್ನು ಆಮೆಯು ನಡುವೆ ಕಚ್ಚಿಕೊಂಡಿತು. ಅವೆರಡೂ ಆ ಕೊನೆ ಈ ಕೊನೆಯನ್ನು ಕಚ್ಚಿ ಕೊಂಡು ಹಾರಿದುವು.

ಅವು ಆಕಾಶದಲ್ಲಿ ಹೋಗುತ್ತಿದ್ದರೆ, ಎಲ್ಲೆಲ್ಲೂ ಜನರು ಅದನ್ನು ಕಂಡು ವಿಸ್ಮಯಪಟ್ಟರು: "ಈ ಹಕ್ಕಿಗಳು ಚಕ್ರದಂತಿರುವ ಏನನ್ನೋ ಹೊತ್ತುಕೊಂಡು ಹೋಗುತ್ತಿವೆ. ನೋಡಿ, ಬನ್ನಿ, ನೋಡಿ, ಬನ್ನಿ." ಎಂದು ಒಬ್ಬರನ್ನೊಬ್ಬರು ಕರೆದರು. ಆ ಕೋಲಾಹಲವನ್ನು ಕೇಳಿ ಕಂಬುಗ್ರೀವನಿಗೆ ಅದೇನು ಎಂದು ಕೇಳಬೇಕು ಎನ್ನಿಸಿತು. ಕುತೂಹಲವು ಹೆಚ್ಚಾಗಿ ಕೇಳಿಯೇ ಬಿಡಬೇಕು ಎಂದು ಅ ಎಂದು ಬಾಯಿ ಬಿಟ್ಟಿತೋ ಇಲ್ಲವೋ ಕೆಳಕ್ಕೆ ಬಿದ್ದು ಚೂರು ಚೂರಾಗಿ ಹೋಯಿತು. ಅದರಿಂದ ಆಮೆಯಂತಾಗಬಾರದು ಎಂದೆನು" ಎಂದು ಹೇಳಿ ಅಷ್ಟೇ ಅಲ್ಲ, ಮುಂದೆ ಬರುವುದನ್ನು ಯೋಚಿಸಿದವನು, ಬಂದಾಗ ನೋಡಿಕೊಳ್ಳುವನು ಇಬ್ಬರೂ ಸುಖವಾಗಿದ್ದರೆ, ಆದದ್ದು ಆಗಲಿ ಎನ್ನುವನು ಹಾಳಾಗುವನು." ಎಂದಿತು.

ಟಿಟ್ಟಿಭವು ಅದು ಹೇಗೆ ಎನ್ನಲು, ಟಿಟ್ಟಿಭಿಯು ಹೇಳಿತು:—



## ಯದ್ಭವಿಷ್ಯನ ಕಥೆ.

ಒಂದಾನೊಂದು ಕಟ್ಟೆಯಲ್ಲಿ ಅನಾಗತವಿಧಾತಾ (ಮುಂದೆ ಬರುವುದನ್ನು ಯೋಚಿಸದವನು) ಪ್ರತ್ಯುತ್ಪನ್ನಮತಿ (ಬಂದಾಗ ನೋಡಿಕೊಳ್ಳುವವನು) ಯದ್ಭವಿಷ್ಯ (ಆದುದಾಗಲಿ) ಎಂಬ ಮೂರು ಮತ್ಸ್ಯಗಳು ಇದ್ದುವು. ಒಂದಾನೊಂದು ದಿನ ಕೆಲವರು ಬೆಸ್ತರು ಅತ್ತಕಡೆ ಬಂದು, ಆ ಸರೋವರದಲ್ಲಿ ಮತ್ಸ್ಯಗಳು ಬೇಕಾದಹಾಗೆ ಇರುವುದನು ಕಂಡು "ಎಲೆಲಾ, ನಾವು ಇದನ್ನು ಕಂಡೇ ಇರಲಿಲ್ಲ. ಇವೊತ್ತಿಗೇನೋ ಸಿಕ್ಕಿದೆ. ಆಗಲೇ ಸಂಜೆಯಾಯಿತು. ನಾಳೆ ಇಲ್ಲಿಗೆ ಬಂದು ಮೀನಿನ ಬೇಟೆ ಮಾಡಬೇಕು." ಎಂದು ಮಾತನಾಡಿಕೊಂಡರು.

ಸಿಡಿಲಿನಂತಹ ಆ ಮಾತನ್ನು ಕೇಳಿ ಅನಾಗತವಿಧಾತನು ಮೀನುಗಳನ್ನೆಲ್ಲಾ ಕರೆದು "ಕೇಳಿದಿರಾ ಬೆಸ್ತನಾಡಿದ ಮಾತನ್ನು? ಈಗಲೇ ನಾವು ಇಲ್ಲಿಂದ ಹೊರಟು ಸಮೀಪದಲ್ಲಿರುವ ಇನ್ನು ಯಾವುದಾದರೂ ಕಟ್ಟೆಗೆ ಹೋಗೋಣ. ಬಲವಾದ ಶತ್ರುವು ಬಂದನು ಎಂಬುದನ್ನು ತಿಳಿದು ಅಶಕ್ತನು ಓಡಿ ಹೋಗಬೇಕು: ಅಥವಾ ಬೇರೊಂದು ದುರ್ಗವನ್ನು ಆಶ್ರಯಿಸಬೇಕು. ಬೇರೆ ಗತಿಯಿಲ್ಲ ಅಲ್ಲದೆ, ಬೇರೆ ಕಡೆಗೆ ಹೋಗಿ ಬದುಕಿಕೊಳ್ಳಲು ದಾರಿಯಿರುವಾಗ ತಾನೂ ಸತ್ತು ತನ್ನವರೂ ಸಾಯುವುದನ್ನು ನೋಡುವುದು ಬುದ್ಧಿವಂತಿಕೆಯಲ್ಲ" ಎಂದು ಹೇಳಿತು.

ಅದನ್ನು ಕೇಳಿ ಪ್ರತ್ಯುತ್ಪನ್ನಮತಿಯು "ನೀನು ಹೇಳಿದುದು ಸರಿ. ಇದು ನನಗೆ ಒಪ್ಪಿತು. ಬೇರೆ ಕಡೆ ಹೋಗೋಣ. ಕೇಳಿಲ್ಲವೆ? ಪರದೇಶಕ್ಕೆ ಹೋದರೆ ಏನಾಗುವುದೋ ಎಂದು ಹೆದರಿ, ಕಾಗೆ, ಜಿಂಕೆ, ಕಾಪುರುಷರು (ಯೋಗ್ಯತೆಯಿಲ್ಲದವರು) ಇದ್ದ ಕಡೆಯೇ ಸಾಯುವರು.

ಬೇರೊಂದು ಕಡೆ ಹೋಗಿ ಬದುಕಲವಕಾಶವಿದ್ದು ||
ತನದೇಶವೆಂದು ಮೋಹವ ಬಿಡದೆ ಸಾಯಲೇಕೆ ||
ತಾತ ಕಲ್ಪಿಸಿದ ಕೂಪವೆಂದಭಿಮಾನಪಟ್ಟು ||
ಲೋಕದೊಳು ಕಾಪುರುಷ ಕುಡಿಯುವನು ಉಪ್ಪುನೀರು ||೪೮||

ಅದನ್ನು ಕೇಳಿ ಯದ್ಭವಿಷ್ಯನು ಗಟ್ಟಿಯಾಗಿ ನಕ್ಕು ಹೇಳಿತು: ಏನುಹೇಳಲೋ, ನಿಮ್ಮ ಬುದ್ಧಿ ಚಾತುರ್ಯವನ್ನು! ಅವರು ಬಾಯಲ್ಲಿ ಆಡಿದ ಮಾತು ಕೇಳಿದ ಮಾತ್ರಕ್ಕೆ ಹೆದರಿ, ತಾತ ಮುತ್ತಾತರ ಕಾಲದಿಂದ ಇದ್ದು ಬಾಳಿ ಬದುಕಿದ ಕಟ್ಟೆಯನ್ನು ಬಿಟ್ಟು ಹೋಗುವುದೇ? ಆಯುಸ್ಸು ಮುಗಿದಿದ್ದರೆ ಬೇರೆ ಕಡೆ ಹೋದರೆ ತಾನೇ ಮೃತ್ಯುವು ತಪ್ಪುವುದೇ? ಅದರಿಂದ ನಾನು ಬರುವುದಿಲ್ಲ. ನಿಮಗೆ ತೋರಿದಂತೆ ನೀವು ಮಾಡಿ."

ಆ ಮಾತು ಕೇಳಿ ಅನಾಗತವಿಧಾತನೂ ಪ್ರತ್ಯುತ್ಪನ್ನಮತಿಯೂ ತಮ್ಮ ತಮ್ಮ ಪರಿಜನರನ್ನು ಕಟ್ಟಿಕೊಂಡು ಬೇರೆ ಕಟ್ಟೆಗೆ ಹೋದುವು.

ಬೆಳಗಾಗುತ್ತಲೂ ಬೆಸ್ತರು ಬಂದು ಬಲೆಗಳನ್ನು ಬೀಸಿ ಆ ಕಟ್ಟೆಯನ್ನೆಲ್ಲಾ ಗೂರಾಡಿ, ಅಲ್ಲಿದ್ದ ಮೀನುಗಳನ್ನೆಲ್ಲಾ ಹಿಡಿದು ಕೊಂಡು ಹೋದರು. ಅದರಿಂದ ಯದ್ಭವಿಷ್ಯನ ಹಾಗೆ ಹಾಳಾಗ ಬಾರದು ಎಂದು ಹೇಳಿದೆನು'' ಎಂದಿತು.

ಅದನ್ನು ಕೇಳಿ ಟಿಟ್ಟಿಭವು "ಪ್ರಿಯೆ, ನಾನು ಯದ್ಭವಿಷ್ಯನ ಹಾಗೆ ಎಂದುಕೊಂಡೆಯಾ? ಹಾಗಾದರೆ ನನ್ನ ಪೌರುಷವನ್ನು ನೋಡು, ನನ್ನ ಕೊಕ್ಕಿನಿಂದಲೇ ಈ ಸಮುದ್ರವನ್ನು ಶೋಷಿಸು ವೆನು.'' ಎಂದಿತು. ಟಿಟ್ಟಿಭಿಯು ''ನಿನಗೆ ಸಮುದ್ರದೊಡನೆ ಯುದ್ಧವು ಸರಿಯಲ್ಲ. ಅಸಮರ್ಥರು ಮಾಡಿಕೊಳ್ಳುವ ಕೋಪವು ಅವರಿಗೇ ಕೇಡು ತರುವುದು. ತನ್ನ ಶಕ್ತಿ ಎಷ್ಟು ಎಂಬುದನ್ನು ತಿಳಿದುಕೊಳ್ಳದೆ ಪ್ರಬಲನಾದ ಶತ್ರುವಿನ ಮೇಲೆ ಬಿದ್ದರೆ, ಬೆಂಕಿ ಯನ್ನು ಆರಿಸುವೆನೆಂದು ಮೇಲೆಬಿದ್ದ ಪತಂಗದಂತಾಗುವುದು.'' ಎಂದಿತು.

ಗಂಡು ಹೇಳಿತು:—ಪ್ರಿಯೆ, ಹಾಗೆನ್ನಬೇಡ. ಉತ್ಸಾಹ ಶಕ್ತಿಯಿದ್ದವರು ಕಿರಿಯರಾದರೂ ಹಿರಿಯರನ್ನು ಗೆಲ್ಲುವರು. ಚಂ ದ್ರನು ಪೂರ್ಣನಾಗಿದ್ದರೂ ರಾಹುವು ಅವನನ್ನು ಹಿಡಿದು ನುಂಗು ವುದಿಲ್ಲವೆ? ಆನೆಯು ಎಷ್ಟು ದೊಡ್ಡದು! ಆದರೂ ಅದರಲ್ಲಿ ಅರ್ಧ ವೂ ಇಲ್ಲದ ಸಿಂಹವು ಅದರ ಮೇಲೆ ಹಾರಿ ನೆತ್ತಿಯನ್ನು ಸೀಳುವುದಿ ಲ್ಲವೆ? ಅಷ್ಟೇ ಅಲ್ಲ.

ರವಿಯು ಮೂಡುತಿದ್ದ ಹಾಗೆಯೇ ||
ಗಿರಿಯ ಮೇಲೆ ಪಾದ*ವಿಡುವನು ||
ತೇಜದೊಡನೆ ಹುಟ್ಟಿ ಬಂದರೆ ||
ರೂಪ ವಯವು ಕಿರಿದೆ ಆದರೇಂ || ೪೯ ||

* ಪಾದ = ಕಾಲು, ಕಿರಣ.

ದೊಡ್ಡ ಆನೆಯನ್ನು ಆಳುವ ಅಂಕುಶವು ಆನೆಯಷ್ಟು ದೊಡ್ಡದೆ? ದೀಪಕ್ಕೆ ಸಿಕ್ಕಿ ಹತವಾಗುವ ಕತ್ತಲೆಯು ದೀಪದಷ್ಟೇ ಸಣ್ಣದೇ? ಅದರಿಂದ ತೇಜಸ್ಸು ಮುಖ್ಯವಲ್ಲದೆ ಗಾತ್ರವು ಮುಖ್ಯವಲ್ಲ. ಆದರಿಂದ, ನೋಡು, ಈ ಕೊಕ್ಕಿನಿಂದಲೇ ಈ ಕಡಲನ್ನು ಬತ್ತಿಸುವೆನು.''

ಟಿಟ್ಟಿಭಿಯು ಮತ್ತೆ ಕೇಳಿತು: ''ನಾಥ, ಗಂಗಾ ನದಿಯು ತನ್ನ ಒಂಭೈನೂರು ಉಪ ನದಿಗಳಿಂದ ಕೂಡಿ ಬಂದು ತನ್ನ ನೀರುಗಳನ್ನು ತುಂಬುತ್ತಿರುವಳು. ಜೊತೆಗೆ ಇನ್ನೂ ಹದಿನೆಂಟು ನೂರು ನದಿಗಳು ಬಂದು ಸೇರುತ್ತಿರುವುವು. ಇಂತಹ ಕಡಲನ್ನು ಬತ್ತಿಸುವೆನು ಎಂದರೆ ನಂಬಬಹುದೆ? ಹಾಗೂ ಒಂದುವೇಳೆ ಪ್ರಯತ್ನ ಮಾಡಲೇ ಮಾಡುವೆನು ಎಂದರೆ, ಇತರ ಪಕ್ಷಿಗಳನ್ನು ಸೇರಿಸಿಕೊಂಡಾದರೂ ಆ ಕಾರ್ಯವನ್ನು ಮಾಡು. ಅಸಮರ್ಥರೇ ಆದರೂ ಬಹು ಜನ ಸೇರಿದರೆ ಅವರನ್ನು ಗೆಲ್ಲುವುದು ಅಸಾಧ್ಯವಾಗುವುದು. ಹುಲ್ಲೇ ಅಗಲಿ ಹೊಸೆದು ಹಗ್ಗವನ್ನು ಮಾಡಿದರೆ, ಅದರಿಂದ ಆನೆಯನ್ನು ಕಟ್ಟಬಹುದಲ್ಲವೆ? ವಿವೇಕವಿಲ್ಲದೆ ವಿರೋಧ ಕಟ್ಟಿಕೊಂಡು ಆನೆಯು ಸತ್ತುದನ್ನು ಕಾಣೆಯಾ?''

ಟಿಟ್ಟಿಭವು ''ಅದು ಹೇಗೆ?'' ಎನ್ನಲು ಟಿಟ್ಟಿಭಿಯು ಹೇಳಿತು:—



## ವಿರೋಧ ಕಟ್ಟಿಕೊಂಡು ಸತ್ತ ಆನೆಯ ಕಥೆ

ಒಂದು ಕಾಡಿನಲ್ಲಿ ಒಂದು ಜೊತೆ ಗುಬ್ಬಿಗಳು ವಾಸಮಾಡಿಕೊಂಡಿದ್ದುವು. ಅವು ಇದ್ದ ಹೊಂಗೆಯ ಮರದಡಿಯಲ್ಲಿ ಒಂದು ದಿನ ಒಂದು ಆನೆಯು ಬಿಸಿಲು ತಡೆಯಲಾರದೆ ನೆರಳಿಗಾಗಿ ಬಂದು

ನಿಂತುಕೊಂಡಿತು. ನಿಂತುಕೊಂಡಿದ್ದುದು ಹಾಗೆಯೇ ಒಂದು ಕೊಂಬೆಯನ್ನು ಹಿಡಿದು ಎಳೆಯಿತು. ಆ ಕೊಂಬೆಯು ಮುರಿದು




ಬಿತ್ತು. ಆ ಕೊಂಬೆಯಲ್ಲಿಯೇ ಗುಬ್ಬಿಯ ಗೂಡು ಇದ್ದುದು. ಆ ಗೂಡಿನಲ್ಲಿ ಮೊಟ್ಟೆಗಳೂ ಇದ್ದುವು. ಮೊಟ್ಟೆಗಳು ಬಿದ್ದುಹೋದುವು: ಗುಬ್ಬಿಗಳು ಕಷ್ಟದಿಂದ ಹೇಗೋ ಉಳಿದುಕೊಂಡುವು. ಆ ಗುಬ್ಬಿಗಳು ಮೊಟ್ಟೆಗಳು ಹೋದುವು ಎಂದು ಹೋ ಎಂದು ಅತ್ತುವು.

ಆ ಅಳುವನ್ನು ಕೇಳಿ ಮರಕುಟಿಗನು ಬಂತು: "ಅಯ್ಯೋ ಪಾಪ! ಆದರೆ ಮಾಡುವುದೇನು? ಪಂಡಿತರು ಸತ್ತವರನ್ನು ಕುರಿತು ಅಳಬಾರದು." ಎಂದು ವೇದಾಂತ ಹೇಳಿತು. ಹೆಣ್ಣು ಗುಬ್ಬಿಯು "ಇದೆಲ್ಲಾ ಇರಲಿ, ಆ ಕೆಟ್ಟಾನೆಯು ಮದದಿಂದ ನನ್ನ ಮನೆಯನ್ನು ಮುರಿಯಿತು. ನೀನು ನಿಜವಾಗಿ ಸ್ನೇಹಿತನಾಗಿದ್ದರೆ ಅದನ್ನೂ ಹಾಗೇ ಮುರಿಯುವುದಕ್ಕೆ ಸಹಾಯ ಮಾಡು." ಎಂದಿತು.

ಮರಕುಟಿಗನು, "ನನಗೊಬ್ಬ ಸ್ನೇಹಿತಳಿದ್ದಾಳೆ. ಅವಳು ವೀಣಾರವಳೆಂಬ ದೊಡ್ಡ ನೊಣವು. ಬಾ, ಅಲ್ಲಿಗೆ ಹೋಗೋಣ" ಎಂದು ಗುಬ್ಬಿಯನ್ನು ಕರೆದುಕೊಂಡು ಅದರ ಹತ್ತಿರ ಹೋಯಿತು. ಆ ನೊಣವು "ಮೇಘನಾದ ಎಂಬ ಕಪ್ಪೆಯು ನನಗೆ ಪರಮ ಸ್ನೇಹಿತನು. ಅವನನ್ನು ಕೇಳಿ ಅವನು ಹೇಳಿದಂತೆ ಮಾಡೋಣ" ಎಂದಿತು. ಮೂವರೂ ಕಪ್ಪೆಯ ಬಳಿಗೆ ಹೋದರು.



ಕಪ್ಪೆಯು ಎಲ್ಲವನ್ನೂ ಕೇಳಿ "ನಾವೆಲ್ಲರೂ ರೇಗಿದ ಮೇಲೆ ನಮ್ಮ ಮುಂದೆ ಈ ಆನೆಯದೆಷ್ಟರದು! ನಾನು ಹೇಳಿದಹಾಗೆ ಮಾಡಿ. ನೊಣವೆ, ನೀನು ಹೋಗಿ ಆನೆಯ ಕಿವಿಗಳಬಳಿ ಹಾಡು. ಆನೆಯು ನಿನ್ನ ಸಂಗೀತಕ್ಕೆ ಮನಸೋತು ಕಣ್ಮುಚ್ಚಿಕೊಳ್ಳುವುದು. ಆಗ ಮರಕುಟಿಗನು ಹೋಗಿ ಕಣ್ಣನ್ನು ಕುಕ್ಕಿಬಿಡಲಿ. ಕುರುಡನಾಗಿ ಆ ಆನೆಯು ತಿರುಗುವಾಗ ನಾನು ಒಂದು ಹಳ್ಳದಲ್ಲಿ ನಿಂತುಕೊಂಡು ಕೂಗುವೆನು. ನನ್ನ ಕೂಗುಕೇಳಿ ನೀರು ಇರಬೇಕು ಎಂದು ಅಲ್ಲಿಗೆ ನುಗ್ಗಿ ಬಿದ್ದು ಸಾಯುವುದು." ಎಂದಿತು.

ಎಲ್ಲರೂ ಸೇರಿ ಹಾಗೆಯೇ ಮಾಡಿ ಆನೆಯನ್ನು ಕೊಂದರು. ಅದರಿಂದ ನೀನೂ ಮಹಾಜನರನ್ನು ಸೇರಿಸಿಕೊಂಡು ಈ ಕೆಲಸವನ್ನು

ಮಾಡು'' ಎನ್ನಲು ಟಿಟ್ಟಿಭವು ಹಾಗೆಆಗಲೆಂದು ತನ್ನ ಕುಲದವರನ್ನೆಲ್ಲ ಕರೆಸಿಕೊಂಡು ಸಮುದ್ರವು ತನಗೆಮಾಡಿದ ಅಪರಾಧವನ್ನು ಹೇಳಿತು. ಅದಕ್ಕೆ ಅವರು ಹೇಳಿದರು: ''ನಾವು ಅಶಕ್ತರು. ನಮ್ಮಿಂದ ಈ ಕೆಲಸವಾಗುವುದಿಲ್ಲ. ನಮ್ಮ ಅರಸನಾದ ಗರುಡನು ಬಂದರೆ ಈ ಕೆಲಸವಾಗುವುದು. ಅದರಿಂದ ನಾವೆಲ್ಲರೂ ಗರುಡನ ಬಳಿಗೆ ಹೋಗೋಣ.'' ಎಂದು ಎಲ್ಲರೂ ಗರುಡನ ಬಳಿಗೆ ಹೋಗಿ ಅಲ್ಲಿ ಹೋ ಎಂದು ಅತ್ತುಕೊಂಡರು. ಗರುಡನು ''ಏನಾಯಿತು?'' ಎಂದು ವಿಚಾರಿಸಲು ''ಸ್ವಾಮಿ, ಸಮುದ್ರನು ಮಾಡುತ್ತಿರುವ ಅನ್ಯಾಯವು ಅಷ್ಟಿಷ್ಟಲ್ಲ.'' ಎಂದು ನಡೆದುದನ್ನು ಒಕ್ಕಣೆಯಾಗಿ ಹೇಳಿದುವು. ಆತನು ''ಹೋಗಿ ಸಮುದ್ರನನ್ನು ಒಣಗಿಸಿಬಿಡೋಣ'' ಎಂದು ಯೋಚಿಸುತ್ತಿರುವಷ್ಟರಲ್ಲಿ'' ಮಹಾವಿಷ್ಣುವು ಇಂದ್ರನ ರಾಜಧಾನಿಯಾದ ಅಮರಾವತಿಗೆ ಹೊರಟಿದ್ದಾನೆ. ಬರಬೇಕು'' ಎಂದು ದೂತನು ಬಂದನು. ಗರುಡನು ''ಬರುವುದಿಲ್ಲವೆಂದು ಹೇಳು. ಮಹಾವಿಷ್ಣುವಿನ ಆಶ್ರಯವಿದೆಯೆಂದು ಕೊಬ್ಬಿ ಸಮುದ್ರನು ನಮ್ಮ ಹಕ್ಕಿಯೊಂದರ ಮೊಟ್ಟೆಗಳನ್ನು ಹೊತ್ತುಕೊಂಡು ಹೋಗಿದ್ದಾನೆ. ಸಮುದ್ರನು ಮಾಡಿದ ತಪ್ಪು ಸರಿಯಾಗುವವರೆಗೂ ನಾನು ಬರುವುದಿಲ್ಲವೆಂದು ಹೇಳು ಹೋಗು,'' ಎಂದನು.

ಮಹಾವಿಷ್ಣುವು ಅದನ್ನು ಕೇಳಿ ತಾನೇ ಬಂದು ಎಲ್ಲವನ್ನೂ ವಿಚಾರಿಸಿ ''ಗರುಡ, ಯೋಚಿಸದಿರು. ಸಮುದ್ರನಿಂದ ಟಿಟ್ಟಿಭದ ಮೊಟ್ಟೆಗಳನ್ನು ತರಿಸಿಕೊಡೋಣ. ಆಮೇಲೆ ಅಮರಾವತಿಗೆ ಹೋಗೋಣ'' ಎಂದು ಸಮುದ್ರನ ಮೇಲೆ ಕೋಪಮಾಡಿಕೊಂಡು ಬಾಣವನ್ನು ತೊಟ್ಟು ಹೊಡೆಯ ಹೋದನು. ಸಮುದ್ರವು ಅಂಜಿ ಗಡಗಡನೆ ನಡುಗುತ್ತಾ ಮೊಟ್ಟೆಗಳನ್ನು ತಂದು ಕೊಟ್ಟಿತು. ಅವನ್ನು ಮಹಾವಿಷ್ಣುವು ಟಿಟ್ಟಿಭಕ್ಕೆ ಕೊಟ್ಟನು. ಅದು ಹೆಂಡತಿಯ ಕೈಗೆ

ಕೊಟ್ಟಿತು. ಅದರಿಂದ ನಾನು ಹಾಗೆ ಹೇಳಿದೆನು. ಪುರುಷನು ಯಾವಾಗಲೂ ಪ್ರಯತ್ನವನ್ನು ಬಿಡಬಾರದು.''

ಸಂಜೀವಕನು ಮತ್ತೆ ಕೇಳಿತು: ''ಮಿತ್ರ, ಪಿಂಗಲಕನು ದುಷ್ಟ ಬುದ್ಧಿಯೆಂದು ನಾನು ನಂಬುವುದೆಂತು? ಇದುವರೆಗೆ ನನ್ನಲ್ಲಿ ಅಷ್ಟು ಸ್ನೆಹವಿಟ್ಟುಕೊಂಡಿದ್ದನಲ್ಲ?'' ದಮನಕನು ಅದಕ್ಕೆ ಹೇಳಿತು: ''ಅದನ್ನು ತಿಳಿಯುವುದು ಅಷ್ಟು ದೊಡ್ಡ ವಿಷಯವಲ್ಲ. ಅರಸನು ಮುಖವನ್ನು ಗಂಟಿಕ್ಕಿಕೊಂಡು ಕಣ್ಣು ಕೆಂಪಗೆ ಮಾಡಿಕೊಂಡಿರುವುದೇ ಗುರುತು. ಇನ್ನು ನಾನು ಹೋಗಿ ಬರುವೆನು. ನೀನು ಈ ಗುಟ್ಟನ್ನು ಹೊರಗೆಡವಬೇಡ. ಈ ರಾತ್ರಿ ಎಲ್ಲಾದರೂ ಹೊರಟುಹೋಗುವದಿದ್ದರೆ ಹೊರಟು ಹೋಗು. ಇಂತಹ ಸಂದರ್ಭಗಳಲ್ಲಿ ದೇಶತ್ಯಾಗ ಮಾಡುವುದು ತಪ್ಪಲ್ಲ ಅಥವಾ ಇನ್ನು ಯಾವುದಾದರೂ ಮಾರ್ಗವನ್ನು ಅವಲಂಬಿಸಿ ಕಾಪಾಡಿಕೊಳ್ಳುವುದಾದರೂ ಸರಿಯೆ, ಹಾಗೇ ಮಾಡು'' ಎಂದು ಹೇಳಿ ದಮನಕನು ಕರಟಕನ ಬಳಿಗೆ ಹೋಯಿತು.

ಕರಟಕನು ದಮನಕನನ್ನು ಕೇಳಿತು: ''ಏನು ಮಾಡಿ ಬಂದೆ?''

''ನಾನು ಬೀಜವನ್ನೇನೋ ನೆಟ್ಟು ಬಂದೆ. ಮುಂದಿನದು ದೈವ ಚಿತ್ತ.''

'' ಹಾಗೆಂದರೇನು? ವಿಸ್ತಾರವಾಗಿ ಹೇಳು. ''

'' ಅವರಿಬ್ಬರಿಗೂ ಮನಸ್ಸು ಒಡೆಯುವಂತೆ ಮಾಡಿ ಬಂದಿದ್ದೇನೆ. ಇನ್ನು ಅವರಿಬ್ಬರೂ ಒಟ್ಟಾಗಿರುವುದನ್ನು ನೀನು ಈ ಜನ್ಮದಲ್ಲಿ ನೋಡಲಾರೆ. ''

'' ನೀನು ಹಾಗೆ ಮಾಡಬಾರದಾಗಿತ್ತು. ಅವರಿಬ್ಬರೂ ಪಕ್ವವಾದ ಸ್ನೆಹವುಳ್ಳವರು. ಅವರನ್ನು ನೀನು ಕೋಪ ಸಾಗರದಲ್ಲಿ ನೂಕಬಾರದಾಗಿತ್ತು. ಉಪಕಾರ ಮಾಡುವುದು ಕಷ್ಟ. ಅಪಕಾರಕ್ಕೇನು? ಯಾರು ಬೇಕಾದರೂ ಮಾಡಬಹುದು. ''

"ಹಾಗಲ್ಲ. ನೀನು ನೀತಿ ಶಾಸ್ತ್ರವನ್ನೇ ಅರಿಯೆ. ಕೇಳು. ಈ ಸಂಜೀವಕನು ನಮ್ಮ ಮಂತ್ರಿ ಪದವಿಯನ್ನು ಅಪಹರಿಸಿ ನಮಗೆ ಶತ್ರುವಾದನು. ಉದಾಸೀನನಾಗಿರುವನು ಎಂದು ಅವನನ್ನು ತಂದು ಅರಸನ ಹತ್ತಿರ ಸೇರಿಸಿದರೆ, ಅವನಿಂದ ನಮ್ಮ ಪದವಿಗೇ ಊನವು ಬಂತು. ಆದರಿಂದ ಅವನನ್ನು ಕೊಲ್ಲಿಸುವ ಯೋಚನೆ ಮಾಡಿದ್ದೇನೆ. ಅಥವಾ ಅವನು ದೇಶತ್ಯಾಗವನ್ನಾದರೂ ಮಾಡು ವನು. ಈ ಗುಟ್ಟು ನಿನಗಲ್ಲದೆ ಇನ್ನು ಯಾರಿಗೂ ತಿಳಿಯದು. ನಾನು ಮಂತ್ರಿ ಪದವಿಯನ್ನು ಉಳಿಸಿಕೊಳ್ಳಲು ಹೀಗೆ ಮಾಡಿದ್ದೇನೆ. ಸಂಜೀವಕನು ಒಂದು ವೇಳೆ ಹತನೇ ಆದನು ಎನ್ನು. ಆಗಲೂ ನಮಗೆ ಅವನು ಆಹಾರವಾಗುವನು. ಆದರಿಂದ ಸಂಜೀವಕನು ಹೋದರೆ, ಮೊದಲನೆಯದಾಗಿ ನಮ್ಮ ವೈರವು ಸಾಧಿಸಿತು: ಎರಡ ನೆಯದಾಗಿ ಮಂತ್ರಿ ಪದವಿಯು ಉಳಿಯಿತು. ಜೊತೆಗೆ ಹೊಟ್ಟೆಯೂ ತುಂಬುವುದು."

ಇತ್ತ, ದಮನಕನನ್ನು ಕಳುಹಿಸಿಕೊಟ್ಟು ಸಂಜೀವಕನು ಯೋಚಿಸಿತು: "ಈಗ ಏನು ಮಾಡಬೇಕು? ಎಲ್ಲಿಗೆ ಹೋಗಬೇಕು? ಅಥವಾ ಪಿಂಗಲಕನನ್ನೇ ಶರಣು ಹೋಗಲೇ? ಅವನು ಶರಣಾಗತ ನೆಂದು ಕಾಯುವನೇ? ನನ್ನ ಪ್ರಾಣಗಳನ್ನು ಉಳಿಸುವನೇ? ಅಥವಾ ಇಲ್ಲಿಂದ ಹೊರಟು ಹೋಗಲೇ? ನಾನು ಎಲ್ಲಿ ಹೋದರೂ ಯಾವು ದಾದರೂ ಒಂದು ದುಷ್ಟ-ಪ್ರಾಣಿಯು ನನ್ನನ್ನು ಹೊಡೆದು ಹಾಕು ವುದು. ಎಲ್ಲಿಯೋ ಯಾವುದೋ ಪ್ರಾಣಿಯಿಂದ ಸಾಯುವ ಬದಲು ಸಿಂಹದಿಂದಲೇ ಸಾಯುವುದು ಒಳ್ಳೆಯದಲ್ಲವೆ?"

ದೊಡ್ಡವನೊಡನೆ ಸೆಣಸಿ ಸಾಯುವುದೂ ಒಳ್ಳೆಯದು: ಆನೆ ಯು ಪರ್ವತವನ್ನು ತಿವಿಯುವುದಕ್ಕೆ ಹೋಗಿ ಕೊಂಬು ಮುರಿದು ಕೊಂಡಿತು ಎಂದರೆ ಅದೂ ಅದಕ್ಕೆ ಗೌರವವೇ ಅಲ್ಲವೆ? ಆದರಿಂದ

ಯುದ್ಧವೇ ಸರಿ.'' ಎಂದು ನಿಶ್ಚಯಿಸಿಕೊಂಡು ಮೆಲ್ಲ ಮೆಲ್ಲಗೆ ಮರು ದಿನ ರಾಜ ಸಭೆಗೆ ಬಂತು.

ಅರಸನೂ ಮಂತ್ರಿಯೂ ಒಬ್ಬರನ್ನೊಬ್ಬರು ನೋಡಿದರು. ಅದರ ಕಣ್ಣಿಗೆ ಇದೂ ಇದರ ಕಣ್ಣಿಗೆ ಅದೂ ದಮನಕನು ಹೇಳಿದಂತೆಯೇ ಕಂಡು ಬಂದುವು. ಸಂಜೀವಕನು ಸಿಂಹಕ್ಕೆ ಎಂದಿನಂತೆ ಪ್ರಣಾಮವನ್ನು ಮಾಡದೆ ದೂರದಲ್ಲಿ ಕುಳಿತಿತು. ಸಿಂಹವು ಹಾಗೆ ದೂರದಲ್ಲಿ ಕುಳಿತ ಸಂಜೀವಕನನ್ನು ನೋಡಿ, ದಮನಕನು ಹೇಳಿದ್ದ ಮಾತನ್ನು ನೆನೆದು, ಕೋಪದಿಂದ ಥಟ್ಟನೆ ಅದರ ಮೇಲೆ ಹಾರಿತು.

ಸಂಜೀವಕನು ಆ ಸಿಂಹದ ಪಂಜಾ ಏಟಿನಿಂದ ಗಾಯ ಗೊಂಡರೂ ತಾನೂ ಕೊಂಬುಗಳಿಂದ ಅದರ ಹೊಟ್ಟೆಯನ್ನು ಸೀಳಿ ಬಿಡಿಸಿಕೊಂಡು ತಿವಿಯಲು ಸಿದ್ಧವಾಗಿ ನಿಂತಿತು. ಇಬ್ಬರೂ ಯುದ್ಧ ಮಾಡುತ್ತ ಕೆಂಪಾಗಿರುವ ಗಾಯಗಳಿಂದ ಮೈಯೆಲ್ಲ ತುಂಬಿರಲು ಹೂವು ಬಿಟ್ಟ ಮುತ್ತುಗಗಳ ಹಾಗೆ ಕಾಣುತ್ತ ಒಬ್ಬರನ್ನೊಬ್ಬರು ಸಂಹರಿಸಬೇಕೆಂದು ಕಾದಾಡಿದುವು.

ಕರಟಕನು ಅದನ್ನು ಕಂಡು, ''ದಮನಕ, ಮೂಢ, ಏನು ಕೆಲಸ ಮಾಡಿದೆ? ಇವರಿವರಿಗೆ ವಿರೋಧವನ್ನು ತಂದಿಡಬಾರದಾಗಿತ್ತು. ಈಗ ನಮ್ಮ ಸ್ವಾಮಿಯೇ ಸೋತುಹೋದರೆ ಆಗ ಮಂತ್ರಿಬುದ್ಧಿಯು ಏಕೆ? ಸಂಜೀವಕನು ಉಳಿದರೆ ತಾನೇ ಸರಿ ಹೋಗುವುದೇ? ಇಂತಹ ನೀನು ಮಂತ್ರಿಯಾಗ ಬಯಸುವೆ! ನೀನು ದಂಡೋಪಾಯದಲ್ಲಿ ರುಚಿಯುಳ್ಳವನು. ಬ್ರಹ್ಮದೇವನು ಹೇಳಿರುವ ಸಾಮ ದಾನ ಭೇದ ದಂಡಗಳೆಂಬ ನಾಲ್ಕು ಉಪಾಯಗಳಲ್ಲಿ ದಂಡವು ಪಾಪಿಯು. ಅದರಿಂದ ಅದನ್ನು ಆದಷ್ಟು ಕಡಿಮೆಯಾಗಿ ವಿನಿಯೋಗಿಸಬೇಕು. ಮಂತ್ರಿಯಾದವನು ಮಂತ್ರದ ಪಂಚಾಂಗಗಳನ್ನು ಬಲ್ಲವನಾಗಿರಬೇಕು. ಕರ್ಮವನ್ನು ಆರಂಭಿಸುವುದು ಹೇಗೆ? ಪುರುಷರನ್ನೂ ದ್ರವ್ಯವನ್ನೂ ಶೇಖರಿಸುವುದು ಎಂತು?

ಯಾವ ದೇಶ ಯಾವ ಕಾಲದಲ್ಲಿ ಕರ್ಮವನ್ನು ಮಾಡಬೇಕು? ತಪ್ಪಿ ಹೋಗದಂತೆ ಅದಕ್ಕೆ ಏನು ಪ್ರತಿ ಮಾಡಿರಬೇಕು? ಕಾರ್ಯವನ್ನು ಗೆದ್ದುಕೊಳ್ಳುವುದೆಂತು? ಎಂಬ ಈ ಐದು ಅಂಗಗಳನ್ನು ತಿಳಿದಿರುವೆಯಾ? ಈಗ ಕೆಲಸವು ಕೆಟ್ಟುಹೋಯಿತು. ಇನ್ನು ಮುಂದೆ ನೀನು ಮಂತ್ರಿಯಾಗಿರುವವರೆಗೂ ಯಾವನೊಬ್ಬ ಸಜ್ಜನನೂ ದೊರೆಯ ಬಳಿಯೂ ಸುಳಿಯುವುದಿಲ್ಲ. ಬಿಡು. ನೀನು ಮೂರ್ಖನು. ನಿನಗೆ ಉಪದೇಶಮಾಡಿಯೂ ಫಲವಿಲ್ಲ. ನೀನು ಶಿಷ್ಯನಾಗುವುದಕ್ಕೂ ಅರ್ಹತೆಯಿಲ್ಲದವನು. ಅಶಿಷ್ಯನಿಗೆ ಉಪದೇಶಮಾಡಿದ ಹಕ್ಕಿಯಂತಾಗಬಾರದು ಬಿಡು''

ದಮನಕನು ಅದು ಹೇಗೆ ಎಂದು ಕೇಳಲು, ಕರಟಕನು ಹೇಳಿತು:—

## ಬುದ್ಧಿ ಹೇಳಲು ಹೋಗಿ ಕೆಟ್ಟ ಹಕ್ಕಿಯ ಕಥೆ.

ಒಂದಾನೊಂದು ಬೆಟ್ಟದಲ್ಲಿ ಒಂದು ಕೋಡಗಗಳ ಗುಂಪು ಇತ್ತು. ಅಲ್ಲಿ ಒಂದು ದಿನ ದೊಡ್ಡ ಮಳೆಯೂ ಗಾಳಿಯೂ ಆಗಿ ಚಳಿಯೋ ಚಳಿಯಾಗಿ ಹೋಯಿತು. ಆಗ ಆ ಚಳಿಯಲ್ಲಿ ಕೋಡಗಗಳು ಒದ್ದಾಡುತ್ತಾ, ಅಲ್ಲಿ ಗುಲಗಂಜಿಗಳನ್ನು ಕಂಡು ಅವು ಬೆಂಕಿಯ ಕಿಡಿಗಳು ಎಂದುಕೊಂಡು ಅವುಗಳ ಬಳಿ ಕೈ ಹಿಡಿದುಕೊಂಡು ಕೈ ಕಾಸಿಕೊಳ್ಳಬೇಕೆಂದು ಯತ್ನ ಮಾಡುತ್ತಿದ್ದುವು.

ಅದನ್ನು ಕಂಡು ಸೂಚೀಮುಖನು ''ಎಲೋ ಕೋಡಗಗಳಿರಾ ನೀವೆಲ್ಲ ಮೂರ್ಖರು. ಇವು ಬೆಂಕಿಯ ಕಡ್ಡಿಗಳಲ್ಲ. ಗುಲಗಂಜಿಗಳು. ಇವುಗಳಿಂದ ನಿಮಗೆ ಚಳಿಯು ತಪ್ಪುವುದಿಲ್ಲ. ಹೋಗಿ ಯಾವುದಾದರೂ ಒಂದು ಗುಹೆಯಲ್ಲೋ ಹಳ್ಳದಲ್ಲೋ ಸೇರಿಕೊಳ್ಳಿ. ಇನ್ನೂ ಮಳೆ ಬರುವಂತಿದೆ'' ಎಂದಿತು.



ಆ ಗುಂಪಿನಲ್ಲಿ ಒಂದು ಮುದಿ ಕೋಡಗವು "ನಿನಗೇನು? ಹೋಗು ಅವಿವೇಕಿ" ಎಂದು ಬಯ್ದರೂ ಬಿಡದೆ ಆ ಹಕ್ಕಿಯು ಹೇಳುತ್ತಲೇ ಇತ್ತು. ಕೆಲಸವು ಪದೇ ಪದೇ ಕೆಟ್ಟು ಹೋದವನನ್ನೂ, ಜೂಜುಗಾರರನನ್ನೂ ಸೋತವನನ್ನೂ ಮಾತಾಡಿಸಬಾರದು ಎಂದು ಹಿರಿಯರು ಹೇಳುವ ಮಾತು ನಿಜವಾಯಿತು. ಯಾವುದೋ ಒಂದು ಕೋಡಗಕ್ಕೆ ರೇಗಿತು. ಅದು ಹೋಗಿ ಆ ಹಕ್ಕಿಯನ್ನು ಹಿಡಿದು ಅಪ್ಪಳಿಸಿ ಕೊಂದಿತು.

ಅದರಿಂದ ಹಾಗೆ ಹೇಳಿದೆನು. ಈಗ ನೀನು ಮಾಡಿದ ಕೆಲಸವು ಹಾವನ್ನು ಹಾಳು ಮಾಡಲು ಹೋಗಿ ಸಪರಿವಾರವಾಗಿ ತಾನೇ ಹಾಳಾದ ಬಕದ ಕೆಲಸದಂತಾಯಿತು.

ದಮನಕನು ಅದು ಹೇಗೆ ಎನ್ನಲು, ಕರಟಕನು ಹೇಳಿತು:—

## ಹಾಳು ಮಾಡಲು ಹೋಗಿ ಹಾಳಾದ ಕಥೆ.

ಒಂದಾನೊಂದು ಅರಣ್ಯದಲ್ಲಿ ಒಂದು ದೊಡ್ಡ ಆಲದ ಮರವಿರುವುದು. ಅದರಲ್ಲಿ ಬಕಪಕ್ಷಿಗಳು ಗೂಡು ಮಾಡಿಕೊಂಡು ಸುಖ

ವಾಗಿದ್ದುವು. ಅಲ್ಲಿಗೆ ಒಂದು ಹಾವು ಬಂದು ಸೇರಿಕೊಂಡಿತು. ಅದು ಆ ಹಕ್ಕಿಗಳ ಮರಿಗಳನ್ನು ರೆಕ್ಕೆ ಹುಟ್ಟುವದಕ್ಕೆ ಮುಂಚೆಯೇ ತಿಂದುಬಿಡುವುದು.

ಹೀಗೆ ಸ್ವಕುಲವು ನಾಶವಾಗುತ್ತಿರುವುದನ್ನು ಕಂಡು ಆ ಹಕ್ಕಿಗಳಿಗೆ ಬಹಳ ಸಂಕಟವಾಯಿತು. ಒಂದಂತೂ ನೀರಿನ ತೀರದಲ್ಲಿ ಕುಳಿತುಕೊಂಡು ಹೋ ಎಂದು ಅತ್ತಿತು. ಅದನ್ನು ಕಂಡು ಒಂದು ಏಡಿಯು "ಮಾವ, ಏತಕ್ಕೆ ಇಷ್ಟು ಅಳುತ್ತಿರುವೆ? ಎಂದು ಕೇಳಿತು, ಆದಕ್ಕೆ ಆ ಕೊಕ್ಕರೆಯು "ಮಗು, ಏನು ಹೇಳಲಿ? ನನ್ನ ದುರದೃಷ್ಟಕ್ಕೆ ನಾವಿರುವ ಮರದಲ್ಲಿ ಒಂದು ಹಾವು ಬಂದು ಸೇರಿಕೊಂಡಿದೆ. ಅದು ನನ್ನ ಮಕ್ಕಳನ್ನೆಲ್ಲ ತಿಂದು ಹಾಕಿಬಿಟ್ಟಿತು. ನಾನು ಆ ದುಃಖವನ್ನು ಸೈರಿಸಲಾರೆ. ಏನಾದರೂ ಉಪಾಯ ಹೇಳುವೆಯಾ ಆ ನೀಚನು ಧ್ವಂಸವಾಗಿ ಹೋಗುವ ಹಾಗೆ? ಎಂದು ಕೇಳಿಕೊಂಡಿತು.

ಏಡಿಯು ಅದನ್ನು ಕೇಳಿ ಯೋಚಿಸಿತು:—"ಈ ಹಕ್ಕಿಯು ನಮ್ಮ ಜಾತಿಗೂ ವೈರಿಯು. ಅದರಿಂದ ನಾನು ಹೇಳುವ ಉಪಾಯವು ಸತ್ಯವೂ ಆಗಿರಬೇಕು: ಅಸತ್ಯವೂ ಆಗಿರಬೇಕು. ಆ ಉಪಾಯದಿಂದ ಹಾವೂ ಸಾಯಬೇಕು: ಕೊಕ್ಕರೆಗಳೂ ಹಾಳಾಗಬೇಕು. ಅಂತಹ ಉಪಾಯವನ್ನು ಯೋಚಿಸಿ ಹೇಳಬೇಕು. ಕೇಳಿಲ್ಲವೆ?

ಚಿತ್ತದಲ್ಲಿ ದಯೆಯ ತೊರೆದು | ಬೆಣ್ಣೆಯಂಥ ಮಾತನಾಡಿ ||
ಹಗೆಗೆ ಹಿತವ ಹೇಳಬೇಕು | ಮೂಲ ಸಹಿತ ಕೊಲ್ಲಬೇಕು || ೩೦ ||

ಎಂದು ಒಂದಷ್ಟು ದೀರ್ಘಕಾಲ ಯೋಚಿಸಿನೋಡಿ ಹೇಳಿತು:— ಮಾವ, ಮುಂಗಸಿಗೂ ಹಾವಿಗೂ ವೈರವು. ನೀನು ಮೀನಿನ ಮಾಂಸದ ತುಂಡುಗಳನ್ನು ಮುಂಗುಸಿಯ ಬಿಲದಿಂದ ಹಾವಿನ ಬಿಲದವರೆಗೂ ಚೆಲ್ಲಿಬಿಡು. ಮುಂಗುಸಿಯು ಮಾಂಸದ ತುಂಡುಗಳ ಜಾಡು ಹಿಡಿದು ಹೋಗಿ ಆ ಹಾವನ್ನು ಕೊಂದುಬಿಡುವುದು."

ಕೊಕ್ಕರೆಯು ಸರಿಸರಿ ಎಂದು ಹಾಗೆಯೇ ಮಾಡಿತು. ಮುಂಗುಸಿಯೂ ಆ ಮೀನು ತುಂಡುಗಳನ್ನು ಅನುಸರಿಸಿಕೊಂಡು ಹೋಗಿ ಹಾವಿನ ಬಿಲಕ್ಕೆ ನುಗ್ಗಿ ಅದನ್ನು ಕೊಂದಿತು. ಹಾಗೆಯೇ ಮರದ ಮೇಲಕ್ಕೂ ಹತ್ತಿ ಅಲ್ಲಿದ್ದ ಕೊಕ್ಕರೆಯ ಕುಲವನ್ನೂ ಧ್ವಂಸಮಾಡಿತು. ದಮನಕ, ನೀನು ಬಕದಂತೆ ಉಪಾಯವನ್ನು ಚಿಂತಿಸಿದೆಯೇ ಹೊರತು ಅಪಾಯವನ್ನು ಚಿಂತಿಸಲಿಲ್ಲ. ಅದರಿಂದ ಹೀಗಾಯಿತು. ಇದರಿಂದ ನೀನು ಎಷ್ಟು ದುಷ್ಟನು, ಎಂತಹ ಸೊಟ್ಟ ಬುದ್ಧಿಯು ಎಂಬುದು ಪ್ರಕಟವಾಯಿತು. ನೀನು ನಿನಗೆ ಅನ್ನವಿಕ್ಕಿದ ಅರಸನಿಗೇ ಇಂತಹ ದಶೆಯನ್ನು ತಂದಿಟ್ಟೆಯಲ್ಲಾ, ಇನ್ನು ನಿನಗೆ ನಮ್ಮಂತಹವರನ್ನು ಕಂಡರೆ ಗಣನೆಯೆ ? ಹುಸಿಯನ್ನು ಹೇಳಿದರೂ ಹಸನಾಗಿ ಹೇಳಬೇಕು. ಅದೂ ನಿನಗೆ ಬರದು'' ಎಂದಿತು. ದಮನಕನು ''ಅದು ಹೇಗೆ?'' ಎನ್ನಲು ಕರಟಕನು ಹೇಳಿತು:



## ಹಸನಾಗಿ ಹೇಳದ ಹುಸಿಯ ಕಥೆ.

ಒಂದಾನೊಂದು ಊರಿನಲ್ಲಿ ಜೀರ್ಣಧನನೆಂಬ ವೈಶ್ಯನಿದ್ದನು. ಅವನಿಗೆ ದುರದೃಷ್ಟದಿಂದ ಹಣವು ಕಳೆದು ಹೋಯಿತು. ''ಚೆನ್ನಾಗಿ ಬದುಕಿ ಬಾಳುತ್ತಿದ್ದವನು ನಾನು, ಇಲ್ಲಿ ಹೀಗೆ ಕಿರುಪೆದವನ ಹಾಗೆ ಇರುವುದು ಸರಿಯಲ್ಲ'' ಎಂದು ದೇಶಾಂತರ ಹೋಗುವುದು ಎಂದು ಗೊತ್ತು ಮಾಡಿಕೊಂಡನು. ಅವನ ಮನೆಯಲ್ಲಿ ತಲೆ ತಲಾಂತರದಿಂದ ಬಂದ ಒಂದು ತಕ್ಕಡಿಯಿತ್ತು. ಅದು ಒಂದೇ ಎಂಟು ಮಣ

ತೂಗುವುದು. ಅದನ್ನು ತನ್ನ ಸ್ನೇಹಿತನಾದ ಮತ್ತೊಬ್ಬ ಶೆಟ್ಟಿಯ ಮನೆಯಲ್ಲಿಟ್ಟು ಹೊರಟು ಹೋದನು.

ದೇಶಾಂತರಗಳಲ್ಲಿ ಅಷ್ಟು ಕಾಲ ತಿರಗುತ್ತಿದ್ದು ಏನೋ ಅಷ್ಟೋ ಇಷ್ಟೋ ಸಂಪಾದಿಸಿಕೊಂಡು ಹಿಂತಿರುಗಿ ಬಂದನು. ಸ್ನೇಹಿತನ ಮನೆಗೆ ಹೋಗಿ "ಅಯ್ಯಾ ನನ್ನ ತಕ್ಕಡಿಯನ್ನು ಕೊಡು," ಎಂದು ಕೇಳಿದರೆ, ಅವನು, "ಅಯ್ಯಾ, ನಿನ್ನ ತಕ್ಕಡಿಯನ್ನು ಇಲಿಗಳು ತಿಂದು ಹಾಕಿಬಿಟ್ಟುವು." ಎಂದನು. ಈ ವೈಶ್ಯನು "ಇರಲಿ, ಇವನ ಹುಸಿಯನ್ನು ಹುಸಿಯಿಂದಲೇ ಗೆಲ್ಲಬೇಕು" ಎಂದು ನಿಶ್ಚಯಿಸಿಕೊಂಡು, "ಅಯ್ಯಾ, ಇಲಿಗಳು ತಿಂದರೆ ನಿನ್ನ ತಪ್ಪೇನು? ಸಂಸಾರವೇ ಹೀಗೆ! ಯಾವುದು ತಾನೇ ಶಾಶ್ವತ? ಎಲ್ಲದಕ್ಕೂ ಮೃತ್ಯುವುಂಟೇ ವುಂಟು! ಹೋಗಲಿ ಬಿಡು. ಆಯಿತು. ನಾನು ಸ್ನಾನಕ್ಕೆ ನದಿಗೆ ಹೋಗಬೇಕು. ನಿನ್ನ ಮಗನನ್ನು ಕೊಂಚ ಕಳುಹಿಸಿ ಕೊಡುವೆಯಾ?" ಎಂದನು. ಇಲ್ಲವೆಂದರೆ ತನ್ನ ಕಳ್ಳತನವು ಎಲ್ಲಿ ಹೊರಬೀಳುವುದೋ ಎಂದು ಹೆದರಿ, ಅವನೂ ಎಂಟು ವರ್ಷದ ಮಗನನ್ನು ಕಳುಹಿಸಿ ಕೊಟ್ಟನು. ಕೇಳಿಲ್ಲವೆ?

ಮಾಡುವ ಕೆಲಸವು ಭಯಲೋಭಗಳಿಂದಲ್ಲದೆ ||
ಭಕ್ತಿಯು ಉಂಟೆ? ಲೋಕದ ರೀತಿಯದು ||
ಅತ್ಯಾದರ ಮಾಡಲು ಕಾರಣವಿಲ್ಲದೆಯೋ ||
ಶಂಕಿಸಿ ನೋಡದರಡಿ ತಪ್ಪದೆ ವಿಷವಿಹುದು ||

ಅವನು ಮಗನನ್ನು ಕರೆದುಕೊಂಡು ನದಿಗೆ ಹೋಗಿ ಸ್ನಾನಾದಿಗಳನ್ನು ಮಾಡಿಕೊಂಡು ಆ ಮಗುವನ್ನು ತನಗೆ ಬೇಕಾದವರಲ್ಲಿಟ್ಟು ಹಿಂತಿರುಗಿ ಬಂದನು.

ಶೆಟ್ಟಿಯು "ಮಗುವೆಲ್ಲಿ?" ಎಂದು ಕೇಳಲು, "ಹದ್ದು ಹಾರಿಸಿಕೊಂಡು ಹೋಯಿತು" ಎಂದನು. ಶೆಟ್ಟಿಯು ರೇಗಿ "ಅಯ್ಯೋ ಕಳ್ಳ

ಸುಳ್ಳ, ಎಂಟು ವರುಷದ ಮಗುವನ್ನು ಹದ್ದು ಹಾರಿಸಿಕೊಂಡು ಹೋಗುವುದು ಎಲ್ಲಿಯಾದರೂ ಉಂಟೆ? ಒಳ್ಳೆಯ ಮಾತಿನಲ್ಲಿ ಮಗು ವನ್ನು ತಂದು ಕೊಡುವೆಯೋ? ದೊರೆಯ ಬಳಿಗೆ ಎಳೆದುಕೊಂಡು ಹೋಗಲೋ?'' ಎಂದನು. ಕೊನೆಗೆ ಇಬ್ಬರೂ ಜಗಳವಾಡಿಕೊಂಡು ದೊರೆಯ ಬಳಿಗೆ ಹೋದರು. ಅಲ್ಲಿ ಶೆಟ್ಟಿಯು ಗಟ್ಟಿಯಾಗಿ ''ಪ್ರಭು, ಇವನು ನನ್ನ ಮಗನನ್ನು ಏನೋ ಮಾಡಿಬಿಟ್ಟಿದ್ದಾನೆ. ಕೊಡಿಸಿ ಕೊಡಬೇಕು'' ಎಂದು ಕೂಗಿಕೊಂಡನು. ದೊರೆಯು ಏನು ಎಂದು ವಿಚಾರಿಸಲು, ವೈಶ್ಯನು ''ಸ್ವಾಮಿ, ಇವನಲ್ಲಿ ಇಟ್ಟಿದ್ದ ಕಬ್ಬಿಣವನ್ನು ಇಲಿಗಳು ತಿಂದುವು. ಇವನು ನನ್ನ ಜೊತೆಯಲ್ಲಿ ಕಳುಹಿಸಿದ್ದ ಮಗ ನನ್ನು ಹದ್ದು ಹಾರಿಸಿಕೊಂಡು ಹೋಯಿತು.'' ಎಂದು ನಡೆದಿದು ಎಲ್ಲವನ್ನೂ ಹೇಳಿದನು. ಅವರು ನಕ್ಕು ನಕ್ಕು ಕಬ್ಬಿಣವನ್ನು ಕೊಟ್ಟು ಮಗುವನ್ನು ತೆಗೆದುಕೋ ಎಂದರು. ಹಾಗೆ ಹಸನಾಗಿ ಹೇಳದಿದ್ದರೆ ಹುಸಿಯು ತಾನೇ ಜೀರ್ಣವಾಗುವುದೇ? ಹಾಗೆ ನೀನು ಸಂಜೀವಕನಿಗೆ ದೊರೆಯಿಂದ ದೊರೆತ ಮರ್ಯಾದೆಯನ್ನು ಸಹಿಸದೆ ಹೀಗೆ ಮಾಡಿದೆ: ಹಿರಿಯರ ಮಾತು ನಿಜ.

ಹಿತವ ಮಾಡುವ ಮೂರ್ಖಗಿಂತ ||
ಹಗೆಯ ಹಿಡಿದಿಹ ಜಾಣಮೇಲು ||
ಕೋತಿ ಕೊಂದಿತು ರಾಜನನ್ನು ||
ಚೋರ ಕಾದನು ಪಾರ್ವನನ್ನು ||೫೧||

ದಮನಕನು ಅದು ಹೇಗೆ ಎನ್ನಲು ಕರಟಕನು ಹೇಳಿತು:—



## ಮೂರ್ಖನನ್ನು ಆಳುಮಾಡಿಕೊಂಡ ಕಥೆ

ಒಬ್ಬಾನೊಬ್ಬ ರಾಜನಿದ್ದನು. ಅವನು ಒಂದು ಕೋತಿಯನ್ನು ಸಾಕಿದನು. ಅದರ ಮೇಲೆ ಅವನಿಗೆ ಬಹಳ ವಿಶ್ವಾಸಬಂತು. ಅದನ್ನು ಮೂರು ಹೊತ್ತು ಜೊತೆಯಲ್ಲಿಯೇ ಇಟ್ಟುಕೊಂಡಿರುತ್ತಿದ್ದನು. ಅದು ಹೇಳಿದ ಮಾತು ಕೇಳುತ್ತ ಅರಸನಲ್ಲಿ ಬಹು ಭಕ್ತಿಯನ್ನು ಇಟ್ಟುಕೊಂಡಿತ್ತು.

ಒಂದು ದಿನ ಅರಸನು ಮಲಗಿ ನಿದ್ದೆ ಹೋಗುತ್ತಿದ್ದನು. ಕೋತಿಯೂ ಹತ್ತಿರದಲ್ಲಿಯೇ ಕುಳಿತಿತ್ತು. ಒಂದು ನೊಣವು ಬಂದು ಅರಸನ ಎದೆಯ ಮೇಲೆ ಬಂದು ಬಂದು ಕುಳಿತುಕೊಳ್ಳುತ್ತಿತ್ತು. ಕಪಿಯು ಎಷ್ಟು ಸಲ ಓಡಿಸಿದರೂ ಅದು ಮತ್ತೆ ಮತ್ತೆ ಬರುತ್ತಲೇ ಇರಲು ಅದಕ್ಕೆ ಕೋಪ ಬಂತು. "ಬೇಡ, ಇನ್ನೊಮ್ಮೆ ಬಂದರೆ ನಿನ್ನನ್ನು ಕೊಂದು ಹಾಕುವೆನು" ಎಂದು ಕೂಡ ಹೇಳಿತು. ನೊಣವು ಕೇಳಲಿಲ್ಲ. ಮತ್ತೆ ಬಂದು ಕುಳಿತುಕೊಂಡಿತು. ಆಗ ಕೋತಿಯು ಅಲ್ಲಿದ್ದ ಗದೆಯನ್ನು ಎತ್ತಿ ಅದರ ಮೇಲೆ ಹಾಕಿತು. ಅರಸನು ಆಗಲೇ ಸತ್ತನು.



## ಕಳ್ಳನು ಕಾಪಾಡಿದ ಕಥೆ

ಒಂದಾನೊಂದು ಊರಿನಲ್ಲಿ ಒಬ್ಬ ವಿದ್ವಾಂಸನಿದ್ದನು. ಅವನು ಹಿಂದಿನ ಜನ್ಮದ ಪ್ರಾರಬ್ಧದಿಂದ ಕಳ್ಳನಾಗಬೇಕಾಗಿ ಬಂತು. ಅವನು ಒಂದು ದಿನ ದೂರ ದೇಶದಿಂದ ಬಂದ ನಾಲ್ವರು ಬ್ರಾಹ್ಮ

ಜರು ವ್ಯಾಪಾರ ಮಾಡುತ್ತಿರುವುದನ್ನು ಕಂಡನು. ಏನಾದರೂ ಮಾಡಿ ಅವರ ಹತ್ತಿರ ಇರುವ ಹಣವನ್ನು ಹಾರಿಸಬೇಕು ಎನ್ನಿಸಿತು. ಅವರ ಬಳಿ ಸಾರಿ, ಅನೇಕ ಶಾಸ್ತ್ರ ವಾಕ್ಯಗಳನ್ನೂ ಸುಭಾಷಿತ ಗಳನ್ನೂ ಹೇಳಿ, ಮಧುರ ವಚನಗಳನ್ನು ಆಡಿ, ಅವರ ವಿಶ್ವಾಸವನ್ನು ಸಂಪಾದಿಸಿದನು. ಕೇಳಿಲ್ಲವೆ?

ಅಸತಿಯು ನಾಚ-ವಳತಿಯಾಗಿ ||
ಉಪ್ಪಿನ ನೀರಿಹುದತಿ ತಂಪು
ಜಂಭವ ಗೈವ ಸುವಿವೇಕ ||
ದುಷ್ಟನು ನುಡಿವನು ಪ್ರಿಯವಾಗಿ || ೫೨ ||

ಅವರಲ್ಲಿ ಸೇರಿಕೊಂಡು ಅವರ ಗುಟ್ಟುಗಳನ್ನೆಲ್ಲಾ ಭೇದಿಸಿದನು. ಅವರು ಕೊನೆಗೆ ತಮ್ಮ ಸಂಪಾದನೆಯನ್ನೆಲ್ಲಾ ಮಾಡಿಕೊಂಡು ಬಲು ಬೆಲೆಯಾಗುವ ರತ್ನಗಳನ್ನು ಕೊಂಡು ಕೊಂಡು ಅವನ್ನೆಲ್ಲಾ ತೊಡೆಗ ಳಲ್ಲಿ ಸೇರಿಸಿ ಹೊಲಿದುಕೊಂಡು ಸ್ವದೇಶಕ್ಕೆ ಹೊರಟರು. ಕಳ್ಳನೂ ಅವರ ಜೊತೆಯಲ್ಲಿಯೇ ಬಂದನು. ದಾರಿಯಲ್ಲಿ ಎಲ್ಲಾದರೂ ಇವರಿಗೆ ವಿಷವನ್ನು ಕೊಟ್ಟು ಕೊಂದು ಇವರಲ್ಲಿರುವ ರತ್ನಗಳನ್ನು ಅಪಹರಿಸ ಬೇಕು ಎಂದು ಅವನ ಇಷ್ಟ.

ಅವರು ಬರುತ್ತಾ ದಾರಿಯಲ್ಲಿ ಒಂದು ಬೇಡರ ಪಾಳ್ಯವನ್ನು ದಾಟಿ ಹೋಗಬೇಕಾಯಿತು. ಆ ಬೇಡರು ಒಂದು ಗೂಗೆಯನ್ನು ಸಾಕಿದ್ದರು. ಅದು ಯಾರಾದರೂ ಬಂದರೆ ಆ ಬೇಡರಿಗೆ ಹೇಳು ವುದು. ಅವರು ಅವರನ್ನು ಬಡಿದು ಹಣವನು ತೆಗೆದುಕೊಳ್ಳುವರು. ಈ ಕಳ್ಳನೂ ನಾಲ್ವರೂ ಬ್ರಾಹ್ಮಣರೂ ಬರುತ್ತಲೂ ಆ ಗೂಗೆಯು "ಇವರಲ್ಲಿ ರತ್ನಗಳಿವೆ," ಎಂದಿತು. ಅವರು ಬಂದು ಎಲ್ಲರನ್ನೂ ಹುಡುಕಿದರು. ಯಾರಲ್ಲಿಯೂ ಏನೂ ಸಿಕ್ಕಲಿಲ್ಲ.

ಹಕ್ಕಿಯು ಮತ್ತೆ "ರತ್ನಗಳಿವೆ" ಎಂದಿತು. ಆದರ ಮೇಲೆ ಅವರು ಹೊರಟುಹೋಗುತ್ತಿದ್ದ ಇವರನ್ನು ಮತ್ತೆ ಅಡ್ಡಗಟ್ಟಿದರು "ಈ ಹಕ್ಕಿಯು ಇದುವರೆಗೂ ಸುಳ್ಳು ಹೇಳಿಲ್ಲ. ಅದರಿಂದ ನೀವು ರತ್ನಗಳನ್ನು ನುಂಗಿರಬೇಕು. ನಿಮ್ಮ ಹೊಟ್ಟೆಗಳನ್ನು ಸೀಳಿ ನೋಡು ವೆವು." ಎಂದರು. ಅದನ್ನು ಕೇಳಿ ಕಳ್ಳನು, "ಇವರು ಕಳ್ಳರು. ಇವರು ಕೊಲ್ಲುವುದಕ್ಕೆ ಸಿದ್ಧರಾಗಿ ಬಂದಿದ್ದಾರೆ. ಈ ನಾಲ್ವರಲ್ಲಿ ಒಬ್ಬನನ್ನು ಕೊಂದರೆ, ರತ್ನಗಳು ಸಿಕ್ಕಿ, ಉಳಿದವರೂ ಸಾಯುವರು. ಆಗ ನಾನೂ ಉಳಿಯುವುದಿಲ್ಲ. ಅದಕ್ಕೆ ಬದುಲಾಗಿ ನಾನೇ ಮೊದಲು ಸತ್ತರೆ, ನನ್ನಲ್ಲಿ ಏನೂ ಇಲ್ಲದಿರುವುದನ್ನು ಕಂಡು, ಈ ಕಳ್ಳರು ಇವ ರನ್ನು ಬಿಟ್ಟರೂ ಬಿಡಬಹುದು. ಹಾಗೇನಾದರೂ ಆದರೆ, ನನಗೆ ಬ್ರಾಹ್ಮಣರನ್ನು ಕಾಪಾಡಿದ ಪುಣ್ಯವಾದರೂ ಬರುವುದು" ಎಂದು ತಾನೇ ಮೊದಲು ಕಳ್ಳರ ಮುಂದೆ ಹೋಗಿ ನಿಂತನು. ಅವರು ಅವ ನನ್ನು ಕೊಂದು ಮೈಯೆಲ್ಲಾ ಹುಡುಕಿ ರತ್ನಗಳು ಸಿಕ್ಕದಿರಲು ಉಳಿ ದವರನ್ನು ಬಿಟ್ಟು ಬಿಟ್ಟರು. ಅದರಿಂದ, ಅರಸರು ಮೂರ್ಖರನ್ನು ಹತ್ತಿರ ಇಟ್ಟುಕೊಳ್ಳಬಾರದು ಪಂಡಿತರನ್ನೇ ಇಟ್ಟುಕೊಳ್ಳಬೇಕು. ನಮ್ಮ ಅರಸು ನಿನ್ನಂತಹ ಮೂರ್ಖನನ್ನು ಸೇರಿಸಿಕೊಂಡು ಕೆಟ್ಟನು." ಎಂದಿತು.

ಇವರಿಬ್ಬರೂ ಇಲ್ಲಿ ಮಾತಾಡುತ್ತಿರುವಾಗ ಅತ್ತ ಕಡೆ ಸಂಜೀ ವಕನು ಪಿಂಗಲಕನಿಂದ ಹತನಾದನು. ಹಾಗೆ ಹತನಾಗಿ ಬಿದ್ದ ಮಿತ್ರನನ್ನು ನೋಡಿ ಪಿಂಗಲಕನು ಗಟ್ಟಿಯಾಗಿ ಅತ್ತಿತು:- ಅಯ್ಯೋ, ಈ ಸಂಜೀವಕನನ್ನು ಕೊಂದು ನಾನು ಅನ್ಯಾಯವನ್ನು ಮಾಡಿದೆ. ನಾನು ಮಾಡಿದುದು ವಿಶ್ವಾಸಘಾತವು. ಇದಕ್ಕಿಂತ ಪಾಪವಿಲ್ಲ.

ಅಪಕಾರ ಮಾಡಿದರೆ ಗೆಳೆಯರಿಗೆ ||
ಉಪಕಾರ ಮಾಡಿದರ ಮರೆತರೆ ||
ನಂಬಿದರ ಕೆಡಿಸಿದರೆ ತಪ್ಪದೈ ||
ನರಕ ರವಿ ಚಂದ್ರರಿರುವ ತನಕ || ೫೩ ||

ಛೀ, ರಾಜ್ಯವೂ ಒಳ್ಳೆಯ ಭೃತ್ಯನೂ ಒಂದೇ ತೂಕ ಎನ್ನುವರು. ಅದು ನಿಜವಲ್ಲ. ಭೂಮಿಯು ಹೋದರೂ ಸಿಕ್ಕುವುದು. ಒಳ್ಳೆಯ ಭೃತ್ಯನು ಹೋದರೆ ಸಿಕ್ಕುವುದಿಲ್ಲ. ಸಂಜೀವಕನಂತಹ ಭೃತ್ಯನು ಇನ್ನುಂಟೆ? ಎಂದು ಬಹಳವಾಗಿ ಅತ್ತಿತು.

ಪರಿವಾರದವರೆಲ್ಲರೂ ಏನೇನೋ ಸಮಾಧಾನ ಹೇಳಿದರು. ಕೊನೆಗೆ ಪಿಂಗಲಕನೂ ಸುಮ್ಮನಾಗಿ ಎಂದಿನಂತೆ ಅರಣ್ಯ ರಾಜ್ಯದಲ್ಲಿ ಇದ್ದು ಕೊಂಡಿತ್ತು.



ಇಂತಿದು ಹೊಸಗನ್ನಡ ಪಂಚತಂತ್ರದಲ್ಲಿ
“ **ಒಡೆಯುವುದು** ” ಎಂಬ
ನಾಲ್ಕನೆಯ ತಂತ್ರವು ಮುಗಿದುದು.

# ಮಕ್ಕಳಿರಾ!

ಚಿಕ್ಕವರಾಗಿರುವಾಗಿನಿಂದಲೇ

ಚೊಕ್ಕ ಬುದ್ಧಿಯನ್ನು ಕಲಿಯಿರಿ



ನಿಮ್ಮ ಸ್ನಾನಕ್ಕೆ

## ಮೈಸೂರು ಸ್ಯಾಂಡಲ್ ಸೋಪ್

ಮತ್ತು

ಬಟ್ಟೆಗಳನ್ನು ಶುಭ್ರಪಡಿಸಲು

## ಮೈಸೂರು (ವಾಷಿಂಗ್) ಸೋಪ್

ಇವುಗಳನ್ನೇ ಉಪಯೋಗಿಸಿ

ಎಲ್ಲಾ ವ್ಯಾಪಾರಿಗಳಲ್ಲೂ ಸಿಗುತ್ತವೆ.

## ಗೌರ್ನಮೆಂಟ್ ಸೋಪ್ ಫ್ಯಾಕ್ಟರಿ

ಬೆಂಗಳೂರು ನಗರ

# ಹೊಸಗನ್ನಡ ಪಂಚತಂತ್ರ

## ಸ್ನೇಹ ಕಟ್ಟುವುದು.

ಹೊಸಗನ್ನಡ ಪಂಚತಂತ್ರದಲ್ಲಿ ಕಟ್ಟುವುದು ಎಂಬ ಕೊನೆಯ ತಂತ್ರವು. ಅದರ ಮೊದಲನೆಯ ಶ್ಲೋಕವಿದು:—

ಅರ್ಥ:— ಕರಣ ಮುಖ್ಯವಲ್ಲ ಬಲ್ಲವರಿಗೆ ॥
ಓದಿ ಕೇಳಿ ತಿಳಿದು ಬಲ್ಲವರು ॥
ಬಿಡದೆ ತಮ್ಮ ಕಾರ್ಯ ಸಾಧಿಪರು ॥
ಕಾಗೆ ಇಲಿಯು ಜಿಂಕೆಯಾಮೆಯೊಲ್ ॥ ೧ ॥

ಅದು ಹೀಗೆ:—ದಕ್ಷಿಣ ದೇಶದಲ್ಲಿ ಮಹಿಲಾರೋಪ್ಯ ಎಂಬ ನಗರವು ಇರುವುದು. ಅದಕ್ಕೆ ಕೊಂಚ ದೂರದಲ್ಲಿ ಒಂದು ದೊಡ್ಡ ಆಲದ ಮರವಿರುವುದು. ಎತ್ತರವಾಗಿರುವ ಆ ಮರದಲ್ಲಿ ಎಷ್ಟೋ ಪಕ್ಷಿಗಳು ಮನೆ ಮಾಡಿಕೊಂಡಿದ್ದವು. ಅದರ ಪೊಟ್ಟರೆಗಳಲ್ಲಿರುವ ಹುಳು ಹುಪ್ಪಟೆಗಳಿಗಂತೂ ಲೆಕ್ಕವೇ ಇಲ್ಲ. ಅದರ ನೆರಳಿನಲ್ಲಿ ಜಿಂಕೆಗಳು ಮಲಗಿರುವುವು. ಕೊಂಬೆಗಳಲ್ಲಿ ಕಪಿಗಳು ಹಿಂಡು ಹಿಂಡಾಗಿ ನೆಲಸಿರುವುವು. ಅಲ್ಲಿರುವ ಹೂಗಳನ್ನು ಜೇನುಗಳು ಸೇವಿಸುವುವು. ಹೀಗೆ ಆ ಮರವು ತನ್ನ ಎಲ್ಲಾ ಅಂಗಗಳಿಂದಲೂ ಲೋಕೋಪಕಾರ ಮಾಡುತ್ತಿರುವುದು. ಲೋಕೋಪಕಾರ ಮಾಡದಿರುವವರು ಭೂಮಿಗೆ ಭಾರವಲ್ಲದೆ ಮತ್ತೇನು?

ಆ ಮರದಲ್ಲಿ ಲಘುಪತನಕ ಎಂಬ ಕಾಗೆಯು ಮನೆ ಮಾಡಿಕೊಂಡಿರುವುದು. ಒಂದು ದಿನ ಅದು ಹೊಟ್ಟೆಯ ಪಾಡಿಗಾಗಿ

ನಗರದ ಕಡೆಗೆ ಹೊರಟಿತು. ಆ ವೇಳೆಗೆ ಕೈಯಲ್ಲಿ ಬಲೆಯನ್ನು ಹಿಡಿದುಕೊಂಡಿರುವ ಒಬ್ಬ ಬೇಡನು ಕಣ್ಣಿಗೆ ಕಾಣಿಸಿದನು. ಅವನೋ ಕಾಡಿಗೆ ಕಪ್ಪಿನ ಬಣ್ಣದವನು. ಅಮಾವಾಸ್ಯೆಯು ಎದ್ದು ಬಂದಂತೆ ಇರುವನು. ಅವನ ಕೂದಲುಗಳೆಲ್ಲ ಎದ್ದು ನಿಂತು ಬೇಕೆಂದು ಕೆದರಿ ಕೊಂಡು ಇರುವ ಹಾಗೆ ಕಾಣುವುದು. ನೋಡುವುದಕ್ಕೆ ಯಮ ಕಿಂಕರನೋ ಎಂಬಂತೆ ಭಯಂಕರನಾಗಿರುವನು. ಅವನನ್ನು ಕಂಡು ಕಾಗೆಯು ಅನುಮಾನಪಟ್ಟು ಯೋಚಿಸಿತು: "ಈ ಕೆಟ್ಟ ಬೇಡನು ನಾನಿರುವ ಮರದ ಕಡೆಗೇ ಬರುತ್ತಿದ್ದಾನೆ. ಇನ್ನು ನಮ್ಮ ಮರದಲ್ಲಿ ಇರುವ ಯಾವ ಯಾವ ಹಕ್ಕಿಗೆ ಕೆಡುವ ಕಾಲವು ಬಂದಿದೆಯೋ ತಿಳಿಯದಲ್ಲಾ?" ಎಂದು ನಾನಾ ವಿಧವಾಗಿ ಯೋಚಿಸಿ, ಕೊನೆಗೆ ಹಿಂತಿರುಗಿ ಹೋಗಿ ಆ ಮರದಲ್ಲಿದ್ದ ಹಕ್ಕಿಗಳನ್ನೆಲ್ಲಾ ಕೂಗಿತು: "ನೋಡಿ, ನೋಡಿ, ಬಲೆಯನ್ನು ಹಿಡಿದುಕೊಂಡು ಈ ಬೇಡನು ಬರುತ್ತಿದ್ದಾನೆ. ಅವನು ಅಕ್ಕಿಯನ್ನು ಎರಚುತ್ತಾನೆ. ಅದನ್ನು ಖಂಡಿತವಾಗಿ ಒಬ್ಬರೂ ನಂಬಬೇಡಿ. ಮೊದಲು ಬಲೆಯನ್ನು ಹರಡಿ ಅಕ್ಕಿಯನ್ನು ಚೆಲ್ಲುವನು. ಅವನು ಚೆಲ್ಲುವ ಅಕ್ಕಿಯ ಕಾಳನ್ನು ನೀವು ಕಾಲಕೂಟ* ದಂತೆ ಭಾವಿಸಿ" ಎಂದು ಕೂಗಿ ಹೇಳಿತು.

ಆ ಕಾಗೆಯು ಹೀಗೆ ಹೇಳುತ್ತಿರುವಾಗಲೇ ಆ ಬೇಡನು ಆ ಮರದ ಹತ್ತಿರಕ್ಕೇ ಬಂದು ಅದು ಹೇಳಿದಂತೆಯೇ ಬಲೆಯನ್ನು ಹರಡಿ, ಕೆಂಪಗೆ ಇರುವ ಅಕ್ಕಿಯ ಕಾಳುಗಳನ್ನು ಚೆಲ್ಲಿ ತಾನು ಮರೆಯಲ್ಲಿ ಕುಳಿತನು. ಆ ಮರದಲ್ಲಿದ್ದ ಹಕ್ಕಿಗಳು ಲಘುಪತನಕನ ಮಾತಿನಂತೆ ಆ ಕಾಳುಗಳನ್ನು ಕಾಲಕೂಟವೆಂದುಕೊಂಡು ಅತ್ತ ಕಡೆ ತಿರುಗದೆ ಇದ್ದುವು.

ಇಷ್ಟರಲ್ಲಿ ಚಿತ್ರಗ್ರೀವನೆಂಬ ಒಬ್ಬ ಪಾರಿವಾಳ ರಾಜನು ತನ್ನ ಪರಿವಾರದೊಂದಿಗೆ ಅಲ್ಲಿಗೆ ಬಂದನು. ಆತನ ಪರಿವಾರವೆಂದರೆ

---

*ವಿಷಗಳಲ್ಲೆಲ್ಲಾ ಬಹು ಬಲವಾದದ್ದು ಕಾಲಕೂಟ.

ಒಂದಲ್ಲ ಎರಡಲ್ಲ ಸಾವಿರಾರು ಹಕ್ಕಿಗಳು. ಆ ಹಿಂಡಿಗೆ ಹಿಂಡೇ ಹೊಟ್ಟೆಯ ಪಾಡಿಗೋಸ್ಕರ ತಿಂಡಿಯನ್ನು ಹುಡುಕಿಕೊಂಡು ಹೊರ ಟಿದ್ದುವು. ಆ ಕಾಳುಗಳನ್ನು ನೋಡುತ್ತಿದ್ದ ಹಾಗೆಯೇ ಕೆಳಕ್ಕೆ ಇಳಿದುವು. ಲಘುಪತನಕನು ಬೇಡ ಬೇಡ ಎನ್ನುತ್ತಿದ್ದರೂ ಕೇಳದ ಪಾರಿವಾಳಗಳು ಕೆಳಗಿಳಿದು ಅಕ್ಕಿಯ ಕಾಳುಗಳನ್ನು ತಿನ್ನುವುದಕ್ಕೆ ಹೋಗಿ ಸಿಕ್ಕಿಕೊಂಡುವು.

ಅಥವಾ ಕೇಳಿಲ್ಲವೆ?

ನಾಲಗೆಯ ಚಾಪಲ್ಯ ಕೊಲ್ಲದಾರನ್ನು?
ಕಡಲ ಮಡುವಿನ ಮೀನು ಸಾವುದಿನ್ನೆಂತು? ॥ ೨ ॥

ಹಾಗೆ ಸಾಯುವುದು ಆ ಮೀನಿನ ತಪ್ಪು ಅಲ್ಲ: ದೈವವು ಅದಕ್ಕೆ ವಿರೋಧವಾಗಿದ್ದರೆ, ಪಾಪ, ಅದೇನು ಮಾಡೀತು?

ರಾವಣಗೆ ಪರ ಸತಿಯ ಕದ್ದರೇನೆನ್ನಿಸಿತು ॥
ರಾಮನಿಗೆ ಸ್ವರ್ಣ ಮೃಗ ವುಂಟೇನೆನಿಸಲಿಲ್ಲ ॥
ಪಾಂಡವನು ದಾಳಗಳ ಮೋಸವನು ಕಾಣನೇ ॥
ಆಪತ್ತು ಬಂದಿರಲು ಮತಿಯು ಮೊಂಕಾಗದಿಹುದೆ ॥ ೩ ॥

ಎಂಥವರಿಗೇ ಆಗಲಿ, ಆಪತ್ತು ಬಂದಾಗ ದೇವತೆಗಳು ಅವರ ಬುದ್ಧಿಗೆ ಮೊಂಕುತನವನ್ನು ತಂದೊಡ್ಡುವರು.

ಇತ್ತ ಕಾಯುತ್ತ ಕುಳಿತಿದ್ದ ಬೇಡನು, "ಹಾ, ಇನ್ನೇನು? ಹಕ್ಕಿಗಳು ಸಿಕ್ಕಿ ಹೋದುವು" ಎಂಬ ಸಂತೋಷದಿಂದ ಆ ಹಕ್ಕಿಗಳನ್ನು ಹೊಡೆಯಲು ದೊಣ್ಣೆಯನ್ನು ಎತ್ತಿಕೊಂಡು ಓಡಿಬಂದನು. ಅಷ್ಟರಲ್ಲಿ ಚಿತ್ರಗ್ರೀವನೂ ತಾನೂ ತನ್ನ ಪರಿವಾರವೂ ಬಲೆಯಲ್ಲಿ ಸಿಕ್ಕಿಕೊಂಡಿರುವುದನ್ನು ಅರಿತುಕೊಂಡು, ಹೇಳಿತು: ಯಾರೂ ಹೆದರ ಬೇಡಿ, ಕೇಳಿಲ್ಲವೆ?

ಆಪತ್ತು ಬಂದಾಗ ಬುದ್ಧಿ ಸಿಡದಿರಬೇಕು ॥
ಬುದ್ಧಿಯಿರಲಾಪತ್ತು ನೀಗಿಕೊಳ್ಳಲಹುದು ॥ ೪ ॥

ಆಪತ್ತು ಸಂಪತ್ತುಗಳಲೇಕರೂಪರು ಮಹಿಮರು ॥
ಉದಯಾಸ್ತಮಯಗಳಲಿ ನೋಡು ರವಿ ಇರುವ ಕೆಂಪಗೆ ॥೫॥

ಆದರಿಂದ ನಾವೆಲ್ಲರೂ ಒಟ್ಟು ಸೇರಿ ಮೇಲಕ್ಕೆ ಹಾರಿ ಈ ಬಲೆಯನ್ನು ಹೊತ್ತುಕೊಂಡು ಹೋಗಿ ಆಮೇಲೆ ಬಿಡಿಸಿಕೊಳ್ಳೋಣ ಹಾಗಿಲ್ಲದೆ ಹೆದರಿ ಒದ್ದಾಡಿದಿರಿ ಎಂದರೆ ಮೇಲಕ್ಕೆ ಹಾರುವುದಕ್ಕೆ ಆಗುವುದಿಲ್ಲ: ನಮಗೆ ತಪ್ಪದೆ ಮರಣವಾಗುವುದು: ಕೇಳಿಲ್ಲವೆ?

ಹೊಟ್ಟೆಯೊಂದು ಎರಡು ತಲೆಯು ಇದ್ದ ಹಕ್ಕಿಯಿದ್ದುವು ॥
ಎರಡು ತಲೆಯ ಜಗಳವಾಡಿ ಹಕ್ಕಿ ನಾಶವಾಯಿತು ॥ ೬ ॥

ಹಕ್ಕಿಗಳು ಕೇಳಿದುವು ಅದು ಹೇಗೆ ಎಂದು? ಚಿತ್ರಗ್ರೀವನು ಹೇಳಿತು:—

## ಭಾರಂಡ ಪಕ್ಷಿಗಳ ಕಥೆ.

ಒಂದಾನೊಂದು ಸರೋವರದಲ್ಲಿ ಭಾರಂಡ ವೆಂಬ ಹಕ್ಕಿಯಿತ್ತು. ಅದಕ್ಕೆ ಎರಡು ತಲೆಗಳು. ಅದು ಒಂದು ದಿನ ಒಂದು ಸಮುದ್ರದ ಹತ್ತಿರಕ್ಕೆ ಹೋಯಿತು. ಅದು ಹೋಗುವ ವೇಳೆಗೆ ಸರಿಯಾಗಿ ಸಮುದ್ರದಲ್ಲಿ ಒಂದು ವಿಚಿತ್ರ ಫಲವು ತೇಲಿಬಂತು. ಅದನ್ನು ಒಂದು ತಲೆಯು ತೆಗೆದುಕೊಂಡು ತಿನ್ನುತ್ತಾ "ಅಹಾ! ನಾನು ಇದುವರೆಗೆ ಇಂತಹ ಹಣ್ಣನ್ನು ತಿಂದಿರಲಿಲ್ಲ." ಎಂದು ಚಪ್ಪರಿಸುತ್ತಾ ತಿಂದಿತು. ಇನ್ನೊಂದು ತಲೆಯು "ಹಾಗೇನು? ಎಲ್ಲಿ? ನನಗೂ ಅಷ್ಟುಕೊಡು. ಆದರಿಂದ ನನಗೂ ನಾಲಗೆಯು ಸೌಖ್ಯವಾಗಲಿ," ಎಂದಿತು. ಅದಕ್ಕೆ ಮೊದಲನೆಯ ತಲೆಯು ಹೇಳಿತು.: "ನಾವಿಬ್ಬರಲ್ಲಿ ಯಾರು ತಿಂದರೂ ಹೋಗುವುದು ಒಂದೇ ಹೊಟ್ಟೆಗೆ ತಾನೇ? ತೃಪ್ತಿಯಾಗುವುದೂ ಒಂದೇ! ಆದರಿಂದ ಯಾರು ತಿಂದರೇನು? ಈ ಉಳಿದಿರುವುದನ್ನು ನನ್ನ ಹೆಂಡತಿಗೆ ಕೊಡುವೆನು."

ಎಂದು ಉಳಿದಿದ್ದನ್ನು ಹೆಂಡತಿಗೆ ಕೊಟ್ಟು ಬಿಟ್ಟಿತು. ಅದೂ ಅದನ್ನು ತಿಂದು, ಬಹಳ ಸಂತೋಷಪಟ್ಟಿತು.

ಎರಡನೆಯ ತಲೆಯು ಅಂದಿನಿಂದಲೂ "ನೋಡಿದೆಯಾ?" ಎಂದು ದುಖಃಪಡುತ್ತಲೇ ಇತ್ತು. ಇನ್ನೊಂದು ದಿನ ಈ ಎರಡನೆಯ ತಲೆಗೆ ಒಂದು ವಿಷಫಲವು ಸಿಕ್ಕಿತು. ಮೊದಲನೆಯ ತಲೆಯನ್ನು ನೋಡಿ "ಎಲೆಲಾ! ಇಗೋ ನನಗೆ ವಿಷಫಲವು ಸಿಕ್ಕಿರುವುದು. ನಿನಗೆ ಕೇಡಾಗಲಿ ಎಂದು ಇದನ್ನು ತಿನ್ನುವೆನು." ಎಂದಿತು. ಮೊದಲನೆಯ ತಲೆಯು "ಮೂರ್ಖ, ಹಾಗೆಮಾಡಬೇಡ. ನೀನು ಆ ಹಣ್ಣನ್ನು ತಿಂದರೆ ನಾವಿಬ್ಬರೂ ಸಾಯುವೆವು." ಎಂದಿತು. ಅದು ಎಷ್ಟು ಹೇಳಿದರೂ ಕೇಳದೆ ಆ ಎರಡನೆಯ ತಲೆಯು ಅದನ್ನು ತಿಂದೇ ತಿಂದಿತು. ಫಲವಾಗಿ ಎರಡೂ ಸತ್ತುವು. ಅದರಿಂದ ನಾನು ಹಾಗೆ ಹೇಳಿದೆನು." ಎಂದಿತು.

ಹಕ್ಕಿಗಳು ಅರಸನ ಮಾತನ್ನು ಕೇಳಿ, ಸರಿ, ಹಾಗೇ ಆಗಲೆಂದು ಎಲ್ಲವೂ ಒಟ್ಟಿಗೇ ಹಾರಿದುವು. ಬಲೆಯೂ ಅವುಗಳ ಜೊತೆಯಲ್ಲಿಯೇ ಮೇಲಕ್ಕೆದ್ದಿತು. ಬಲೆಯನ್ನೂ ಹೊತ್ತುಕೊಂಡು ಅವು ಆಕಾಶ ಮಾರ್ಗದಲ್ಲಿ ಹಾರಿದುವು. ಬೇಡನು ಅವುಗಳನ್ನು ಅಟ್ಟಿಸಿಕೊಂಡು "ಒಟ್ಟಿಗೆ ಹಾರಿ ಇವು ಬಲೆಯನ್ನು ಹೊತ್ತುಕೊಂಡು ಹೋಗುತ್ತಿವೆ. ಇವು ಜಗಳವಾಡದೆ ಇರುವುದೆಂತು? ಜಗಳವಾಡಿಯೇ ಆಡುವುವು. ಕಚ್ಚಾಡಿಕೊಂಡು ಕೆಳಗೆ ಬೀಳಲೇ ಬೀಳುವುವು" ಎಂದುಕೊಂಡು ಅವುಗಳ ಹಿಂದೆಯೇ ಓಡಿದನು. ಲಘುಪತನಕನೂ ಈ ವಿಚಿತ್ರವು ಏನಾಗುವುದೋ ನೋಡಲೇಬೇಕೆಂದು ಹೊಟ್ಟೆಯ ಯೋಚನೆಯನ್ನು ಬಿಟ್ಟು ಆ ಹಕ್ಕಿಗಳ ಹಿಂದೆಯೇ ಹೋಯಿತು. ಹಕ್ಕಿಗಳು ಕೊಂಚ ಹೊತ್ತಿನೊಳಗಾಗಿ ಕಣ್ಣಿಗೆ ಕಾಣದಷ್ಟು ದೂರ ಹೊರಟು ಹೋಗಲು ಬೇಡನು "ಆಗದುದು ಆಗುವುದಿಲ್ಲ. ಆಗಬೇಕಾದ್ದು

ಯತ್ನ ಮಾಡದಿದ್ದರೂ ಆಗುವುದು. ಅನುಭವಿಸುವ ಯೋಗವಿಲ್ಲ ದಿದ್ದರೆ, ಕೈಗೆ ಸಿಕ್ಕಿದ್ದುದೂ ತಪ್ಪಿಹೋಗುವುದು. ಈಗ ಈ ಹಕ್ಕಿ ಗಳು ಸಿಕ್ಕಿ ಮನೆಯವರಿಗೆ ಹೊಟ್ಟೆಗಾಗುವುದು ಇರಲಿ, ಇನ್ನು ಬೇರೆ ಹಕ್ಕಿಗಳನ್ನು ಹಿಡಿಯುವುದಕ್ಕೂ ಇಲ್ಲದಂತೆ ಇದ್ದ ಬಲೆಯೂ ಹೋಯಿತು.'' ಎಂದು ವ್ಯಸನಪಟ್ಟುಕೊಂಡು, ಹಿಂತಿರುಗಿದನು.

ಚಿತ್ರಗ್ರೀವನು ಬೇಡನು ಹಿಂದಿರುಗಿ ಹೋದುದನ್ನು ಕಂಡು, ತನ್ನ ಪರಿವಾರದವರಿಗೆ ಹೇಳಿದನು:— ಎಲೈ, ಆ ಕೆಟ್ಟ ಬೇಡನು ಹೊರಟುಹೋದನು. ಅದರಿಂದ ಎಲ್ಲರೂ ನಿರ್ಭಯವಾಗಿ ಆ ನಗ ರದ ಉತ್ತರ ದಿಕ್ಕಿಗೆ ಹೋಗೋಣ. ಅಲ್ಲಿ ನನ್ನ ಮಿತ್ರನಾದ ಹಿರಣ್ಯಕ ನೆಂಬ ಇಲಿಯಿರುವುದು. ಅದು ನಮ್ಮನ್ನು ಹಿಡಿದಿರುವ ಈ ಬಲೆ ಯನ್ನು ಕತ್ತರಿಸುವುದು— ಕಷ್ಟಕಾಲದಲ್ಲಿ ಮಿತ್ರರಲ್ಲದೆ ಮತ್ತಾರು ಸಹಾಯಮಾಡುವರು?'' ಎಂದು ಹೇಳಲು, ಆ ಪಾರಿವಾಳಗಳೆಲ್ಲವೂ ಹಿರಣ್ಯಕನು ಇದ್ದ ಕಡೆಗೆ ಬಂದುವು.

ಆ ಹಿರಣ್ಯಕನು ಒಂದು ಸಾವಿರ ಬಾಗಿಲುಗಳ ದುರ್ಗವನ್ನು ಮಾಡಿಕೊಂಡು ಸುಖವಾಗಿ ಇತ್ತು. ಅಷ್ಟಿಲ್ಲದೆ ಹೇಳುವರೆ? ''ನೀತಿ ಶಾಸ್ತ್ರವನ್ನು ಬಲ್ಲವರು ಭಯವೇನಾದರೂ ಬಂದೀತು ಎಂದು ಅದಕ್ಕೆ ಮೊದಲೇ ನಿವಾರಣದ ಉಪಾಯವನ್ನು ಚಿಂತಿಸುವರು. ಹಲ್ಲಿಲ್ಲದ ಹಾವು, ಮದವಿಲ್ಲದ ಗಜ, ದುರ್ಗವಿಲ್ಲದ ಅರಸು, ಇವು ಮೂವರೂ ಯಾರ ಕೈಗಾದರೂ ಸಿಕ್ಕಿ ಹೋಗುವರು. ಅಲ್ಲದೆ, ಸಾವಿರ ಆನೆ ಗಳೂ ಒಂದು ಲಕ್ಷ ಕುದುರೆಗಳೂ ಯಾವ ಕೆಲಸವನ್ನು ಸಾಧಿಸ ಲಾರವೋ ಅದನ್ನು ಒಂದು ದುರ್ಗವು ಸಾಧಿಸುವುದು. ದುರ್ಗದಲ್ಲಿ ರುವ ಧನುರ್ಧಾರಿಯೊಬ್ಬನು ನೂರು ಜನರನ್ನಾದರೂ ಗೆಲ್ಲಬಲ್ಲನು.'' ಅದರಿಂದಲೇ ನೀತಿ ಶಾಸ್ತ್ರವನ್ನು ಬಲ್ಲವರು ದುರ್ಗವನ್ನು ಹೊಗಳು ವರು.

ಚಿತ್ರಗ್ರೀವನು ಹಿರಣ್ಯಕನ ಬಿಲದ ಹತ್ತಿರಕ್ಕೆ ಹೋಗಿ ಗಟ್ಟಿಯಾಗಿ ಕೂಗಿತು: ''ಎಲೈ, ಮಿತ್ರನಾದ ಹಿರಣ್ಯಕ, ಬೇಗ, ಬಾ. ನನಗೆ ದೊಡ್ಡದೊಂದು ಏಪತ್ತು ಬಂದಿರುವುದು. ಬೇಗ, ಬಾ'' ಎಂದು ಕೂಗಿದ ಕೂಗನ್ನು ಕೇಳಿ, ''ಎಲೈ, ನೀನು ಯಾರು? ಏತಕ್ಕೆ ಬಂದಿರುವೆ? ನಿನಗೆ ಬಂದಿರುವ ಆಪತ್ತು ಎಂಥದು? ಹೇಳು'' ಎಂದು ಹಿರಣ್ಯಕನು ಬಿಲದಲ್ಲಿ ಇದ್ದುಕೊಂಡೇ ಕೇಳಿತು. ಅದಕ್ಕೆ ಚಿತ್ರಗ್ರೀವನು ಹೇಳಿತು: ''ಎಲೈ, ನಾನು ಚಿತ್ರಗ್ರೀವನು. ಕಪೋತರಾಜನು. ನಿನ್ನ ಸ್ನೇಹಿತನು. ಬೇಗ ಬಾ. ನಿನ್ನಿಂದ ಆಗಬೇಕಾದ ದೊಡ್ಡ ಪ್ರಯೋಜನವೊಂದಿದೆ.'' ಹಾಗೆನ್ನಲು, ಹಿರಣ್ಯಕನು ಸ್ನೇಹಿತನು ಬಂದಿರುವನೆಂದು ಬಹು ಸಂತೋಷದಿಂದ ಬಿಲದಿಂದ ಈಚೆಗೆ ಬಂದನು. ಅಷ್ಟಿಲ್ಲದೆ ಹೇಳುವರೆ?

ಬೆಳಗುವಾದಿತ್ಯ, ತಾಂಬೂಲ, ಭಾರತದ ಕಥೆಯು ||
ಒಲಿದ ಹೆಂಡಿರು ಸುಮಿತ್ರ ಸಿಕ್ಕರಲೆ ದಿನದಿನಕೆ || ೭ ||

ಹಿರಣ್ಯಕನು ಈಚೆಗೆ ಬಂದು ಬಲೆಯ ಹಗ್ಗಗಳಲ್ಲಿ ಸಿಕ್ಕಿಕೊಂಡಿರುವ ಚಿತ್ರಗ್ರೀವನನ್ನೂ ಅವನ ಪರಿವಾರವನ್ನೂ ಕಂಡು ದುಃಖಪಟ್ಟು ''ಇದೇನಯ್ಯಾ?'' ಎಂದು ಕೇಳಲು, ಚಿತ್ರಗ್ರೀವನು ಹೇಳಿದನು: ''ಅಯ್ಯಾ, ತಿಳಿದು ತಿಳಿದು ಕೇಳುವೆಯಲ್ಲ? ತಿಳಿಯದೆ? ಶುಭವೂ ಅಶುಭವೂ ಆದ ತನ್ನ ಕರ್ಮವು ಯಾವುದುಂಟೋ ಅದು ಯಾವಾಗ ಯಾವ ರೂಪದಲ್ಲಿ ಯಾರಿಂದ ಹೇಗೆ ಎಷ್ಟು ಫಲವಾಗಬೇಕೋ ಆವಾಗ ಆ ರೂಪದಲ್ಲಿ ಅವರಿಂದ ಹಾಗೆ ಅಷ್ಟು ಫಲವಾಗುವುದು. ನನಗೂ ಈ ಬಂಧನವು ನಾಲಗೆಯ ಚಾಪಲ್ಯದಿಂದ ಆಯಿತು. ಅದಿರಲಿ. ಈಗ ನೀನು ಬೇಗ ಈ ಹಗ್ಗಗಳನ್ನು ಕತ್ತರಿಸಿ ನಮ್ಮನ್ನು ಬಿಡಿಸು.'' ಅದನ್ನು ಕೇಳಿ ಹಿರಣ್ಯಕನು ಹೇಳಿತು:–
ಹಕ್ಕಿಗಳು ನೂರು ಯೋಜನದಲ್ಲಿರುವ ಮಾಂಸದ ತುಂಡನ್ನು ಕಾಣು

ವುವು. ಆದರೂ ಮುಗ್ಗುಲಲ್ಲಿರುವ ಬಲೆಯ ದಾರವನ್ನು ಕಾಣುವ ದಿಲ್ಲ. ಇದಲ್ಲವೇ ವಿಧಿಯು! ಅಲ್ಲದೆ,

ಗ್ರಹಣ ಹಿಡಿವುದು ಸೂರ್ಯ ಚಂದ್ರರಿಗೆ ||
ಬಂಧವಾಗುವುದಾನೆ ಹಕ್ಕಿ ಹಾವಿಂಗೆ ||
ಬುದ್ಧಿವಂತಗೆ ತಪ್ಪದೈ ದಾರಿದ್ರ್ಯ ||
ನಂಬಬೇಕಿದ ಕಂಡು ವಿಧಿಯು ಬಲವೆಂದು || ೮ ||

ಆಕಾಶದಲ್ಲಿಯೇ ಸಂಚರಿಸುವ ಹಕ್ಕಿಗಳಿಗೆ ಆಪತ್ತು ಬರುವುದು. ಸಮುದ್ರ ಮಧ್ಯದಲ್ಲಿ ಆಳದಲ್ಲಿರುವ ಮೀನುಗಳನ್ನೂ ಹಿಡಿದುಹಾಕುವರು. ಹೀಗಿರಲು ಕಾಲವು ಬಂದಾಗ ಯಾರು ತಾನೇ ಆಪತ್ತಿಗೆ ವಶರಾಗದಿರುವರು?" ಎಂದು ಶೋಕಿಸಿ, ಆ ಬಲೆಯ ಹಗ್ಗಗಳನ್ನು ಕತ್ತರಿಸಲು ಹೊರಟು, ಮೊದಲು ಚಿತ್ರಗ್ರೀವನನ್ನು ಹಿಡಿದಿದ್ದ ದಾರಗಳನ್ನು ಕತ್ತರಿಸಲು ಹೊರಟಿತು.

ಆಗ ಆ ಚಿತ್ರಗ್ರೀವನು "ಮಿತ್ರ, ಬೇಡ, ಬೇಡ. ಮೊದಲು ನನ್ನ ಪರಿವಾರದವರ ದಾರಗಳನ್ನು ಕತ್ತರಿಸು. ಆಮೇಲೆ ನನ್ನದು." ಎಂದಿತು. ಅದಕ್ಕೆ ಹಿರಣ್ಯಕ "ಹಾಗಲ್ಲ. ಮೊದಲು ಅರಸು ಆಮೇಲೆ ಪರಿವಾರದವರು" ಎನ್ನಲು, ಪಾರಿವಾಳವು, "ಮಿತ್ರ, ಹಾಗೆನ್ನಲೇಡ. ಇವರೆಲ್ಲರೂ ತಮ್ಮ ಮನೆ ಬಾಗಿಲುಗಳನ್ನು ಬಿಟ್ಟು ಬಂದು ನನ್ನನ್ನು ಸೇರಿರುವರು. ಅದರಿಂದ ಅವರಿಗೆ ಇಷ್ಟಾದರೂ ಗೌರವವನ್ನು ತೋರಿಸಬೇಡವೆ? ಯಾವ ಅರಸನು ತಾನು ದರಿದ್ರನೇ ಆಗಿದ್ದರೂ ತನ್ನ ಪರಿವಾರದವರನ್ನು ತನಗೆ ಸಮಾನರೆಂದು ಭಾವಿಸುವನೋ ಅವನನ್ನು ಅವನ ಪರಿವಾರದವರು ಯಾವಾಗಲೂ ಬಿಡುವುದೇ ಇಲ್ಲ. ಪರಿವಾರದ ಮೇಲೆ ಇಟ್ಟುಕೊಂಡಿರುವ ವಿಶ್ವಾಸವೇ ಸಂಪತ್ತಿಗೆಲ್ಲ ಮೂಲವು. ಅದರಿಂದಲೇ ಸಲಗನು ಹಿಂಡಿಗೆ ನಾಯಕನಾಗುವುದು. ಅಲ್ಲದೆ ಕೇಳು, ನನ್ನ ಪಾಶಗಳನ್ನು ಬಿಡಿಸುತ್ತಿರುವಾಗ ನಿನ್ನ ಹಲ್ಲುಗಳು ಮುರಿದು ಹೋದರೆ ಏನು ಗತಿ?



ಅಥವಾ ಆ ಬೇಡನೇ ಬಂದರೆ ಆಗ ನಾನು ತಪ್ಪಿಸಿಕೊಂಡು ಇವರು ಅವನ ಕೈಗೆ ಸಿಕ್ಕಿಬಿಟ್ಟರೆ, ಆಗ ನನಗೆ ತಪ್ಪದೆ ನರಕವಾಗುವುದು. ಅದರಿಂದ ಪರಿವಾರದವರನ್ನು ರಕ್ಷಿಸಿ ಅನಂತರ ತನ್ನನ್ನು ರಕ್ಷಿಸಿಕೊಳ್ಳಬೇಕು. ಇದು ಅರಸನ ಧರ್ಮ.'' ಎಂದಿತು.

ಅದನ್ನು ಕೇಳಿ ಹಿರಣ್ಯಕನು ಬಹಳ ಸಂತೋಷಪಟ್ಟು ''ಮಿತ್ರ ನಾನೂ ರಾಜಧರ್ಮವನ್ನು ಬಲ್ಲೆನು. ಆದರೂ ನಿನ್ನನ್ನು ಪರೀಕ್ಷಿಸಬೇಕೆಂದು ಹಾಗೆ ಹೇಳಿದೆನು. ನನ್ನವರು ಬೇಕಾದಷ್ಟು ಮಂದಿ ಇರುವರು. ನಾವೆಲ್ಲ ಬಂದಿರುವಾಗ ಈ ಬಲೆಯನ್ನು ಕತ್ತರಿಸುವುದು ಎಷ್ಟು ಹೊತ್ತಿನ ಕೆಲಸ? ಯೋಚಿಸಬೇಡ. ಅದನ್ನು ಒಂದು ನಿಮಿಷದಲ್ಲಿ ಮಾಡುವೆವು. ನೀನು ನಿನ್ನ ಪರಿವಾರದವರಲ್ಲಿ ಬೇಕಾದ

ಹಾಗೆ ವಿಶ್ವಾಸವಿಟ್ಟುಕೊಂಡಿರುವೆ? ಇದರಿಂದ ನಿನಗೆ ಒಳ್ಳೆಯದಾಗುವುದು. ನಿನ್ನ ಪರಿವಾರವು ಬೆಳೆಯುವುದು. ನಿನ್ನ ಹಾಗೆ ಪರಿವಾರದಲ್ಲಿ ವಿಶ್ವಾಸವಿಟ್ಟುಕೊಂಡಿರುವವನು ಕಪೋತಗಳಿಗೆ ಮಾತ್ರವಲ್ಲ, ಮೂರು ಲೋಕಕ್ಕೂ ಅರಸಾಗಲು ಅರ್ಹನು'' ಎಂದು ಹೇಳಿ ಅವನನ್ನು ಹೊಗಳುತ್ತಾ ತನ್ನ ಪರಿವಾರವನ್ನೆಲ್ಲ ಕರೆಯಿಸಿಕೊಂಡು ಆ ಕಪೋತಗಳ ಎಲ್ಲದರ ಬಂಧನವನ್ನೂ ಕತ್ತರಿಸಿ ಹಾಕಿತು. ಆ ಪಾರಿವಾಳದ ಅರಸನನ್ನು ''ಇನ್ನು ಹೋಗಿ ಬಾ, ಸುಖವಾಗಿರು. ಇನ್ನು ಯಾವ ಆಪತ್ತು ಬಂದರೂ ನನ್ನನ್ನು ಮರೆಯದಿರು'' ಎಂದು ಹೇಳಿ ಅದನ್ನು ಕಳುಹಿಸಿಕೊಟ್ಟು ತಾನೂ ತನ್ನ ಬಿಲವನ್ನು ಹೊಕ್ಕಿತು. ಚಿತ್ರಗ್ರೀವನೂ ಸುಖವಾಗಿ ತನ್ನ ದುರ್ಗದ ಕಡೆಗೆ ಹೊರಟಿತು. ಮಿತ್ರರುಳ್ಳವರು ಎಂಥಹ ಕಷ್ಟಗಳನ್ನೇ ಆಗಲಿ ಕಳೆದುಕೊಳ್ಳುವರು. ಎಂತಹ ಅಸಾಧ್ಯವಾದ ಕಾರ್ಯಗಳನ್ನೂ ಸಾಧಿಸುವರು. ಅದರಿಂದ ತನಗೆ ಸಮಾನರಾಗಿರುವ ಮಿತ್ರರನ್ನು ಸಂಪಾದಿಸಿಕೊಳ್ಳಬೇಕು.

ಲಘುಪತನಕನೆಂಬ ಆ ಕಾಗೆಯು ನಡೆದುದು ಎಲ್ಲವನ್ನೂ ನೋಡಿ ಆಶ್ಚರ್ಯಪಟ್ಟು ಯೋಚಿಸಿತು:—''ಆಹಾ, ಈ ಹಿರಣ್ಯಕನ ಬುದ್ಧಿ, ಶಕ್ತಿ, ದುರ್ಗ, ಸಾಮಗ್ರಿ, ಇವುಗಳನ್ನು ಏನೆಂದು ಹೇಳೋಣ. ಇಲ್ಲದಿದ್ದರೆ ಈ ಚಿತ್ರಗ್ರೀವನಿಗೆ ಬಂಧನದಿಂದ ಮೋಕ್ಷವಾಗುತ್ತಿತ್ತೆ? ನಾನಾದರೋ ಯಾರನ್ನೂ ನಂಬುವನಲ್ಲ: ಬಹಳ ಚಂಚಲನು. ಆದರೂ ಈ ಹಿರಣ್ಯಕನ ಗೆಳೆತನವನ್ನು ಸಂಪಾದಿಸುವೆನು. ಬುದ್ಧಿವಂತರಾದವರು ಯಾವಾಗಲೂ ಮಿತ್ರರನ್ನು ಸಂಪಾದಿಸುತ್ತಲೇ ಇರಬೇಕು. ಸಮುದ್ರಕ್ಕೆ ಏನೂ ಕಡಿಮೆಯಿಲ್ಲ. ಆದರೂ ಚಂದ್ರನು ಹುಟ್ಟಲಿ ಎಂದು ಅಪೇಕ್ಷಿಸುತ್ತಲೇ ಇರುವನು*.

*ಚಂದ್ರನು ಉದಯವಾಗುತ್ತಲೂ ಸಮುದ್ರವು ಉಬ್ಬುವುದು. ಹಾಗೆ ಉಬ್ಬುವುದಕ್ಕೆ ಚಂದ್ರನೇ ಬರಬೇಕು.

ಹೀಗೆಂದುಕೊಂಡು ಕಾಗೆಯು ಮರದಿಂದ ಇಳಿದು ಬಿಲದ ಬಳಿಗೆ ಹೋಗಿ ಚಿತ್ರಗ್ರೀವನ ದನಿಯಂತೆ ದನಿಯನ್ನು ಮಾಡಿಕೊಂಡು "ಹಿರಣ್ಯಕ ಬಾ, ಬಾ," ಎಂದು ಕರೆಯಿತು. ಅದನ್ನು ಕೇಳಿ ಇಲಿಯು "ಬಿಲದಲ್ಲಿಯೇ ಇದ್ದುಕೊಂಡು ಏನಿದು? ಯಾವುದಾದರೂ ಪಾರಿವಾಳವು ಇನ್ನೂ ಬಲೆಯಲ್ಲಿ ಸಿಕ್ಕಿಕೊಂಡಿರುವುದೋ? ನನ್ನನ್ನು ಕರೆಯುವುದು ಏತಕ್ಕೆ? ಇರಲಿ. ನೋಡೋಣ. ಎಲೈ, ನೀನು ಯಾರು?" ಎಂದು ಕೇಳಿತು.

ಅದನ್ನು ಕೇಳಿದ ಕಾಗೆಯು "ನಾನು ಲಘುಪತನಕನೆಂಬ ಕಾಗೆಯು." ಎಂದಿತು. "ಹಾಗಾದರೆ ಮೊದಲು ಇಲ್ಲಿಂದ ಹೋಗು" ಎಂದು ಬಿಲದಲ್ಲಿ ಇನ್ನೂ ಒಳಕ್ಕೆ ಹೋಯಿತು. ಕಾಗೆಯು "ನಾನು ಭಾರಿಯ ಕೆಲಸಕ್ಕೋಸ್ಕರ ಬಂದಿರುವೆನು. ನನಗೆ ದರ್ಶನವನ್ನೂ ಕೊಡುವುದಿಲ್ಲವೇನು?" ಎಂದು ಪ್ರಾರ್ಥಿಸಿತು.

"ನಿನ್ನನ್ನು ದರ್ಶನ ಮಾಡುವುದರಿಂದ ನನಗೆ ಏನೂ ಕೆಲಸವಿಲ್ಲ." "ಅಯ್ಯಾ, ಚಿತ್ರಗ್ರೀವನಿಗೆ ನೀನು ಏನು ಉಪಕಾರವನ್ನು ಮಾಡಿದೆ ಎಂಬುದನ್ನು ನಾನು ಕಣ್ಣಾರೆ ಕಂಡೆನು. ಅದರಿಂದ ನನಗೆ ನಿನ್ನಮೇಲೆ ಪ್ರೀತಿಯುಂಟಾಯಿತು. ನನಗೆ ಪಾರಿವಾಳಕ್ಕೆ ಆದ ಹಾಗೆ ಯಾವಾಗಲಾದರೂ ಬಂಧನವುಂಟಾದರೆ, ನಿನ್ನಿಂದ ಮುಕ್ತಿಯನ್ನು ಪಡೆದುಕೊಳ್ಳಬಹುದು ಎಂದು ನಿನ್ನೊಡನೆ ಮೈತ್ರಿಯನ್ನು ಅಪೇಕ್ಷಿಸುತ್ತೇನೆ."

"ಅಯ್ಯಾ, ನೀನು ನನ್ನನ್ನು ತಿನ್ನುವವನು. ನಾನು ನಿನಗೆ ಅನ್ನವು. ಆದರಿಂದ ನನಗೂ ನಿನಗೂ ಸ್ನೇಹವಾಗುವುದೆಂತು? ಅದರಿಂದ ನೀನು ಹೋಗು. ಹಣದಲ್ಲಿಯೂ ಕುಲದಲ್ಲಿಯೂ ಸಮ ಸಮವಾಗಿರುವವರಿಗೆ ವಿವಾಹವೂ ಸ್ನೇಹವೂ ಆಗುವುವು. ವೈರವುಳ್ಳವರಲ್ಲಿ ಅವು ಎಂತು ಸಾಧ್ಯವು? ಅಲ್ಲದೆ, ಯಾವನಾದರೂ ಒಬ್ಬ

ಕೆಟ್ಟ ಬುದ್ಧಿಯು ತನಗಿಂತ ಹೆಚ್ಚಾದವರಲ್ಲಿ ಆಗಲಿ, ಕಡಿಮೆಯಾದವರಲ್ಲಿ ಆಗಲಿ, ಸ್ನೇಹಮಾಡಿದರೆ ಅವನು ಅಪಹಾಸ್ಯಕ್ಕೆ ಗುರಿಯಾಗುವನು. ಅದರಿಂದ ಹೋಗು.''

''ಅಯ್ಯಾ, ಹಿರಣ್ಯಕ, ಇಗೋ ನಾನು ನಿನ್ನ ದುರ್ಗದ ಬಾಗಿಲಲ್ಲಿ ಕುಳಿತಿರುವೆನು. ನೀನು ನನಗೆ ನಿನ್ನ ಸ್ನೇಹವನ್ನು ಕೊಟ್ಟೆಯಾ ಸರಿ: ಇಲ್ಲದಿದ್ದರೆ, ಇಲ್ಲಿಯೇ ಪ್ರಾಣವನ್ನು ಬಿಡುವೆನು. ಇಗೋ, ಇಲ್ಲಿಂದ ಮೇಲಕ್ಕೆ ಏಳುವುದೂ ಇಲ್ಲ.''

''ಅಯ್ಯಾ, ನೀನು ವೈರಿಯು, ನಿನ್ನೊಡನೆ ಮೈತ್ರಿಯೆಂತು? ಕೇಳಿಲ್ಲವೆ,

ಸಂಧಿಕೂಡದು ವೈರವಿರುವನೊಡನೆ ||
ಚೆನ್ನಾಗಿ ನೀರು ಕಾದಿದ್ದರೇನು ||
ಆರಿಸುವುದಲ್ಲವೇ ಬೆಂಕಿಯನ್ನು || ೯ ||

''ಅಯ್ಯಾ, ಹಿರಣ್ಯಕ, ನಾನು ನಿನ್ನನ್ನು ನೋಡಿಯೂ ಇಲ್ಲವಲ್ಲ? ನಿನ್ನೊಡನೆ ವೈರವು ಹೇಗೆ? ನೀನು ಇಲ್ಲದ್ದನ್ನು ಹೇಳಬಹುದೆ?

''ವೈರವು ಎರಡು ವಿಧವು. ಸಹಜ, ಕೃತ್ರಿಮ, ಎಂದು. ನೀನು ನಮಗೆ ಸಹಜ ವೈರಿಯು. ಕೃತ್ರಿಮವಾದ ವೈರವನ್ನು ಏನಾದರೂ ಮಾಡಿ ಕಳೆದು ಕೊಳ್ಳಬಹುದು. ಆದರೆ ಸಹಜವಾದ ವೈರವು ಮಾತ್ರ ಪ್ರಾಣವನ್ನು ಕೊಟ್ಟಲ್ಲದೆ ಕ್ಷಯವಾಗುವುದಿಲ್ಲ.''

''ಅಯ್ಯಾ, ವೈರವು ಎರಡು ವಿಧವೆಂದೆಯಲ್ಲ? ಅದು ಹೇಗೆ? ಹೇಳು.''

''ಕೇಳು. ಯಾವುದಾದರೂ ಒಂದು ಕಾರಣದಿಂದ ಬಂದ ವೈರವು ಕೃತ್ರಿಮವು. ಅದನ್ನು ಯಾವುದಾದರೂ ಉಪಕಾರಗಳನ್ನು ಮಾಡಿ ಕಳೆದುಕೊಳ್ಳಬಹುದು. ಕಾರಣವಿಲ್ಲದೆ ಬರುವ ವೈರವು ಸಹಜವು. ಅದು ಹೇಗೆ ಹೇಗೂ ಕಳೆದು ಹೋಗುವುದಿಲ್ಲ. ನೋಡು,

ಹಾವು ಮುಂಗುಸಿಗಳಿಗೆ, ನೀರು ಬೆಂಕಿಗಳಿಗೆ, ಸಿಂಹ ಗಜಗಳಿಗೆ, ಮೂರ್ಖ ಪಂಡಿತರಿಗೆ, ಸಜ್ಜನ ದುರ್ಜನರಿಗೆ ಇರುವಂತೆ ಇರುವುದು. ಸಹಜವೈರವು. ಕಾರಣವಿಲ್ಲದೆಯೇ ಒಬ್ಬರನ್ನೊಬ್ಬರು ಸಂತಾಪಪಡಿಸುವರು.''

''ಅಯ್ಯಾ, ನೀನು ಹೇಳುವುದು ಅಷ್ಟು ಸರಿಯಾಗಿಲ್ಲ, ಕೇಳು, ಕಾರಣವಿದ್ದರೆ ಮೈತ್ರಿಯು. ಕಾರಣವಿದ್ದರೆ ಶತ್ರುತ್ವವು. ಅದರಿಂದ ಬುದ್ಧಿವಂತನಾದವನು ಮೈತ್ರಿಯನ್ನು ಕಟ್ಟಿಕೊಳ್ಳಬೇಕು: ವೈರವನ್ನು ಬಿಡಬೇಕು. ಅದರಿಂದ, ದೊಡ್ಡಮನಸ್ಸು ಮಾಡು. ಬಾ. ಇಬ್ಬರೂ ಮಿತ್ರರಾಗೋಣ.''

''ಅಯ್ಯಾ, ನೀತಿ ಶಾಸ್ತ್ರದ ಸಾರವನ್ನೇ ಹೇಳುವೆನು ಕೇಳು. ಒಂದು ಸಲವಾದರೂ ದುಷ್ಟನಾಗಿದ್ದವನನ್ನು ಯಾವನಾದರೂ ಮತ್ತೆ ಮಿತ್ರನನ್ನು ಮಾಡಿಕೊಂಡರೆ, ಅವನು ಬಸುರಾದ ಹೇಸರ ಗತ್ತೆಯಂತೆ, ಮರಣಕ್ಕೆ ಗುರಿಯಾಗುವನು. ಅಥವಾ, 'ನನಗೇನು? ನಾನು ಗುಣವಂತನು. ನನ್ನನ್ನು ಯಾರುತಾನೇ ಏನು ಮಾಡಬಲ್ಲರು'? ಎಂಬುವುದೂ ಸರಿಯಲ್ಲ. ವ್ಯಾಕರಣವನ್ನು ಬರೆದ ಪಾಣಿನಿಯನ್ನು ಸಿಂಹವು ಕೊಂದಿತು. ಮೀಮಾಂಸೆಯನ್ನು ಬರೆದ ಜೈಮಿನಿಯನ್ನು ಆನೆಯು ಕೊಂದಿತು. ಛಂದಸ್ಸನ್ನು ಬರೆದ ಪಿಂಗಲನನ್ನು ಮೊಸಳೆಯು ಕೊಂದಿತು. ಪ್ರಾಣಿಗಳು ಅಜ್ಞಾನಿಗಳು. ಅವು ಗುಣಗಳನ್ನು ಹೇಗೆ ಬಲ್ಲುವು?''

''ಹಾಗೂ ಆಗಲಿ, ಆದರೂ ಕೇಳು, ಉಪಕಾರ ಮಾಡುವುದರಿಂದ ಮೃಗ ಪಕ್ಷಿಗಳಿಗೂ ಪ್ರೀತಿಯುಂಟಾಗುವುದು. ಮೂರ್ಖನನ್ನು ಹೆದರಿಸಿದರೆ ಆಸೆ ತೋರಿಸಿದರೆ ಅವರಿಗೆ ಪ್ರೀತಿಯುಂಟಾಗುವುದು. ಸತ್ಪುರುಷರಿಗೆ ದರ್ಶನದಿಂದಲೇ ಪ್ರೀತಿಯುಂಟಾಗುವುದು. ಅಲ್ಲದೆ, ದುರ್ಜನನು ಮಣ್ಣಿನ ಮಡಿಕೆಯಂತೆ: ಅದನ್ನು ಸುಲಭ

ವಾಗಿ ಒಡೆಯಬಹುದು: ಬೆಸೆಯಲಾಗುವುದಿಲ್ಲ. ಸಜ್ಜನನು ಚಿನ್ನದ ಪಾತ್ರೆಯಂತೆ: ಒಡೆಯುವುದಕ್ಕೆ ಆಗುವುದೇ ಇಲ್ಲ: ಬೆಸೆಯಬೇಕಾದಾಗ ಸುಲಭವಾಗಿ ಬೆಸೆಯಬಹುದು. ಕಬ್ಬಿನ ಸುಳಿಯಿಂದ ಹೇಗೆ ಗಂಟು ಗಂಟಿಗೂ ಸೀಯು ಹೆಚ್ಚಾಗುವುದೋ ಅದರಂತೆ ಸಜ್ಜನರ ಮೈತ್ರಿಯು ಹೆಚ್ಚುತ್ತ ಹೋಗುವುದು: ದುರ್ಜನರ ಮೈತ್ರಿಯು ಇಳಿಯುತ್ತ ಹೋಗುವುದು. ಅದರಿಂದ ನಾನು ಒಳ್ಳೆಯವನು. ಜೊತೆಗೆ ಆಣೆ ಮೊದಲಾದುವುಗಳನ್ನು ಮಾಡಿ ನಿನಗೆ ಭಯವಿಲ್ಲದಂತೆ ಮಾಡುವೆನು.''

''ನಿನ್ನ ಆಣೆ ಮೊದಲಾದುವುಗಳಲ್ಲಿ ನನಗೆ ನಂಬಿಕೆಯಿಲ್ಲ. ಆಣೆಯಿಟ್ಟರೆ ತಾನೇ ಶತ್ರುವನ್ನು ನಂಬಬಹುದೆ? ಇಂದ್ರನು ಆಣೆಯಿಟ್ಟು ತಾನೇ ವೃತ್ರನನ್ನು ಕೊಂದುದು?''

'' ಅದು ಹೇಗೆ? ''

ಇಲಿಯು ಹೇಳಿತು:—

## ಇಂದ್ರನು ವೃತ್ರನನ್ನು ಕೊಂದ ಕಥೆ.

ಇಂದ್ರನು ಕಶ್ಯಪ ಮಹರ್ಷಿಯ ಮಗನಾದ ತ್ರಿಶಿರಸ್ಸು ಎಂಬುವನನ್ನು ಕೊಂದನು. ಕಶ್ಯಪನಿಗೆ ಕೋಪ ಬಂತು. ಆತನು ಇಂದ್ರನನ್ನು ಕೊಲ್ಲುವ ಮಗನಾಗಬೇಕು ಎಂದು ಒಂದು ಯಾಗವನ್ನು ಮಾಡಿದನು. ಆದರೆ ಬಾಯಲ್ಲಿ ಹೇಳುವಾಗ ಅದು ಇಂದ್ರನು ಕೊಲ್ಲುವ ಮಗ ಎಂಬದಾಗಿ ಹೋಯಿತು. ಅಂತೂ ವೃತ್ರನು ಹುಟ್ಟಿದನು.

ವೃತ್ರನು ದಿನಕ್ಕೆ ಒಂದೊಂದು ಬಾಣದಷ್ಟು ಬೆಳೆದನು. ಭೂಮಿ, ಆಕಾಶಗಳಲ್ಲೆಲ್ಲಾ ತಾನೇ ತಾನಾಗಿ ಹೋದನು. ಆಗ ಅವನನ್ನು ಕಂಡು, ಇಂದ್ರನಿಗೆ ಅಂಜಿಕೆಯಾಗಿ ಹೋಗಿ ಮಹಾ ವಿಷ್ಣುವನ್ನು ಕೇಳಿಕೊಂಡನು. ಆತನು "ನೀನೇ ಅವನೊಡನೆ ಸ್ನೇಹ ಮಾಡಿಕೊಂಡು, ಸಮಯ ನೋಡಿ ಕೊಲ್ಲಬೇಕು. ಯುದ್ಧದಲ್ಲಿ ನೀನು ಆತನನ್ನು ಗೆಲ್ಲಲಾರೆ" ಎಂದನು. ಅದರಂತೆ ಇಂದ್ರನು ವೃತ್ರನೊಡನೆ ಸ್ನೇಹಕ್ಕೆ ಬಂದನು.

ವೃತ್ರನು ಇಂದ್ರನನ್ನು ನಂಬಲಿಲ್ಲ. ಆಗ ಇಂದ್ರನು "ನಾನು ನಿನ್ನ ಮೇಲೆ ಯಾವ ಆಯುಧವನ್ನೂ ಪ್ರಯೋಗಿಸುವುದಿಲ್ಲ. ಮಣ್ಣು, ನೀರು, ಬೆಂಕಿ. ಗಳನ್ನು ನಿನ್ನ ಮೇಲೆ ಹೊಡೆಯುವುದಿಲ್ಲ, ಹಗಲು ನಿನ್ನೊಡನೆ ಯುದ್ಧ ಮಾಡುವುದಿಲ್ಲ ರಾತ್ರಿ ಯುದ್ಧ ಮಾಡುವುದಿಲ್ಲ. ಇನ್ನೇನು ಆಣೆಯಿಡಲಿ? ಹೇಳು" ಎಂದನು. ಆ ಆಣೆಗಳಿಂದ ವೃತ್ರನು ಇಂದ್ರನನ್ನು ನಂಬಿದನು.



ಅವನಿಗೆ ಇನ್ನೂ ನಂಬಿಕೆಯಾಗುವಂತೆ ಇಂದ್ರನು ತನ್ನ ಇಂದ್ರಪದವಿಯನ್ನು ವೃತ್ರನಿಗೆ ಬಿಟ್ಟುಕೊಟ್ಟನು.

ದಿನವೂ ಇಂದ್ರನನ್ನು ಕರೆದುಕೊಂಡು ವೃತ್ರನು ವಿಹಾರಕ್ಕಾಗಿ ಹೋಗುತ್ತಿದ್ದನು. ಒಂದು ದಿನ ಸಂಜೆಯ ಹೊತ್ತಿನಲ್ಲಿ ಇಬ್ಬರೂ ಸಮುದ್ರ ತೀರಕ್ಕೆ ಬಂದರು. ಅಲ್ಲಿ ಸಮುದ್ರದ ನೊರೆಯು ಗುಡ್ಡೆ ಗುಡ್ಡೆಗಳಾಗಿ ಬಿದ್ದಿತ್ತು. ಗುಂಡುಗಳ ಹಾಗೆ ಬಿದ್ದಿರುವ ಆ ಗುಡ್ಡೆಗಳನ್ನು ನೋಡಿ ವೃತ್ರನು "ಈ ಗುಡ್ಡೆಗಳಿಂದ ಹೊಡೆದು ಯಾರನ್ನಾದರೂ ಕೊಲ್ಲುವುದು ಸಾಧ್ಯವೆ?" ಎಂದನು.

ಇಂದ್ರನು "ಬಲಿಷ್ಠನಾದರೆ ಸಾಧ್ಯ" ಎಂದನು. "ಹಾಗಾದರೆ ಇದರಿಂದ ಹೊಡೆದು ನನ್ನನ್ನು ಕೊಲ್ಲಬಲ್ಲೆಯಾ?" ಎಂದು ವೃತ್ರನು ಕೇಳಲು, ಇಂದ್ರನು ಸುಮ್ಮನಿದ್ದನು. ಇನ್ನು ಎರಡು ಸಲ ಕೇಳಲು ಇಂದ್ರನು ತನ್ನಲ್ಲಿಯೇ ಹೋಚಿಸಿಕೊಂಡನು: ಇದು ಹಗಲಲ್ಲ: ರಾತ್ರಿಯಲ್ಲ: ಈ ನೊರೆಯು ಆಯುಧಲ್ಲ: ನೀರಲ್ಲ: ಮಣ್ಣಲ್ಲ: ಬೆಂಕಿಯಲ್ಲ: ಇದರಿಂದ ಹೊಡೆ ಎನ್ನುತ್ತಿದ್ದಾನೆ. ಶ್ರೀ ಮಹಾವಿಷ್ಣುವು ಹೇಳಿದ ಕಾಲ ಬಂದಿರಬೇಕು" ಎಂದುಕೊಂಡು, ತನ್ನ ವಜ್ರವನ್ನು ಕರೆದು ನಿನ್ನ ಶಕ್ತಿಯನ್ನು ಇದಕ್ಕೆ ಕೊಡು ಎಂದು ಗುಟ್ಟಾಗಿ ಹೇಳಿ, ಆ ನುಡ್ಡೆಯನ್ನು ತೆಗೆದುಕೊಂಡು "ಇಗೋ ಹೊಡೆಯುವೆನು. ನೋಡು" ಎಂದು ವೃತ್ರನ ಮೇಲೆ ಎಸೆದನು. ಅದೇ ಅವನನ್ನು ಕೊಂದಿತು. ಆದರಿಂದ ಆಣೆಯಿಟ್ಟರೂ ಶತ್ರುವನ್ನು ಹತ್ತಿರ ಸೇರಿಸಬಾರದು ಎಂದು ಹೇಳಿದೆನು."

ಅಲ್ಲದೆ, ಎಲೈ ಕಾಗೆಯೇ ಕೇಳು. ತನಗೆ ವೃದ್ಧಿಯೂ ಆಯುಷ್ಯವೂ ಸುಖವೂ ಆಗಬೇಕು ಎನ್ನುವವನು ಶತ್ರುವನ್ನು ನಂಬಬಾರದು. ಸಮುದ್ರದ ಮೇಲೆ ಹೋಗುತ್ತಿರುವ ಹಡಗನ್ನು ಸಣ್ಣ ತೂತು ಮುಳುಗಿಸಿಬಿಡುವುದು. ಅಲ್ಲದೆ, ನಾವು ಯಾರಲ್ಲಿ ವಿಶ್ವಾಸ ಮಾಡುವೆವೋ ಅವರಿಂದ ಭಯ ಬಂದರೆ ಅದು ಸಂಪೂರ್ಣವಾಗಿ ನಾಶಮಾಡುವುದು. ಬಲವಂತನಾದರೂ ವಿಶ್ವಾಸವಿಲ್ಲದವನು ಕೊಲ್ಲುವುದಿಲ್ಲ. ವಿಶ್ವಾಸ ಪಡೆದಿರುವವನು ತಾನು ದುರ್ಬಲನಾದರೂ ಪ್ರಬಲನನ್ನೂ ಕೊಂದುಬಿಡುವನು. ವಿಷ್ಣುಗುಪ್ತನು ಒಳ್ಳೆಯದನ್ನು ಮಾಡಿ ಬದುಕೋ ಎನ್ನುವನು. ಭಾರ್ಗವನು ಮೈತ್ರಿಯನ್ನು ಸಂಪಾದಿಸಿ ಬದುಕು ಎನ್ನುವನು. ಬೃಹಸ್ಪತಿಯು ವಿಶಾಸವಿಡದೆ ಬದುಕು ಎನ್ನುವನು. ಹೀಗೆ ನೀತಿ ಶಾಸ್ತ್ರವು ಮೂರು ವಿಧವಾಗಿ ಹೇಳುವುದು.

ಇದಿಷ್ಟನ್ನೂ ಕೇಳಿ ಕಾಗೆಗೆ ಏನು ಹೇಳಬೇಕೋ ಅದೇ ತಿಳಿಯದಾಯಿತು: "ಅಹಹಾ, ನೋಡಿದೆಯಾ? ನೀತಿ ಶಾಸ್ತ್ರದಲ್ಲಿ ಈ ಹಿರಣ್ಯಕನು ಎಷ್ಟು ನಿಪುಣನು. ಅದರಿಂದಲೇ ತಾನೇ ನಾನು ಈತನ ಮೈತ್ರಿಯು ಬೇಕು ಎಂದು ಇಷ್ಟು ಒದ್ದಾಡುತ್ತಿರುವುದು!" ಎಂದುಕೊಂಡು, ಮತ್ತೆ ಹೇಳಿತು. "ಎಲೈ ಹಿರಣ್ಯಕನೆ, ಸಜ್ಜನರಿಗೆ ಏಳು ಹೆಜ್ಜೆ ನಡೆಯುವಷ್ಟರಲ್ಲಿ ಮೈತ್ರಿಯಾಗುವುದೆಂದು ಹೇಳುವರು. ಅದರಿಂದ ನೀನು ನನ್ನ ಮಿತ್ರನಾಗಿ ಹೋಗಿರುವೆ. ಈಗ ನನ್ನ ಮಾತನ್ನು ನೀನು ಕೇಳಲೇಬೇಕು. ನೀನು ನನ್ನನ್ನು ನಂಬುವುದಿಲ್ಲ. ಹೋಗಲಿ. ನೀನು ಬಿಲದಲ್ಲಿಯೇ ಇದ್ದುಕೊಂಡು ನನ್ನೊಡನೆ ಮಾತು ಕಥೆಗಳನ್ನಾಡಿ ಒಳ್ಳೆಯದು ಕೆಟ್ಟದನ್ನು ಹೇಳಬಹುದಲ್ಲಾ! ಅಷ್ಟಾದರೂ ಮಾಡು" ಎಂದಿತು.

ಅದನ್ನು ಕೇಳಿ ಹಿರಣ್ಯಕನು ಯೋಚಿಸಿತು: "ಈ ಮಾತು ಆಡಿದುದರಿಂದ ಈ ಲಘುಪತನಕನು ಯೋಗ್ಯನು, ಬಲ್ಲವನು, ಸತ್ಯವಂತನು ಎಂದಾಯಿತು. ಅದರಿಂದ ಇವನೊಡನೆ ಮೈತ್ರಿಯನ್ನು ಮಾಡಬೇಕು." ಎಂದುಕೊಂಡು "ಹಾಗಾದರೆ ನೀನು ಯಾವಾಗಲೂ ನನ್ನ ಬಿಲದಲ್ಲಿ ಕಾಲೂ ಇಡಕೂಡದು. ಇದಕ್ಕೆ ಒಪ್ಪುವೆಯಾ?" ಎಂದು ಕೇಳಿತು. ಕಾಗೆಯು ಒಪ್ಪಿತು. ಇಬ್ಬರಿಗೂ ಸ್ನೇಹವಾಯಿತು.

ಇಬ್ಬರೂ ಸ್ನೇಹಿತರಾಗಿ ಒಬ್ಬರಿಗೊಬ್ಬರು ಏನಾದರೂ ಒಂದು ಉಪಕಾರ ಮಾಡುತ್ತಾ ಕಾಲವನ್ನು ಕಳೆಯುತ್ತಿದ್ದರು. ಲಘುಪತನಕನು ಒಳ್ಳೆಯ ಮಾಂಸದ ತುಂಡುಗಳು, ಏನಾದರೂ ಉತ್ತಮವಾದ ತಿಂಡಿಗಳು, ಸಿಕ್ಕಿದರೆ ಅವುಗಳನ್ನು ತಂದು ಹಿರಣ್ಯಕನಿಗೆ ಕೊಡುವುದು. ಹಿರಣ್ಯಕನೂ ತನಗೆ ಸಿಕ್ಕಿದ ಉತ್ತಮವಾದ ಅಕ್ಕಿ, ತಿಂಡಿ, ಮೊದಲಾದುವುಗಳನ್ನು ಲಘುಪತನಕನಿಗೆಂದು ತೆಗೆ

ದಿಟ್ಟು ಕೊಡುವುದು. ಇದೇ ತಾನೇ ಮಿತ್ರ ಲಕ್ಷಣವೆನ್ನುವುದು? ಕೇಳಿಲ್ಲವೆ?

ಕೊಡುವ, ಕೊಂಬನು, ಗುಟ್ಟು ಹೇಳುವ, ಕೇಳುವ, ||
ಉಂಬ, ಉಣಿಸುವ, ಗೆಳೆಯನ ಲಕ್ಷಣ || ೧೦ || ಆರು

ಉಪಕೃತಿಯಿಲ್ಲದೆ ಪ್ರೀತಿಯು ಜನಿಸುಗುಮೇಂ ||
ಕಾಣಿಕೆಯೊಪ್ಪಿಸೆ ದೇವನು ಒಲಿವನಲೇ || ೧೧ ||

ಕೊಡುವುದಿಲ್ಲದೆ ಕೂರ್ಮೆ ಬೆಳೆವುದೆ ಲೋಕದೋಳ್ ||
ಹಾಲ ಕೊಡದಿರೆ ಕರುವು ತಾಯ್ಬಳಿ ಸೇರ್ವುದೇ || ೧೨ ||

ಮಗನಿಗೆ ಮಿಗಿಲೈ ದಾನವು ನೋಡು ||
ವಿವೇಕವಿಲ್ಲದ ಪಶುಗಳ ಕೇಳು ||
ತಿಂಡಿಯ ನೀಡಲು ಕರುವನು ಮರೆತು ||
ಹಾಲೆಲ್ಲವ ಕೊಡುವುದು ಎಮ್ಮೆಯದು || ೧೩ ||

ಅಷ್ಟೇನು? ಹೀಗೆ ಕಾಗೆಗೂ ಇಲಿಗೂ ಪ್ರೀತಿಯು ಒಂದೇ ಸಮನಾಗಿ ಬೆಳೆದು ಅದದಕ್ಕೆ ಸ್ನೇಹವು ಬಲವಾಗಿ ಏರ್ಪಟ್ಟಿತು. ಒಂದೊಂದು ದಿವಸ ಆ ಇಲಿಯು ಕಾಗೆಯ ರೆಕ್ಕೆಗಳಲ್ಲಿ ಸೇರಿಕೊಳ್ಳುವುದು. ಅಷ್ಟು ಮಟ್ಟಿಗೆ ಇಬ್ಬರಿಗೂ ಪ್ರೀತಿಯೂ ಬೆಳೆಯಿತು.

ಒಂದು ದಿನ ಕಾಗೆಯು ಇಲಿಯ ಬಳಿ ಬಂದಾಗ ಅದರ ಕಣ್ಣಿನಲ್ಲಿ ನೀರು ಊರಿತ್ತು. ಬಿಗಿದುಕೊಂಡಿರುವ ಕತ್ತಿನಿಂದ ಮಾತನಾಡುತ್ತಾ "ಹಿರಣ್ಯಕ, ನನಗೇಕೋ ಈ ದೇಶವೇ ಬೇಡವಾಗಿರುವುದು. ಅದರಿಂದ ಇನ್ನೆಲ್ಲಿಯಾದರೂ ಹೋಗುವೆನು." ಎಂದು ಹೇಳಿತು. ಹಿರಣ್ಯಕನು ಗಾಬರಿಗೊಂಡು "ಅಯ್ಯಾ, ಅಂತಹ ವಿರಕ್ತಿಗೆ ಏನು ಕಾರಣ?" ಎಂದು ಕೇಳಿತು. ಕಾಗೆಯು ಹೇಳಿತು:— ಈ ದೇಶದಲ್ಲಿ ದೊಡ್ಡದಾದ ಬರಗಾಲವು ಬಂದಿದೆ. ತಮಗೇ ಹೊಟ್ಟೆಗಿಲ್ಲದ ಜನರು ಹಕ್ಕಿಗಳಿಗೆ ಏನು ಕೊಟ್ಟಾರು? ಸಾಲದೆ ಜನರು ಹೊಟ್ಟೆಗಿಲ್ಲದೆ ಹಕ್ಕಿಗಳನ್ನಾದರೂ ಹಿಡಿದು ತಿನ್ನೋಣವೆಂದು

ಬಲೆಗಳನ್ನು ನೇಯಲು ಹಗ್ಗಗಳನ್ನು ಹೊಸೆಯುತ್ತಿದ್ದಾರೆ. ನಾನೂ ಬಲೆಗೆ ಸಿಕ್ಕಿಕೊಂಡಿದ್ದು ಇನ್ನೂ ಆಯುಸ್ಸು ಇತ್ತಾಗಿ ಬಿಡಿಸಿಕೊಂಡು ಬಂದೆನು. ಇದರಿಂದ ಇಷ್ಟು ಬೇಸರವಾಗಿರುವುದು.'' ಹಿರಣ್ಯಕನು ಕೇಳಿತು:—''ನೀನು ಎಲ್ಲಿಗೆ ಹೋಗಬೇಕೆಂದಿರುವೆ?'' ಕಾಗೆಯು ಹೇಳಿತು:—''ದಕ್ಷಿಣ ದೇಶದಲ್ಲಿ ಒಂದು ಭಾರಿಯ ಕಾಡು ಇದೆ. ಅದರ ನಡುವೆ ಒಂದು ದೊಡ್ಡ ಸರೋವರವಿದೆ. ಅಲ್ಲಿ ಮಂಥರಕನೆಂಬ ಒಂದು ಆಮೆಯಿದೆ. ಅದು ನನಗೆ ನಿನಗಿಂತ ಹೆಚ್ಚಿನ ಮಿತ್ರನು. ಆತನು ನನಗೆ ಮೃತ್ಯು ಮಾಂಸಗಳನ್ನು ಕೊಡುವನು. ಅದನ್ನು ತಿಂದುಕೊಂಡು, ಆತನ ಜೊತೆಯಲ್ಲಿ ಸುಖವಾಗಿ ಮಾತು ಕಥೆಗಳನ್ನು ನಡೆಸಿಕೊಂಡು ಇದ್ದು ಹೋಗುವೆನು. ಇಲ್ಲಿದ್ದುಕೊಂಡು ಈ ಹಕ್ಕಿಗಳು ಬಲೆಯಲ್ಲಿ ಸಿಕ್ಕಿಕೊಂಡು ಸಾಯುವುದನ್ನು ನೋಡಿಕೊಂಡಿರಲಾರೆನು. ಕೇಳಿಲ್ಲವೆ? ''ಮಳೆಯಿಲ್ಲದೆ ದೇಶವೆಲ್ಲವೂ ಬೆಂದುಹೋಗಿ, ಬೆಳೆಗಳೆಲ್ಲವೂ ನಷ್ಟವಾಗಿ ಹೊಲವು ಕಾಡಾದಾಗ, ದೇಶಭಂಗವೂ ಕುಲಕ್ಷಯವೂ ಆಗುವುದು. ಅದನ್ನು ಯೋಗ್ಯರು ನೋಡಬಾರದು.'' ನಮ್ಮಂಥವರಿಗೆ ಯಾವ ದೇಶಕ್ಕೆ ಹೋದರೇನು? ಅದೇ ಸ್ವದೇಶವಾಗುವುದು.

ಹಿರಣ್ಯಕನು ಹೇಳಿತು: ''ಹಾಗಿದ್ದರೆ ನಾನೂ ನಿನ್ನೊಡನೆ ಬರುವೆನು. ನನಗೂ ಸಹಿಸಲಾರದಂಥ ದುಃಖವು ಬಂದಿದೆ.'' ಕಾಗೆಯು ಹೇಳಿತು:— ''ಅದೇನು ನಿನ್ನ ದುಃಖ? ಅದನ್ನು ಮೊದಲು ಹೇಳು'' ಇಲಿಯು ಹೇಳಿತು: ''ಹೇಳಬೇಕು ಎಂದರೆ ಬೇಕಾದಷ್ಟಿದೆ. ಅಲ್ಲಿಗೆ ಹೋದಮೇಲೆಯೇ ಎಲ್ಲವನ್ನೂ ಹೇಳುವೆನು.'' ಕಾಗೆಯು ಹೇಳಿತು.: ''ನಾನು ಆಕಾಶದಲ್ಲಿ ಹೋಗುವವನು. ನೀನು ನನ್ನ ಜೊತೆಯಲ್ಲಿ ಹೋಗುವುದು ಹೇಗೆ?'' ಇಲಿಯು ಹೇಳಿತು:— ನೀನು ನನ್ನನ್ನು ಕಾಪಾಡಬೇಕೆಂದಿದ್ದರೆ, ನನ್ನನ್ನು ನಿನ್ನ/ಬೆನ್ನಿನ ಮೇಲೆ ಕೂರಿಸಿಕೊಂಡು ಹೋಗುವೆ.'' ಆ ಮಾತನ್ನು ಕೇಳಿ ಕಾಗೆಗೆ

ಬಹು ಸಂತೋಷವಾಯಿತು. ಹೇಳಿತು:—"ನೀನು ಅದಕ್ಕೆ ಒಪ್ಪಿದರೆ ನಾನೇ ಧನ್ಯನು. ನೀನೂ ಜೊತೆಯಲ್ಲಿ ಇರುವುದಾದರೆ ಅದಕ್ಕಿಂತ ನನಗೆ ಅಗಬೇಕಾದುದು ಇನ್ನೇನು? ನಾನು ಸಂಪಾತ, ವಿಪ್ರಪಾತ, ಮಹಾಪಾತ, ನಿಪಾತನ, ವಕ್ರ, ತಿರ್ಯಗ್ಯಾನ, ಊರ್ಧ್ವಯಾನ, ಲಘುಯಾನ, ಎಂಬ ಎಂಟು ರೀತಿಯ ಹಾರುವಿಕೆಗಳನ್ನೂ ಬಲ್ಲೆನು. ನೀನು ನನ್ನ ಬೆನ್ನಿನ ಮೇಲೆ ಕುಳಿತುಕೋ. ನಿನ್ನನ್ನು ಸುಖವಾಗಿ ಆ ಸರೋವರದ ಬಳಿಗೆ ಕರೆದುಕೊಂಡು ಹೋಗುವೆನು." ಎಂದಿತು. ಇಲಿಯೂ ಅದರ ಬೆನ್ನಿನಮೇಲೆ ಹತ್ತಿ ಕುಳಿತುಕೊಂಡಿತು. ಕಾಗೆಯು ತನ್ನನ್ನು ಏರಿಕೊಂಡಿರುವ ಇಲಿಗೆ ಆಯಾಸವಾಗದಂತೆ, ಸುಖವಾಗಿ ಸಂಪಾತವೆಂಬ ರೀತಿಯಲ್ಲಿ ಹಾರುತ್ತ ಹೋಗಿ ಸರೋವರವನ್ನು ಸೇರಿತು.

ಇವೆರಡೂ ಬಂದಾಗ ಮಂಥರಕನೆಂಬ ಆಮೆಯು ಸರೋವರದ ತೀರದಲ್ಲಿಯೇ ಇತ್ತು. ಇಲಿಯನ್ನು ಬೆನ್ನಿನಮೇಲೆ ಇಟ್ಟುಕೊಂಡು ಬರುತ್ತಿರುವ ಈ ಕಾಗೆಯನ್ನು ಕಂಡು. ಯಾರೋ ಏನೋ ಎಂದು ಅದು ತಟ್ಟನೆ ಹೋಗಿ ನೀರಿಗೆ ದುಮುಕಿತು. ಲಘುಪತನಕನು ಹಿರಣ್ಯಕನನ್ನು ಒಂದು ಮರದ ಪೊಟ್ಟರೆಯಲ್ಲಿಟ್ಟು, ತಾನು ಮರದ ಕೊಂಬೆಯ ಮೇಲೆ ಕುಳಿತುಕೊಂಡು ಗಟ್ಟಿಯಾಗಿ ಕೂಗಿ ಹೇಳಿತು:— ಮಂಥರಕ, ಮಂಥರಕ, ಬಾ, ಬಾ, ನಾನು ನಿನ್ನ ಮಿತ್ರನಾದ ಲಘುಪತನಕನು. ಬಂದು ನನ್ನ ಆಲಿಂಗನ ಮಾಡು. ಪಚ್ಚಕರ್ಪೂರವನ್ನು ಸೇರಿಸಿದ ಚಂದನ ಗಂಧಕ್ಕಿಂತಲೂ ಮಿತ್ರನ ಆಲಿಂಗನವು ಹಿತವೆನ್ನುವರು. ಅಲ್ಲದೆ.

ಮಿತ್ರನೆಂಬೆರಡಕ್ಷರದ । ಅಮೃತವಾರು ಸೃಜಿಸಿದರೋ ||
ರಕ್ಷೆಯಾಪಂಥಗಳಿಗೆ | ಔಷಧವು ಶೋಕ ತಾಪಕ್ಕೆ || ೧೪ ||

ಅದರಿಂದ ಬೇಗ ಬಾ," ಎಂದು ಕೂಗಲು, ಆಮೆಯು ಅದನ್ನು ಕೇಳಿ ನೀರಿನಿಂದ ಬೇಗ ಬಂತು. ಅದರ ಮೈಯೆಲ್ಲ

ಜುಮ್ಮೆಂದು, ಕಣ್ಣುಗಳಲ್ಲಿ ಆನಂದದಿಂದ ಹನಿಗಳು ಉದುರುತ್ತಿದ್ದುವು. ಆಮೆಯು ಹೇಳಿತು:—ಬಾ, ಬಾ, ಮಿತ್ರ. ನನ್ನನ್ನು ಆಲಿಂಗಿ



ಸಿಕೋ. ನಿನ್ನನ್ನು ನೋಡಿ ಬಹಳ ಕಾಲವಾಯಿತು. ಅದರಿಂದ ಥಟ್ಟನೆ ಗುರುತು ಸಿಕ್ಕಲಿಲ್ಲ. ಅದಕ್ಕಾಗಿ ನಾನು ನೀರಿನೊಳಕ್ಕೆ ಘುಸುಕಿದೆನು. ಕೇಳಿಲ್ಲವೆ?

ಆವನ ವೀರ್ಯವು ಕುಲ ಚೇಷ್ಟೆಗಳು ||
ತಿಳಿಯವೊ ಅವನೊಡನೆಂದೂ ಗೆಳೆತನ ||
ಕೂಡದು ಕೂಡದು ಎಂದನು ಸುರಗುರುವು || ೧೫ ||

ಹೀಗೆನ್ನಲು, ಕಾಗೆಯು ಮರದಿಂದ ಇಳಿದು ಬಂದು ಆಮೆಯನ್ನು ಆಲಿಂಗಿಸಿಕೊಂಡಿತು. ಮಿತ್ರನ ಆಲಿಂಗನಕ್ಕಿಂತ ಇನ್ನು ಸುಖವುಂಟೆ? ಹೀಗೆ ಒಬ್ಬರನ್ನೊಬ್ಬರು ತಬ್ಬಿಕೊಂಡು ತಮ್ಮ ತಮ್ಮ ಕಷ್ಟ ಸುಖಗಳನ್ನು ಹೇಳಿಕೊಳ್ಳುತ್ತ ಕೊಂಚ ಕಾಲ ಹಾಗೆಯೇ ಮಾತನಾಡುತ್ತಿದ್ದರು. ಕಾಗೆಯು ಇಲಿಯನ್ನು ಕರೆಯಿತು. ಹಿರಣ್ಯಕನು ಮಂಥರಕನಿಗೆ ನಮಸ್ಕಾರ ಮಾಡಿ ಚೆನ್ನಾಗಿದ್ದೀಯಾ ಎಂದು ಕೇಳಿ ಲಘುಪತನಕನ ಮಗ್ಗುಲಲ್ಲಿ ಕುಳಿತುಕೊಂಡಿತು. ಆಮೆಗೆ ಇಲಿಯನ್ನು ಕಂಡು ಆಶ್ಚರ್ಯವಾಯಿತು. ಲಘುಪತನಕನನ್ನು "ಅಯ್ಯಾ, ಇದೇನಾಶ್ಚರ್ಯ! ನೀನು ಇಲಿಗಳನ್ನು ತಿನ್ನುವವನು. ನಿನಗೂ ಈತನಿಗೂ ಸ್ನೇಹವು ಹೇಗೆ ಆಯಿತು? ಹೇಳು" ಎನ್ನಲು ಕಾಗೆಯು ಹೇಳಿತು:—ಈತನು ಹಿರಣ್ಯಕನು. ನನಗೆ ಎರಡನೇ ಜೀವದಂತಿರುವನು. ಅಷ್ಟೇನು? ಮಳೆ ಹುಯ್ಯುವಾಗ ಬೀಳುವ

ಹನಿಗಳೆಷ್ಟೋ, ಆಕಾಶದಲ್ಲಿರುವ ನಕ್ಷತ್ರಗಳೆಷ್ಟೋ, ಮರಳಿನಲ್ಲಿ ಎಷ್ಟು ಕಾಳುಗಳು ಇರುವುವೋ ಅವಕ್ಕಿಂತಲೂ ಈತನಲ್ಲಿ ಗುಣಗಳು ಹೆಚ್ಚಾಗಿರುವುವು. ಆತನು ಪಾಪ, ದುಃಖಕ್ಕೆ ಸಿಕ್ಕಿರುವನು. ನಿನ್ನ ಸ್ನೇಹವನ್ನು ಬಯಸಿ ಬಂದಿರುವನು.'' ಮಂಥರಕನು ಅದನ್ನು ಕೇಳಿ ''ಈತನ ದುಃಖವೇನು? ಎಂದು ಕೇಳಿತು. ಕಾಗೆಯು, ''ನಾನೂ ಕೇಳಿದೆನು. ಹೇಳಬೇಕಾದುದು ಬಹಳ ಇದೆ. ಅಲ್ಲಿಗೆ ಹೋದ ಮೇಲೆ ಹೇಳುವೆನು. ಎಂದನು. ನಾನೂ ಕೇಳಿಲ್ಲ. ಅದರಿಂದ' ಎಲೈ ಹಿರಣ್ಯಕನೆ, ಈಗಲಾದರೂ ನಮ್ಮಿಬ್ಬರಿಗೂ ನಿನ್ನ ದುಃಖ ಬೇಸರಗಳ ಕಾರಣವನ್ನು ಹೇಳು'' ಎಂದನು. ಇಲಿಯು ಹೇಳಿತು:



## ಹಿರಣ್ಯಕನ ಕಥೆ.

ದಕ್ಷಿಣ ದೇಶದಲ್ಲಿ ಒಂದು ನಗರವಿರುವುದು. ಅದರ ಹೆಸರು ಮಹಿಲಾರೋಪ್ಯ ಎಂದು. ಅಲ್ಲಿಗೆ ಸಮೀಪವಾಗಿ ಮಹಾದೇವನ ಮಂದಿರವೊಂದಿರುವುದು. ಅಲ್ಲಿ ತಾಮ್ರಚೂಡನೆಂಬ ಒಬ್ಬ ಸನ್ಯಾಸಿಯು ಇದ್ದನು. ಆತನು ನಿತ್ಯವೂ ನಗರದಲ್ಲಿ ಭಿಕ್ಷೆಯನ್ನು ತಂದು ಜೀವನ ಮಾಡಿಕೊಳ್ಳುವನು. ಆತನು ತಾನು ಊಟ ಮಾಡಿ ಉಳಿದುದನ್ನು ಭಿಕ್ಷೆಯ ಪಾತ್ರೆಯಲ್ಲಿಯೇ ಇಟ್ಟು, ಆ ಭಿಕ್ಷಾ ಪಾತ್ರೆಯನ್ನು ನಾಗದಂತಕ್ಕೆ ನೇತುಹಾಕಿ ಮಲಗಿಕೊಳ್ಳುವನು. ಬೆಳಗೆದ್ದು



ಆ ತಂಗಳನ್ನು ಆಳುಗಳಿಗೆ ಕೊಟ್ಟು ದೇವಸ್ಥಾನದಲ್ಲಿ ಗುಡಿಸುವುದು, ಸಾರಿಸುವುದು, ರಂಗವಲ್ಲಿ ಹಾಕುವುದು ಮೊದಲಾದ ಕೆಲಸಗಳನ್ನು ಮಾಡಿಸುವನು. ಒಂದು ದಿನ ನನ್ನ ಪರಿವಾರದವರೆಲ್ಲ ಬಂದು "ದೇವ, ಈ ಮಠದಲ್ಲಿ ನಾಗವಾಸದಲ್ಲಿ ಅನ್ನದ ಪಾತ್ರೆಯಿರುವುದು. ಅದನ್ನು ನಾವು ಎಟಕಿಸಿಕೊಳ್ಳಲಾರೆವು. ನೀನಾದರೆ ಅದನ್ನು ತರಬಲ್ಲೆ. ಅದರಿಂದ, ಏಕೆ ಸುಮ್ಮನೆ ಅಲೆಯುವುದು? ನೀನು ಮನಸ್ಸು ಮಾಡಿದರೆ ಇವೊತ್ತು ನಮಗೆ ಬೇಕಾದ ಹಾಗೆ ಊಟವಾಗುವುದು" ಎಂದು ಹೇಳಿಕೊಂಡುವು.

ಅದನ್ನು ಕೇಳಿ ಆ ಕೂಡಲೇ ಅವರೊಡನೆ ನಾನು ಅಲ್ಲಿಗೆ ಹೋದೆನು. ಹಾರಿ ಆ ಭಿಕ್ಷಾ ಪಾತ್ರೆಯ ಮೇಲೆ ಕುಳಿತೆನು. ಅಲ್ಲಿದ್ದ ತಿಂಡಿಗಳನ್ನೆಲ್ಲಾ ಆ ಪರಿವಾರದವರಿಗೆ ಕೊಟ್ಟು ಉಳಿದುದನ್ನು ನಾನು ಭಕ್ಷಿಸಿದೆನು. ಎಲ್ಲರೂ ತೃಪ್ತರಾಗಿ ಹಿಂತಿರುಗಿ ಬಂದೆವು. ಹೀಗೆಯೇ ದಿನವೂ ನಾವು ಅಲ್ಲಿಗೆ ಹೋಗುವುದು: ಆ ಸನ್ಯಾಸಿಯು ಆದಷ್ಟು ಮಟ್ಟಿಗೆ ಅದನ್ನು ರಕ್ಷಿಸುವುದು. ಆತನು ನಿದ್ದೆ ಹೋಗುತ್ತಲೂ ನಾನು ಅಲ್ಲಿಗೆ ಹೋಗಿ ನನ್ನ ಕಾರ್ಯವನ್ನು ಮಾಡಿಕೊಳ್ಳುವುದು. ಹೀಗೆ ಅಷ್ಟುಕಾಲ ನಡೆಯಿತು.

ಸನ್ಯಾಸಿಯೂ ಬೇಕಾದಷ್ಟು ಮಾಡಿದನು. ಒಂದು ಒಡೆದ ಬೊಂಬನ್ನು ತಂದು ಅದರಿಂದ ಆ ಭಿಕ್ಷಾ ಪಾತ್ರೆಯನ್ನು ಹೊಡೆಯುವನು. ಆ ಸನ್ಯಾಸಿಗೆ ನನ್ನ ದಿಗಿಲೇ ದಿಗಿಲಾಗಿ ಹೋಯಿತು. ನಿದ್ದೆಯಲ್ಲಿಯೂ ಆ ಪಾತ್ರೆಯನ್ನು ಹೀಗೆನ್ನುತ್ತಿರುವ ಮಟ್ಟಿಗೆ ಆಯಿತು. ನಾನೂ ಕೂಡ, ಆ ಬೊಂಬಿನಿಂದ ಏಟು ಬಿದ್ದೀತು ಎಂದು ಹೆದರಿ ಆಗಾಗ ಹಿಂದೆ ಹೋಗುವೆನು. ಹೀಗೆಯೇ ಆತನು ನಿದ್ದೆ ಹೋದಾಗ ಮುಂದೆ ಹೋಗುವುದು. ಆತನು ಬೊಂಬು ಆಡಿಸಿದಾಗ ಹಿಂದೆ ಹೋಗುವುದು. ಹೀಗೆಯೇ ಅಷ್ಟುಕಾಲ ಕಳೆಯಿತು.

ಹೀಗೆ ಇರಲು ಒಂದು ದಿನ ಆತನ ಸ್ನೇಹಿತನೊಬ್ಬನು ಅಲ್ಲಿಗೆ ಬಂದನು. ತಾಮ್ರಚೂಡನು ಆತನನ್ನು ಬೇಕಾದಹಾಗೆ ಸತ್ಕರಿಸಿ ಅಲ್ಲಿಯೇ ನಿಲ್ಲಿಸಿಕೊಂಡನು. ರಾತ್ರಿ ಇಬ್ಬರೂ ಒಂದೇ ಎಡೆಯಲ್ಲಿ ದರ್ಭೆಯ ಹುಲ್ಲನ್ನು ಹಾಸಿಕೊಂಡು ಮಲಗಿದರು. ಇಬ್ಬರೂ ಮಲಗಿಕೊಂಡು ಧರ್ಮಕಥೆಗಳನ್ನು ಹೇಳಿಕೊಳ್ಳುತ್ತಿದ್ದರು. ತಾಮ್ರಚೂಡನಿಗೆ ಆತನ ಕಥೆಗಳನ್ನು ಕೇಳುವುದಕ್ಕಿಂತಲೂ ನನ್ನನ್ನು ಬೆದರಿಸುವುದರಲ್ಲೇ ಹೆಚ್ಚು ಮನಸ್ಸು. ಆತನು ಏನೇನೋ ಹೇಳುತ್ತಿದ್ದರೂ ಈತನು ಒಡೆದ ಬೊಂಬನ್ನು ಆಡಿಸುತ್ತಲೇ ಇದ್ದು ಆತನಿಗೆ ಅಡ್ಡ ಮನಸ್ಸಿನಲ್ಲಿ ಉತ್ತರ ಕೊಡುತ್ತಿದ್ದನು. ಅದನ್ನು ಕಂಡು ಆ ಹೊಸಬನಿಗೆ ಕೋಪ ಬಂತು. ಆತನು ''ನೀನೆಂತಹ ಸ್ನೇಹಿತನಯ್ಯ? ನನ್ನೊಡನೆ ಸಂತೋಷವಾಗಿ ಮಾತನಾಡುವುದಕ್ಕೂ ನಿನಗೆ ಇಷ್ಟವಿಲ್ಲ. ಇದು ರಾತ್ರಿಯಾದರೂ ಸರಿ. ಈಗಲೇ ನಾನು ಇಲ್ಲಿಂದ ಎದ್ದು ಹೊರಟುಹೋಗುತ್ತೇನೆ. ಮನೆಗೆ ಬಂದವರೊಡನೆ ಮುಖ ಕೊಟ್ಟು ಮಾತಾಡಬೇಡವೆ? ಬರುತ್ತಲೂ ಎದುರಿಗೆ ಬಂದು, ಮೃದು ಮಧುರವಾಗಿ ಮಾತನಾಡಿ, ಒಳ್ಳೆಯದು ಕೆಟ್ಟದು ಹೇಳಿಕೊಳ್ಳದವನ ಮನೆಗೇ ಹೋಗಬಾರದು. ನೀನು ಗರ್ವಿಷ್ಠನು. ಅದರಿಂದ ನಿನ್ನ ಸ್ನೇಹವನ್ನು ಬಿಟ್ಟೆನು. ಮಠವು ಸಿಕ್ಕಿತೆಂದು ನಿನಗೆ ಗರ್ವ ಬಂದಿರುವುದು. ಅದರಿಂದ, ಮೂರ್ಖ, ನಾನು ಇಕೋ, ಹೊರಟೆನು'' ಎಂದು ಗದರಿಸಿಕೊಂಡನು.

ಅದನ್ನು ಕೇಳಿ ತಾಮ್ರಚೂಡನು ಹೆದರಿಕೊಂಡು ಹೇಳಿಕೊಂಡನು: ಭಗವನ್, ಹಾಗೆಂದುಕೊಳ್ಳಬೇಡ. ನಿನ್ನಂಥಾ ಸ್ನೇಹಿತನು ನನಗೆ ಇನ್ನೊಬ್ಬನಿಲ್ಲ. ಆದರೂ ನಾನು ಹೀಗೆ ಅಡ್ಡ ಮನಸ್ಸು ಆಗಿರುವುದಕ್ಕೆ ಕಾರಣವಿದೆ. ಕೇಳು. ಇಲ್ಲೊಂದು ಕೆಟ್ಟ ಇಲಿಯು ಸೇರಿಕೊಂಡಿದೆ. ಅದು ಅಷ್ಟು ಎತ್ತರದಲ್ಲಿ ಕಟ್ಟಿರುವ ಭಿಕ್ಷಾಪಾತ್ರೆಗೆ ನೆಗೆದು ಅದರಲ್ಲಿರುವ ಅನ್ನವನ್ನು ತಿಂದುಹಾಕುತ್ತದೆ. ಅದು ಹೀಗೆ

ಮಾಡುವುದರಿಂದ ಮಠದಲ್ಲಿ ಗುಡಿಸುವುದು ಸಾರಿಸುವುದು ಕೂಡಾ ನಿಂತುಹೋಗಿದೆ. ಅದನ್ನು ಹೆದರಿಸುವುದಕ್ಕಾಗಿ ಈ ಬೊಂಬು ಆಡಿಸುತ್ತ ಇರಬೇಕಾಗಿದೆ. ನೀನೇ ನೋಡು, ಈ ಕೆಟ್ಟ ಇಲಿಯು ಬೆಕ್ಕು ಕೋತಿಗಳಿಗಿಂತ ಚೆನ್ನಾಗಿ ಹಾರಿ ಭಿಕ್ಷಾಪಾತ್ರೆಗೆ ಹೋಗುತ್ತದೆ.'' ಎಂದನು.

ಆ ಹೊಸಬನು ಅದನ್ನು ಕೇಳಿ ''ಅದರ ಬಿಲವೆಲ್ಲಿದೆ ಗೊತ್ತೆ?'' ಎಂದು ಕೇಳಿದನು. ತಾಮ್ರಚೂಡನು ಗೊತ್ತಿಲ್ಲವೆನ್ನಲು, ''ಸರಿ. ಇರಲಿ ಬಿಡು. ಆದರ ಬಿಲವಲ್ಲಿ ನಿಧಿಯಿದೆ. ಅದರ ಬಲದಿಂದಲೇ ಇದು ಇಷ್ಟು ಎತ್ತರ ಹಾರಬಲ್ಲುದು. ಇದು ಶಾಂಡಿಲೀ ಮಾತೆಯು ಬಿಳಿಯ ಎಳ್ಳುಕೊಟ್ಟು ಕರಿಯ ಎಳ್ಳು ತಂದಹಾಗೆ. ಸಂಶಯವಿಲ್ಲ.'' ಎಂದನು.

ತಾಮ್ರಚೂಡನು ಅದು ಹೇಗೆ ಎನ್ನಲು ಹೊಸಬನು ಹೇಳಿದನು:—



## ಶಾಂಡಿಲೀ ಮಾತೆಯ ಕಥೆ

ಒಂದಾನೊಂದು ಮಳೆಗಾಲದಲ್ಲಿ ಚಾತುರ್ಮಾಸ್ಯ*ಕ್ಕಾಗಿ ಒಬ್ಬ ಬ್ರಾಹ್ಮಣನ ಮನೆಯಲ್ಲಿ ನಿಂತೆನು. ಒಂದು ದಿನ ಬೆಳಗೆದ್ದು ಗಂಡ ಹೆಂಡತಿಯರು ಮಾತನಾಡಿಕೊಳ್ಳುತ್ತಿದ್ದರು. ನಾನೂ ಎಚ್ಚ

*ಚಾತುರ್ಮಾಸ್ಯ = ಸನ್ಯಾಸಿಗಳು ಮಳೆಗಾಲದ ನಾಲ್ಕು ತಿಂಗಳುಗಳು ಸಂಚಾರ ಮಾಡುವುದಿಲ್ಲ. ಆಗ ಒಂದು ವ್ರತವನ್ನು ಹಿಡಿದು ಒಂದೇಕಡೆ ಇರುವರು.

ರವಾಗಿದ್ದು ಕೇಳಿದೆನು. ಬ್ರಾಹ್ಮಣನು ಹೇಳಿದನು:-"ಈ ದಿನ ದಕ್ಷಿಣಾಯನ ಸಂಕ್ರಮಣವು. ಈ ಕಾಲದಲ್ಲಿ ದಾನಕೊಟ್ಟರೆ ಅನಂತವಾಗುವುದು. ನಾನು ಎಲ್ಲಿಯೋ ಹಳ್ಳಿಯಮೇಲೆ ಹೋಗಬೇಕಾಗಿರುವುದು. ನೀನು ಒಬ್ಬ ಬ್ರಾಹ್ಮಣನನ್ನು ಕರೆದು ಭಗವಂತನಾದ ಸೂರ್ಯನ ಹೆಸರನ್ನು ಹೇಳಿ ಊಟಕ್ಕಿಡು." ಅದಕ್ಕೆ ಹೆಂಡತಿಯು ನಿಷ್ಠುರವಾಗಿ" ನಿಮ್ಮ ಮನೆಯಲ್ಲಿ ಊಟಕ್ಕಿಟ್ಟ ಹಾಗೇ ಇದೆ! ಹೇಳುವುದಕ್ಕೆ ನಾಚಿಕೆಯಾಗುವುದಿಲ್ಲವೆ? ನಿಮ್ಮ ಕೈ ಹಿಡಿದ ಮೊದಲು ಇದುವರೆಗೂ ಸುಖವೆಂದರೆ ಹೇಗಿದೆಯೋ ಕಂಡುದಿಲ್ಲ. ಊಟವಿಲ್ಲ! ಒಡವೆಯಿಲ್ಲ! ವಸ್ತುವಿಲ್ಲ." ಎಂದು ಜರೆದಾಡಿದಳು.

ಆ ಮಾತು ಕೇಳಿ ಬ್ರಾಹ್ಮಣನು ಹೆದರಿದನು. ಆದರೂ ಮೆಲ್ಲ ಮೆಲ್ಲಗೆ, "ಲೇ, ಹಾಗೆಲ್ಲಾ ಎನ್ನಬಾರದು. ಒಂದು ತುತ್ತೇ ಆಗಲಿ ಬಂದವರಿಗೆ ಪ್ರೀತಿಯಿಂದ ಕೊಡಬೇಕು. ಹಾಗೆ ಕೊಡದಿದ್ದರೆ ಮುಂದಕ್ಕೆ ನಮಗೆ ಏನಾದರೂ ಬರಬೇಕೋ ಬೇಡವೋ? ಜೊತೆಗೆ ಐಶ್ವರ್ಯವಂತರು ತುಂಬಿ ತುಂಬಿಕೊಟ್ಟು ಏನೇನು ಫಲ ಪಡೆಯುವರೋ ಅದೆಲ್ಲವನ್ನೂ ಬಡವರು ಒಂದೇ ಹಿಡಿ ಕೊಟ್ಟು ಪಡೆಯುವರು. ಕೇಳಿಲ್ಲವೆ?

ಕೊಡುವ ಧೀರನಾಗಲಿ ಬಡವನಾಗಲಿ ಲೋಕ ಸೇವಿಪುದು ||
ಕೊಡದ ಧನಿಕನ ಹಣವ ಗಣಿಸದೆ ಕಡೆಯ ಕಾಣುವುದು || ೧೬ ||
ಸಿಹಿಯ ನೀರನು ಕೊಡುವ ಬಾವಿಯ ಎಲ್ಲ ಸೇವಿಪರು ||
ನೀರು ತುಂಬಿದ ಉಪ್ಪು ಕಡಲಿನ ಬಳಿಯ ಸಾರುವರೇ || ೧೭ ||

ಅಲ್ಲದೆ ನೋಡು, ಬೇಕಾದಷ್ಟು ಐಶ್ವರ್ಯವಿದ್ದರೂ ಕುಬೇರನನ್ನು ಯಾರು ಪೂಜಿಸುವರು? ಐಶ್ವರ್ಯವೇ ಇಲ್ಲದೆ ಬೂದಿ ಬಡುಕನಾಗಿದ್ದರೂ ಈಶ್ವರನು ತ್ಯಾಗಿಯೆಂದು ಎಲ್ಲರಿಂದಲೂ ಪೂಜೆಗೊಳ್ಳುವನು. ಅದರಿಂದ ಬಡವರಾದರೇನು? ತಮಗೆ ಇದ್ದಷ್ಟರಲ್ಲಿಯೇ ಅಲ್ಪ ಸ್ವಲ್ಪವನ್ನಾದರೂ ದಾನ ಮಾಡಲೇಬೇಕು. ಅಲ್ಲದೆ,

ಜೀವನದಲ್ಲಿ ದುರಾಸೆ ಪಡಬಾರದು. ದುರಾಸೆ ಪಟ್ಟರೆ ತಲೆಯ ಮೇಲೆ ಗೂಟ ಬೀಳುವುದು." ಎಂದನು. ಬ್ರಾಹ್ಮಣಿಯು ಅದು ಹೇಗೆ ಎಂದು ಕೇಳಲು, ಬ್ರಾಹ್ಮಣನು ಹೇಳಿದನು:—



## ಅತಿ ಆಶೆ ಪಟ್ಟ ನರಿಯ ಕಥೆ

ಒಂದಾನೊಂದು ಕಾಡಿನಲ್ಲಿ ಒಬ್ಬ ಬೇಡನಿದ್ದನು. ಅವನು ದಿನವೂ ಕಾಡಿಗೆ ಹೋಗಿ ಪ್ರಾಣಿಗಳನ್ನು ಕೊಂದು ತರುವನು. ಒಂದು ದಿನ ಅವನು ಕಾಡಿನಲ್ಲಿ ಓಡಾಡುತ್ತಿರುವ ಒಂದು ಕಾಡು ಹಂದಿಯನ್ನು ಬಾಣದಿಂದ ಹೊಡೆದನು. ಅದೂ ರೇಗಿ ಅವನ ಮೇಲೆ ನುಗ್ಗಿ ಅವನನ್ನು ಕೆಡವಿ ತನ್ನ ಕೋರೆ ದಾಡೆಗಳಿಂದ ಅವನ ಹೊಟ್ಟೆಯನ್ನು ಸೀಳಿಬಿಟ್ಟಿತು. ತಾನೂ ಅಷ್ಟು ದೂರ ಹೋಗಿ ಬಾಣದ ಏಟಿನಿಂದ ಸತ್ತು ಕೆಳಕ್ಕೆ ಉರುಳಿತು.

ಆ ಹೊತ್ತಿಗೆ ಒಂದು ನರಿಯು ಅಲ್ಲಿ ಇಲ್ಲಿ ತಿರುಗುತ್ತಾ ಅಲ್ಲಿಗೆ ಬಂತು. ಅಲ್ಲಿ ಹಂದಿಯೂ ಬೇಡರವನೂ ಬಿದ್ದಿರುವುದನ್ನು ನೋಡಿ ಅದಕ್ಕೆ ಬಹಳ ಆನಂದವಾಯಿತು: "ನನ್ನ ಅದೃಷ್ಟವೇ ಅದೃಷ್ಟ. ನನಗೆ ಇಷ್ಟು ಭಾರಿಯ ಊಟವು ಸಿಕ್ಕುವುದೆಂದಿರಲಿಲ್ಲ. ಈ ಮಾಂಸವು ನನಗೆ ಬೇಕಾದಷ್ಟು ದಿನಕ್ಕಾಗುವುದು. ಮೊದಲು ಈ ಬಿಲ್ಲಿನಲ್ಲಿರುವ ನೆಣದ ಹಗ್ಗವನ್ನು ತಿನ್ನುವೆನು. ಪ್ರಾಜ್ಞರು ಎಲ್ಲವನ್ನೂ ಒಟ್ಟಿಗೆ ತಿನ್ನಬಾರದು. ತಾನೇ ಸಂಪಾದಿಸಿದ ಹಣವನ್ನಾದರೂ ಸ್ವಲ್ಪ ಸ್ವಲ್ಪವಾಗಿ ಅನುಭವಿಸಬೇಕು." ಎಂದು ಹಿಗ್ಗುತ್ತಾ ಬಿಲ್ಲಿನ ಹಗ್ಗವನ್ನು ತಿನ್ನಲು ಆರಂಭಿಸಿತು. ಇದು ಹಗ್ಗವನ್ನು ಕಡಿಯುತ್ತಲೂ ಆ ಹಗ್ಗವು ಒಂದು ಕಡೆಗೆ ಸಿಡಿಯಿತು. ಬಿಲ್ಲಿನ ಕೊನೆಯು ಇನ್ನೊಂದು ಕೊನೆಗೆ ಸಿಡಿಯಿತು. ಹಗ್ಗದ ಕೊನೆಯು ಕಟವಾಯಿ

ಸೀಳಿತು. ಎಲ್ಲಿನ ಕೊನೆಯು ಅಂಗುಳಿಗೆ ಹೊಡೆದು ಒಡೆದು ಕೊಂಡು ಈಚೆಗೆ ಬಂತು. ನರಿಯು ಕೂಡಲೇ ಸತ್ತಿತು.

ಅದರಿಂದ ಹೇಳಿದೆನು: ಅತ್ಯಾಶೆಪಡಬಾರದು ಎಂದು ಅಲ್ಲದೆ ಕೇಳು:

ಆಯು ಕರ್ಮವು ವಿತ್ತವು ವಿದ್ಯೆ ಮರಣವು ಐದನು ||
ಗರ್ಭವಾಗುವ ಕಾಲದೆ ಗೊತ್ತು ಮಾಡುವ ಬೊಮ್ಮನು ||೧೫||

ಇಷ್ಟೆಲ್ಲಾ ಹೇಳಿದ ಮೇಲೆ ಆ ಬ್ರಾಹ್ಮಣಿಯು "ಹಾಗಾದರೆ ನಮ್ಮ ಮನೆಯಲ್ಲಿ ಅಷ್ಟು ಎಳ್ಳು ಇದೆ. ಅದನ್ನು ತೊಳೆದು ಚಿಗುಳಿ ಮಾಡಿ ಬ್ರಾಹ್ಮಣನಿಗೆ ಇಡುವೆನು." ಎಂದು ಒಪ್ಪಿಕೊಂಡಳು. ಗಂಡನೂ ಗ್ರಾಮಾಂತರಕ್ಕೆ ಹೋದನು.

ಅವಳು ಮನೆಯಲ್ಲಿದ್ದ ಎಳ್ಳನ್ನು ಕುಟ್ಟಿ ಸೂರ್ಯೋದಯದ ವೇಳೆಗೆ ಒಣಹಾಕಿದಳು. ಅವಳು ಮನೆಯಲ್ಲಿ ಏನೋ ಕೆಲಸ ಮಾಡುತ್ತಿರುವಾಗ ಒಂದು ನಾಯಿಯು ಬಂದು ಆ ಎಳ್ಳಿನ ಮೇಲೆ ಮೂತ್ರಿಸಿತು. ಅದನ್ನು ಕಂಡು ಆಕೆಯು "ಅಯ್ಯೋ, ಹಾಳು ದೈವವೇ! ಈ ಎಳ್ಳೂ ತಿನ್ನುವುದಕ್ಕಿಲ್ಲವಾಯಿತಲ್ಲಾ!" ಎಂದು ನೊಂದುಕೊಂಡು, ಆ ತೊಳೆದ ಎಳ್ಳನ್ನು ತೆಗೆದುಕೊಂಡು ಹೋಗಿ, ಯಾರ ಮನೆಗೋ ಕೊಟ್ಟು ಅವರ ಮನೆಯಿಂದ ತೊಳೆಯದ ಕರಿ ಎಳ್ಳನ್ನು ತಂದಳು.

ಆ ಮನೆಯಲ್ಲಿ ಇದ್ದ ಹುಡುಗನು ನೀತಿ ಶಾಸ್ತ್ರವನ್ನು ಚೆನ್ನಾಗಿ ಬಲ್ಲವನು. ಅವನು ತಾಯಿಯನ್ನು ಕುರಿತು "ಅಮ್ಮಾ, ನೀನು ಈ ಎಳ್ಳನ್ನು ತೆಗೆದುಕೊಳ್ಳಬಾರದಾಗಿತ್ತು. ತೊಳೆದ ಎಳ್ಳು ಕೊಟ್ಟು ಕರಿಯೆಳ್ಳು ತೆಗೆದುಕೊಳ್ಳುವರೂ ಉಂಟೆ? ಇದರಲ್ಲಿ ಏನೋ ಮರ್ಮವಿದೆ. ಏನಾದರೂ ಆಗಲಿ, ಮೊದಲು ನೀನು ಇದನ್ನು ಚೆಲ್ಲಿ ಬಿಡು." ಎಂದು ಆ ಎಳ್ಳನ್ನು ಹೊರಕ್ಕೆ ಚೆಲ್ಲಿಸಿದನು.

ಹಾಗೆ ಈ ಇಲಿಯು ಇಷ್ಟು ಹಾರಬೇಕಾದರೆ ಏನೋ ಕಾರಣ ಇದೆ. ಇರಲಿ. ಅದು ಹೋಗಿ ಬರುವ ಹಾದಿಯಾದರೂ ಗೊತ್ತೆ?'' ಎಂದು ಕೇಳಿದನು.

ತಾಮ್ರಚೂಡನು ಹೇಳಿದನು:—ಭಗವನ್, ಅದು ಒಂದೇ ಬರುವುದಿಲ್ಲ. ಒಂದು ಗುಂಪಿಗೆ ಗುಂಪೇ ಬಂದು, ನಾನು ಎದುರು ಕುಳಿತಿದ್ದರೂ ಲಕ್ಷ್ಯವೇ ಇಲ್ಲದೆ, ನಿರ್ಭಯವಾಗಿ ತಿರುಗುತ್ತದೆ.''

ಹೊಸಬನು "ನಾಳೆ ಒಂದು ಗುದ್ದಲಿಯನ್ನು ತೆಗೆದು ಕೊಂಡು ನಾವು ಇಲಿಗಳು ಹೋಗಿ ಬರುವ ಮಾರ್ಗದಲ್ಲಿಯೇ ಹೋಗಿ ಬಿಲವನ್ನು ಅಗೆಯೋಣ'' ಎಂದನು. ಅದನ್ನು ಕೇಳಿ ನಾನು ಯೋಚಿಸಿದೆನು:—"ಇನ್ನು ನಾನು ಕೆಟ್ಟೆ. ಈತನು ಇಲ್ಲಿರುವ ನಿಧಿಯನ್ನು ತೆಗೆದು ಕೊಳ್ಳುವನು. ಇವನು ತಿಳಿದವನು. ಚಿನ್ನ ವನ್ನು ಕೈಯಲ್ಲಿ ತೆಗೆದು ಕೊಳ್ಳುತ್ತಿದ್ದ ಹಾಗೆಯೇ ತೂಕವನ್ನು ತಿಳಿ ದುಕೊಳ್ಳುವ ವರ್ತಕನಂತೆ, ಜಾಣರು ಒಬ್ಬನನ್ನು ನೋಡುತ್ತಿದ್ದ ಹಾಗೆಯೇ ಅವನ ಸಾರವನ್ನು ತಿಳಿದುಕೊಳ್ಳುವರು. ಇರಲಿ. ಈಗಲೂ ತಪ್ಪುದಾರಿ ಹಿಡಿಸೋಣ'' ಎಂದು, ಭಯದಿಂದ ದುರ್ಗ ಮಾರ್ಗವನ್ನು ಬಿಟ್ಟು ಬೇರೆ ಮಾರ್ಗವನ್ನು ಹಿಡಿದೆನು. ದಾರಿ ಯಲ್ಲಿ ಒಂದು ದೊಡ್ಡ ಬೆಕ್ಕು ಎಲ್ಲಿಂದಲೋ ಬಂದು ನಮ್ಮ ಮೇಲೆ ಬಿತ್ತು. ಪರಿವಾರದವರು ಬದುಕಿದರೆ ಸಾಕೆಂದು, ಅಡ್ಡಮಾರ್ಗ ಹಿಡಿದನೆಂದು ನನ್ನನ್ನು ಬಯ್ಯುತ್ತಾ, ರಕ್ತವನ್ನು ಸೋರಿಸಿ ಕೊಳ್ಳು ತ್ತಾ ದುರ್ಗವನ್ನು ಸೇರಿದರು. ನಾನು ಮಾತ್ರ "ಆಹಾ ವಿಧಿಯು ಏನು ಮಾಡಿತು ನೋಡಿದೆಯಾ? '' ಎಂದುಕೊಳ್ಳುತ್ತಾ ಬೇರೆ ಹೋದೆನು.

ಅಷ್ಟರಲ್ಲಿ ಆ ಹೊಸಬನು ಇಲಿಗಳ ರಕ್ತವು ಸೋರಿರುವ ಗುರು ತಿನಿಂದಲೇ ಬಿಲವೆಲ್ಲಿರುವುದು ಎಂಬುದನ್ನು ಅರಿತು ಅಲ್ಲಿಗೆ ಬಂದು

ತಾನೇ ಅಗಿಯುವುದಕ್ಕೆ ಆರಂಭಿಸಿದನು. ಅಲ್ಲಿ ನನ್ನ ಜೀವದಂತಿದ್ದ ನಿಧಿಯು, ಯಾವುದರ ಬಲದಿಂದ ನಾನು ಎಂತಹ ಅಸಾಧ್ಯವಾದ ಕಾರ್ಯವನ್ನಾದರೂ ಸಾಧಿಸುತ್ತಿದ್ದೆನೋ ಆ ನಿಧಿಯು, ಅವನ ಕೈಗೆ ಸಿಕ್ಕಿಹೋಯಿತು. ಆಗ ಆ ಹೊಸಬನು ಆ ತಾಮ್ರಚೂಡನನ್ನು ಕರೆದು "ನೋಡು, ಇನ್ನು ಸುಖವಾಗಿ ನಿದ್ದೆಮಾಡು. ಇದರ ಬಲದಿಂದ ಆ ಇಲಿಯು ನಿನಗೆ ನಿದ್ದೆಯನ್ನು ತಪ್ಪಿಸುತ್ತಿತ್ತು." ಎಂದು ಆ ನಿಧಿಯನ್ನು ತೆಗೆದುಕೊಂಡು ಮಠಕ್ಕೆ ಹೋದನು.

ಇತ್ತ ನಾನು ಬಿಲಕ್ಕೆ ಹೋದರೆ, ಆ ಬಿಲವು ಹಾಳು ಸುರಿಯುತ್ತಿತ್ತು. ನನಗಂತೂ ಪ್ರಾಣವೇ ಇರಲಿಲ್ಲ. ಹಾಗೂ ಹೀಗೂ ಹಗಲನ್ನು ಅತಿ ಕಷ್ಟದಿಂದ ಕಳೆದು, ರಾತ್ರಿಯಾಗುತ್ತಲೂ ಎಂದಿನಂತೆ ಸಪರಿವಾರನಾಗಿ ಆ ಮಠವನ್ನು ಪ್ರವೇಶಿಸಿದೆನು. ತಾಮ್ರಚೂಡನು ನಾವು ಬಂದುದನ್ನು ತಿಳಿದು ಒಡೆದ ಬೊಂಬನ್ನು ತೆಗೆದುಕೊಂಡು ಭಿಕ್ಷಾಪಾತ್ರೆಯನ್ನು ಬಡಿದನು. ಹೊಸಬನು "ಏನಯ್ಯಾ? ಇವೊತ್ತೂ ನಿದ್ದೆ ಬರಲಿಲ್ಲವೆ?" ಎನ್ನಲು, ತಾಮ್ರಚೂಡನು "ಇವೊತ್ತೂ ಇಲಿಗಳು ಬಂದಿವೆ." ಎಂದನು. ಹೊಸಬನು "ಬಂದರೇನು? ಅದರ ಉತ್ಸಾಹವೆಲ್ಲ ಮುಗಿಯಿತು. ಎಲ್ಲರಿಗೂ ಹಾಗೆಯೇ! ಮನುಷ್ಯನು ಯಾವಾಗಲೂ ಉತ್ಸಾಹಿಯಾಗಿರುವುದು, ಜನರನ್ನು ತಿರಸ್ಕರಿಸುವುದು, ಗರ್ವದಿಂದ ಬಾಯಿಗೆ ಬಂದ ಹಾಗೆ ಮಾತನಾಡುವುದು, ಇವೆಲ್ಲವೂ ಹಣದ ಬಲವು ಎಂದು ತಿಳಿ. ಹಣವನ್ನು ಕಳೆದುಕೊಂಡ ಈ ಇಲಿಯು ಇದ್ದರೂ ಸತ್ತಂತೆ ಎಂದು ತಿಳಿ" ಎಂದನು.

ಅದನ್ನು ಕೇಳಿ ನಾನು ಕೋಪಗೊಂಡು ಭಿಕ್ಷಾಪಾತ್ರೆಯ ಕಡೆಗೆ ಗುರಿಯಿಟ್ಟು ಹಾರಿದೆನು. ಆದರೂ ಅಷ್ಟು ಎತ್ತರ ಹಾರಲಾರದೆ ಕೆಳಗೆ ಬಿದ್ದು ಹೋದೆನು. ಅದನ್ನು ನೋಡಿ ನನ್ನ ಶತ್ರು

ಪಾಪ ಆ ಹೊಸಬನು "ನೋಡಿದಿಯೋ?" ಎಂದು ಹಾಸ್ಯ ಮಾಡುತ್ತಾ ಹೇಳಿದನು:—"ಅಯ್ಯಾ, ಲೋಕದಲ್ಲಿ ಎಲ್ಲರೂ ಬಲವಾಗಿರುವುದು ಅರ್ಥದಿಂದ. ಅರ್ಥವಿಲ್ಲದವನೇ ಪಂಡಿತನು. ಹಣವು ಹೋಗಲು ಈ ಇಲಿಯು ಇತರ ಇಲಿಗಳಂತೆಯೇ ಆಯಿತು. ಆದರಿಂದ ಇನ್ನು ಮಲಗಿಕೋ. ಚೆನ್ನಾಗಿ ನಿದ್ದೆ ಹೋಗು. ಕೇಳಿಲ್ಲವೆ?

ಹಲ್ಲು ನೀಗಿದ ಹಾವು । ಮದವು ಮುಗಿದಿಹ ಆನೆ ॥
ಅರ್ಥವಿಲ್ಲದ ಮನುಜ । ನಾಮ ಮಾತ್ರದೆ ಇರುವರು ॥ ೧೯ ॥

ಅದನ್ನು ಕೇಳಿ ನಾನು ಮನಸ್ಸಿನಲ್ಲಿಯೇ ಯೋಚಿಸಿದೆನು:—"ಅಹಹಾ, ನನಗೆ ಇದ್ದ ಹಾರುವ ಶಕ್ತಿಯೆಲ್ಲ ಎಲ್ಲಿ ಹೋಯಿತು? ಛೀ, ಅರ್ಥವಿಲ್ಲದವನ ಬಾಳು ವ್ಯರ್ಥ. ಅರ್ಥಹೀನನ ಕೆಲಸಗಳೆಲ್ಲಾ ಬೇಸಗೆಯ ಹಳ್ಳಗಳಂತೆ ವ್ಯರ್ಥವಾಗುವುವು. ದರಿದ್ರನಲ್ಲಿ ಏನು ಗುಣಗಳಿದ್ದರೇನು? ಅವು ಪ್ರಕಾಶಕ್ಕೆ ಬರುವುದಿಲ್ಲ. ದರಿದ್ರನಿಗಿಂತಲೂ ಒಣಗಿದ ಮರವು ಲೇಸು. ದರಿದ್ರನ ಆಶೆಗಳೊಂದೂ ಫಲಿಸುವುದಿಲ್ಲ. ಸೂರ್ಯನ ಉದಯವಾಗಿದ್ದರೂ ಮೋಡ ಮುಚ್ಚಿಕೊಂಡಿರುವಾಗ ಅವನ ದರ್ಶನವಾಗುವುದೇ? ಹಾಗೆ, ದರಿದ್ರನ ಬಾಳೂ ಇದ್ದರೂ ಇಲ್ಲದಂತೆ." ಎಂದು ನಾನಾ ವಿಧವಾಗಿ ಅತ್ತುಕೊಳ್ಳುತ್ತ, ಉತ್ಸಾಹವೇನೂ ಇಲ್ಲದವನಾಗಿ ಮತ್ತೆ ಬಿಲಕ್ಕೆ ಹೋದೆನು.

ನನ್ನ ಪರಿವಾರದವರೂ ನನ್ನೆದುರಾಗಿಯೇ "ಈ ಅರಸನನ್ನು ಕುರಿತು ಏನು ಹೇಳೋಣ. ಈತನನ್ನು ನಂಬಿದರೆ ನಮಗೆ ಹೊಟ್ಟೆಯು ತುಂಬುವುದಿಲ್ಲ. ಬೆಕ್ಕು ಮೊದಲಾದ ವಿಪತ್ತುಗಳು ತಪ್ಪುವುದಿಲ್ಲ. ಆದರಿಂದ ಈತನಲ್ಲಿದ್ದು ಏನುಫಲ?" ಎಂದು ಮಾತನಾಡಿಕೊಳ್ಳುತ್ತಿದ್ದರು. ಯಾರೂ ನನ್ನ ಹತ್ತಿರ ಬರಲೇ ಇಲ್ಲ. ಆಗ ನಾನೂ ಯೋಚಿಸಿಕೊಂಡೆನು:—ಈ ದರಿದ್ರತೆಗೆ ತಿರಸ್ಕಾರಬರಲಿ, ಕೇಳಿಲ್ಲವೆ?

ದರಿದ್ರನು ಮೃತನಿಗೆ ಸಮನು. ಶ್ರೋತ್ರಿಯನಿಲ್ಲದ ಶ್ರಾದ್ಧವು ಮೃತವು. ದಕ್ಷಿಣೆಯಿಲ್ಲದ ಯಜ್ಞವು ಮೃತವು."

ನನ್ನ ಆಳುಗಳೆಲ್ಲರೂ ನನ್ನ ಶತ್ರುಗಳಲ್ಲಿ ಸೇರಿಕೊಂಡರು. ಒಬ್ಬನೇ ಇರುವುದನ್ನು ಕಂಡು ಅವರೆಲ್ಲರೂ ಹಾಸ್ಯ ಮಾಡಿದರು. ನಾನು ಒಂದು ದಿನ ಯೋಗನಿದ್ರೆಯಲ್ಲಿ* ಇದ್ದುಕೊಂಡು ಯೋಚಿಸಿದೆನು: "ಯಾವನಾದರೂ ಒಬ್ಬನು ಯೋಗಿಯನ್ನು ಹಿಡಿದು ಒಂದು ಮಂತ್ರದ ಶಕ್ತಿಯನ್ನು ಸಂಪಾದಿಸಬೇಕು. ಈಗ ಆ ತಾಮ್ರಚೂಡನು ತನ್ನ ದಿಂಬಿನಲ್ಲಿ ತುಂಬಿಟ್ಟುಕೊಂಡಿರುವ ಹಣವನ್ನು ಏನಾದರೂ ಮಾಡಿ, ಆ ದಿಂಬನ್ನು ಕತ್ತರಿಸಿ, ಮತ್ತೆ ತರಬೇಕು. ಇಲ್ಲದಿದ್ದರೆ ನನಗೆ ಮತ್ತೆ ಮೊದಲಿನ ವಿಭವವೂ ಒಡೆತನವೂ ಬರುವುದಿಲ್ಲ. ನನಗೆ ಈ ಹಣವು ಹೋಗುವುದಕ್ಕಿಂತ ಪ್ರಾಣಗಳೇ ಹೋಗಿದ್ದರೆ ಚೆನ್ನಾಗಿತ್ತು. ಕೇಳಿಲ್ಲವೆ? ಹಣವನ್ನು ಕಳೆದುಕೊಂಡು ಬದುಕಿರುವವನು ಕೊಟ್ಟ ತರ್ಪಣದ ನೀರನ್ನು ಪಿತೃಗಳೂ ಕುಡಿಯುವುದಿಲ್ಲ. ಆದರಿಂದ ಪ್ರಾಣವನ್ನು ಕೊಟ್ಟಾದರೂ ಆ ಹಣವನ್ನು ಹಿಂದಕ್ಕೆ ತರಲೇಬೇಕು" ಎಂದು ನಿಶ್ಚಯಿಸಿಕೊಂಡೆನು.

ಆ ರಾತ್ರಿ ಆ ತಾಮ್ರಚೂಡನು ಮಲಗಿರುವಾಗ, ಅವನಿಗೆ ಚೆನ್ನಾಗಿ ನಿದ್ದೆ ಬಂದಿರುವುದು ಎಂದು ನಂಬಿಕೆಯಾದ ಮೇಲೆ, ನಾನು ಹೋಗಿ, ಅವನ ತಲೆಯ ಕೆಳಗಿದ್ದ ದಿಂಬನ್ನು ಕೊರೆದೆನು. ಅಷ್ಟರಲ್ಲಿ ಅವನಿಗೆ ಎಚ್ಚರವಾಗಿ ಆ ಬೊಂಬಿನಿಂದ ಹೊಡೆದನು. ಅದು ನನ್ನ ತಲೆಯ ಮೇಲೆಯೇ ಬಿತ್ತು. ಆದರೂ ಆಯುಶ್ಶೇಷವಿದ್ದು ಬದುಕಿದೆನು. ಸಾಯಲಿಲ್ಲ. ಕೇಳಿಲ್ಲವೆ?

---

*ಯೋಗನಿದ್ರೆ = ಕಣ್ಣು ಮುಚ್ಚಿಕೊಂಡು ನಿದ್ದೆಯಲ್ಲಿ ಇರುವಂತೆ ಇರುವುದು.

ಪ್ರಾಪ್ತಿಯಿರುವುದು ಬಂದೆ ಬರುವುದು ||
ದೈವವಾದರು ಕೆಡಿಸಲಾರದು ||
ಪಡೆನು ವಿಸ್ಮಯ ದುಃಖವದರಿಂ ||
ತನತು ಯಾವುದೊ ಅನ್ಯಗಲ್ಲವದು || ೨೦ ||

ಹಾಗೆನ್ನಲು, ಕಾಗೆಯೂ ಆಮೆಯೂ ಅದು ಏನು ಎಂದು ಕೇಳಿದುವು. ಹಿರಣ್ಯಕನು ಹೇಳಿತು:—

## ಪ್ರಾಪ್ತಿಯಿರುವುದು ಕಥೆ

ಒಂದಾನೊಂದು ನಗರದಲ್ಲಿ ಸಾಗರದತ್ತನೆಂಬ ವೈಶ್ಯನಿದ್ದನು. ಅವನ ಮಗನು ಒಂದುದಿನ ನೂರು ರೂಪಾಯಿ ಕೊಟ್ಟು ಒಂದು ಪುಸ್ತಕವನ್ನು ತೆಗೆದುಕೊಂಡನು. ಅದರಲ್ಲಿ ಒಂದೇ ಒಂದು ಶ್ಲೋಕ ಬರೆದಿತ್ತು:—ಆ ಶ್ಲೋಕವಿದು:—

ಪ್ರಾಪ್ತಿಯಿರುವುದು ಬಂದೆ ಬರುವುದು ||
ದೈವವಾದರು ಕೆಡಿಸಲಾರದು ||
ಪಡೆನು ವಿಸ್ಮಯ ದುಃಖವದರಿಂ ||
ತನತು ಯಾವುದೊ ಅನ್ಯಗಲ್ಲವದು || ೨೦ ||

ಅದನ್ನು ಕಂಡು ಸಾಗರದತ್ತನು ಮಗನನ್ನು. "ಏನೈಯ್ಯ, ಇದಕ್ಕೆ ಎಷ್ಟು ಕೊಟ್ಟೆ?" ಎಂದು ಕೇಳಲು, ಮಗನು "ಒಂದು ನೂರು" ಎಂದು ಉತ್ತರ ಕೊಟ್ಟನು. ಅದನ್ನು ಕೇಳಿ ಅವನು ರೇಗಿ, "ಛೀ ಮೂರ್ಖ, ಒಂದೇ ಒಂದು ಶ್ಲೋಕ ಬರೆದಿರುವ ಪುಸ್ತಕಕ್ಕೆ ಒಂದು ನೂರು ರೂಪಾಯಿ ಕೊಟ್ಟೆ ನಿನ್ನ ಬುದ್ಧಿಯೋ, ಸೀನೋ? ನೀನಿನ್ನು ದ್ರವ್ಯವನ್ನು ಸಂಪಾದಿಸುವುದು ಉಂಟೇ? ನೀನು ನನ್ನ ಮನೆಗೆ ಬಂದುಗಿಂದೀಯೆ!" ಎಂದು ಚೆನ್ನಾಗಿ ಬಯ್ದು ಮನೆಬಿಟ್ಟು ಹೊರಡಿಸಿಬಿಟ್ಟನು.

ಮಗನು ತಂದೆಯು ಹೀಗೆ ಮಾಡಿದನೆಂದು ವ್ಯಸನ ಪಟ್ಟು ಕೊಂಡು ದೇಶಾಂತರಕ್ಕೆ ಹೋಗಿ, ಯಾವುದೋ ನಗರದಲ್ಲಿ ನಿಂತನು ಒಂದು ದಿನ ಆ ನಗರದವನು "ನೀನು ಯಾರು? ಎಲ್ಲಿಂದ ಬಂದೆ?" ಎಂದು ಕೇಳಿದನು. ಇವನು "ಪ್ರಾಪ್ತಿಯಿರುವುದು ಬಂದೇ ಬರು ವುದು" ಎಂದನು. ಇನ್ನೊಬ್ಬನು ಕೇಳಿದರೆ ಅವನಿಗೂ ಹಾಗೆಯೇ ಹೇಳಿದನು. ಹೀಗೆಯೇ ಕೇಳಿ ಕೇಳಿದವರಿಗೆಲ್ಲ ಅವನು ಅದೇ ಮಾ ತನ್ನು ಹೇಳುತ್ತಿದ್ದುದರಿಂದ ಅವನಿಗೆ ಆ ಊರಿನಲ್ಲೆಲ್ಲಾ "ಪ್ರಾಪ್ತಿ ಯಿರುವುದು" ಎಂದೇ ಅಡ್ಡ ಹೆಸರು ಬಿದ್ದು ಹೋಯಿತು.

ಆ ನಗರದಲ್ಲಿ ಒಂದು ದಿನ ಒಂದು ದೊಡ್ಡ ಉತ್ಸವವಾ ಯಿತು. ಆ ದಿನ ಆ ಉತ್ಸವವನ್ನು ನೋಡಬೇಕೆಂದು ರಾಜನ ಮಗ ಳಾದ ಚಂದ್ರಾವತಿಯು ತನ್ನ ಸಖಿಯೊಡನೆ ಬಂದು ಮಹಡಿಯ ಮೇಲೆ ನಿಂತಿದ್ದಳು. ಅವಳು ಒಳ್ಳೆಯ ಯೌವನವತಿಯು. ಅವಳ ಕಣ್ಣಿಗೆ ಒಬ್ಬ ರಾಜಪುತ್ರನು ಬಿದ್ದನು. ರೂಪವಂತನಾದ ಅವನನ್ನು ಕಾಣು ತ್ತಿದ್ದ ಹಾಗೆಯೇ ಅವನ ಮೇಲೆ ಅವಳಿಗೆ ಆಸೆಯಾಯಿತು. ತನ್ನ ಸಖಿಯೊಡನೆ ಅವನಿಗೆ ಹೇಳಿ ಕಳುಹಿಸಿದಳು. ಅವಳು ಬಂದು "ಅಯ್ಯಾ, ನಿನಗೆ ರಾಜಪುತ್ರಿಯು ಒಲಿದಿದ್ದಾಳೆ. ನೀನು ಬಂದರೆ ಅವಳು ನಿನ್ನನ್ನು ಮದುವೆ ಮಾಡಿಕೊಳ್ಳುವಳು. ಇಲ್ಲದಿದ್ದರೆ ಸತ್ತು ಹೋಗುವಳು." ಎಂದಳು. ಅವನು "ನಾನು ಬರುವೆನು. ಆದರೆ ಅಂತಃಪುರಕ್ಕೆ ಬರುವುದು ಹೇಗೆ?" ಎಂದು ಕೇಳಲು, ಅವಳು, "ಈ ರಾತ್ರಿ ಮೇಲಿನಿಂದ ಒಂದು ಹಗ್ಗವು ಇಳಿಯ ಬಿಟ್ಟಿರುವುದು. ಅದನ್ನು ಹತ್ತಿ ಬಾ" ಎಂದು ಹೇಳಿ ಹೋದಳು. ರಾಜಪುತ್ರನು ಸಂಜೆಯಾದ ಮೇಲೆ "ಇದು ಸರಿಯಾದ ಕೆಲಸವಲ್ಲ. ಅವಳ ತಂದೆ ಯಾದ ಈ ರಾಜನು ನನಗೆ ಗುರುವು. ಗುರುವಿನ ಮಗಳನ್ನೂ, ಮಿತ್ರ ಭಾರ್ಯೆಯನ್ನೂ ಸ್ವಾಮಿಪತ್ನಿಯನ್ನೂ, ಸೇವಕನ ಹೆಂಡತಿಯನ್ನೂ ಸೇರುವುದು ಬಹಳ ಪಾಪವು. ಅದರಿಂದ ಅಪಯಶಸ್ಸು ಬರುವುದು.

ಒಳ್ಳೆಯ ಗತಿ ತಪ್ಪುವುದು. ಅದರಿಂದ ಅಂತಹ ಪಾಪವನ್ನು ಮಾಡ ಬಾರದು" ಎಂದು ಯೋಚಿಸಿಕೊಂಡು ಅತ್ತಕಡೆ ಹೋಗಲೇ ಇಲ್ಲ.

"ಪ್ರಾಪ್ತಿಯಿರುವುದು" ಸುತ್ತಾಡುತ್ತಾ ಅತ್ತಕಡೆ ಬಂದನು. ಅಲ್ಲಿ ದಪ್ಪ ಹಗ್ಗವು ನೇತಾಡುತ್ತಿರುವುದನ್ನು ನೋಡಿ, ಇದೇನೋ ನೋಡೋಣವೆಂದು ಅದನ್ನು ಹಿಡಿದು ಹತ್ತಿಹೋದನು. ರಾಜಪುತ್ರಿಯು ತಾನು ನೋಡಿದ ರಾಜಪುತ್ರನೇ ಬಂದನೆಂದು ಅವನನ್ನು ಮದುವೆ ಮಾಡಿಕೊಂಡು ಬೇಕಾದ ಉಪಚಾರಗಳನ್ನೆಲ್ಲಾ ಮಾಡಿದಳು. ಇವನು ತುಟಿಪಿಟಿಕ್ಕೆನ್ನದೆ ಅದೆಲ್ಲವನ್ನೂ ಅನುಭವಿಸಿದನು. ಕೊನೆಗೆ ಅವಳು "ನಾನು ಇಷ್ಟು ಉಪಚಾರ ಮಾಡಿದರೂ ನೀನು ಮಾತೇ ಆಡಲಿಲ್ಲವಲ್ಲ! ನಿನ್ನ ಹೆಸರೇನು? ಅದನ್ನಾದರೂ ಹೇಳು," ಎಂದಳು. ಇವನು ಎಂದಿನಂತೆ "ಪ್ರಾಪ್ತಿಯಿರುವುದು" ಎಂದು ಮೊದಲು ಮಾಡಿ ಶ್ಲೋಕವನ್ನು ಹೇಳಿದನು. ಅವಳು ನನ್ನ ಹಣೆ ಬರಹವೆಂದು ಅವನನ್ನು ಅಲ್ಲಿಂದ ಇಳಿಸಿ ಕಳುಹಿಸಿದಳು. ಅವನು ಅಲ್ಲಿಂದ ಹೋಗಿ ಒಂದು ಮುರುಕು ದೇವಾಲಯದಲ್ಲಿ ಮಲಗಿದನು.

ಅಷ್ಟು ಹೊತ್ತಾದ ಮೇಲೆ ಅಲ್ಲಿಗೆ ಕೊತ್ತವಾಲನು ಬಂದನು. ಅಲ್ಲಿ ಅವನು ಯಾರನ್ನೋ ನೋಡುವುದು ಇತ್ತು. ಇವನು ಬಂದು ಮಲಗಿರುವುದನ್ನು ನೋಡಿ ಇವನು ತನ್ನ ರಹಸ್ಯವನ್ನು ಭೇದಿಸುವ ನೆಂದು ಇವನನ್ನು ಎಬ್ಬಿಸಿ, "ನೀನು ಯಾರು?" ಎಂದನು. ಇವನು "ಪ್ರಾಪ್ತಿಯಿರುವುದು" ಎಂದು ಹೇಳಲು, ಆವನು, "ಹೋಗು, ನಮ್ಮ ಮನೆಯಲ್ಲಿ ಮಲಗಿಕೊ" ಎಂದು ಕಳುಹಿಸಿದನು. ಇವನು ಹಾಗೆ ಆಗಲೆಂದು ಅಲ್ಲಿಗೆ ಹೋಗಿ, ಅವನು ಹೇಳಿದ್ದ ಕಡೆ ಬಿಟ್ಟು ಇನ್ನೊಂದು ಕಡೆ ಮಲಗಿದನು. ಅಲ್ಲಿಗೆ ಅವನ ಮಗಳು ವಿನಯವತಿಯು ಒಬ್ಬನನ್ನು ಬರಹೇಳಿದ್ದಳು. ಅವನೇ ಇವನೆಂದು ಇವನೊಡನೆ ಅವಳು ಸರಸವಾಗಿದ್ದುಬಿಟ್ಟಳು. ಅನಂತರ, "ನಾನು ಮದುವೆಯಾದರೂ ಮಾತನಾಡೆಯಲ್ಲ." ಎನ್ನಲು, ಇವನು ಅವ

ಳಿಗೂ ಪ್ರಾಪ್ತಿಯಿರುವುದು ಎಂಬ ಶ್ಲೋಕವನ್ನು ಹೇಳಿದನು. ಅವಳೂ ಮೋಸವಾಯಿತೆಂದು ಇವನನ್ನು ಅಲ್ಲಿಂದ ಕಳುಹಿಸಿದಳು.

ಇವನು ಮಾರ್ಗದಲ್ಲಿ ಹೋಗುತ್ತಿರುವಾಗ ಪರವೂರಿನಿಂದ ಬಂದ ವರಕೀರ್ತಿ ಎಂಬ ವರನು ಓಲಗ ಮಾಡಿಸಿಕೊಂಡು ಆಡಂಬರದಿಂದ ಹೋಗುತಿದ್ದನು. "ಪ್ರಾಪ್ತಿಯಿರುವುದು" ಕೂಡ ಅವನ ಹಿಂದೆಯೇ ಹೋದನು. ಆ ಮೆರೆವಣಿಗೆಯು ರಾಜ ಮಾರ್ಗದಲ್ಲಿ ಹೋಗಿ ಒಬ್ಬ ಶೆಟ್ಟಿಯ ಮನೆಯನ್ನು ಸೇರಿತು. ಬಾಗಿಲಲ್ಲಿ ದೊಡ್ಡ ಮಂಟಪವನ್ನು ಹಾಕಿದ್ದರು. ಹಸೆಯನ್ನು ಮಾಡಿದ್ದರು. ಹೆಣ್ಣನ್ನು ಸಿಂಗರಿಸಿ ತಂದು ಹಸೆಯ ಬಳಿ ನಿಲ್ಲಿಸಿದ್ದರು. ಇನ್ನೇನು ಮದುವೆ ಮೊದಲಾಗಬೇಕು ಎನ್ನುವುದರೊಳಗಾಗಿ ಒಂದು ಆನೆಗೆ ಮದವೇರಿ ಅದು ತನ್ನ ಮಾವಟಿಗನನ್ನು ಕೊಂದು ಅಬ್ಬರಿಸುತ್ತಾ ಆ ಮಂಟಪಕ್ಕೆ ನುಗ್ಗಿತು. ಅದನ್ನು ಕಂಡು ಎಲ್ಲರೂ ಹೆದರಿದರು. ವರನ ಕಡೆಯವರೂ ವರನೂ ಕೆಟ್ಟೆವೆಂದು ಎಲ್ಲಿಯೋ ಓಡಿಬಿಟ್ಟರು. ಕನ್ಯೆಯು ಒಬ್ಬಳೇ ಒಬ್ಬಳಾಗಿ ಭಯದಿಂದ ಕೂಗಿಕೊಳ್ಳುತ್ತಾ ಓಡಿ ಹೋಗುವುದಕ್ಕೆ ಕಾಲು ಬಾರದೆ ನಿಂತುಬಿಟ್ಟಳು. ಅವಳನ್ನು ಕಂಡು "ಪ್ರಾಪ್ತಿಯಿರುವುದು" ಥಟ್ಟನೆ ಮುಂದೆ ಬಂದು "ಹೆದರಬೇಡ, ನಾನು ಇದ್ದೇನೆ" ಎಂದು ಧೈರ್ಯ ಹೇಳಿ, ಅವಳನ್ನು ಕೈ ಹಿಡಿದು ತನ್ನ ಬೆನ್ನಕಡೆ ಹಾಕಿಕೊಂಡು, ಆನೆಯೆದುರಾಗಿ ನಿಂತು ಮಹಾ ಸಾಹಸದಿಂದ ಅದನ್ನು ಚೆನ್ನಾಗಿ ಗದರಿಸಿದನು. ಆ ಆನೆಯು ದೈವ ಯೋಗದಿಂದ ಹಿಂತಿರುಗಿ ಹೊರಟು ಹೋಯಿತು.

ಎಷ್ಟೋ ಹೊತ್ತಾದ ಮೇಲೆ, ನೆಂಟರಿಷ್ಟರೆಲ್ಲರೂ ಬಂದರು. ವರನು ಬಂದು ಕನ್ಯೆಯು ಇನ್ನೊಬ್ಬನ ಬಳಿಯಿರುವುದನ್ನು ಕಂಡು "ಮಾವ, ಇದೇನು, ನನಗೆ ಕೊಡುತ್ತೇನೆಂದ ಹೆಣ್ಣನ್ನು ಇನ್ನೊಬ್ಬನಿಗೆ ಕೊಟ್ಟೆಯಾ?" ಎಂದು ಕೇಳಿದನು. ಶೆಟ್ಟಿಯೂ ಮಗಳನ್ನು

"ಇದೇನು?" ಎಂದು ಕೇಳಿದನು. ಅದಕ್ಕೆ ಅವಳು "ಆನೆಯು ಕೊಲ್ಲುವುದಕ್ಕೆ ಬಂದಾಗ ನೀವೆಲ್ಲ ಎಲ್ಲಿಯೋ ಹೊರಟು ಹೋದಿರಿ, ಈತನು ನನ್ನನ್ನು ಕಾಪಾಡಿದನು. ಅದರಿಂದ ಇವನೇ ನನ್ನ ಗಂಡನು" ಎಂದಳು.

ಇದಿಷ್ಟೆಲ್ಲಾ ಆಗುವುದರೊಳಗಾಗಿ ಬೆಳಗಾಯಿತು. ಅಲ್ಲಿ ಒಂದು ದೊಡ್ಡ ಗುಂಪು ಸೇರಿತ್ತು. ಶೆಟ್ಟಿಯ ಮಗಳು ಭಿಕಾರಿಯ ಕೈ ಹಿಡಿವ ವಿಚಿತ್ರವನ್ನು ನೋಡಬೇಕೆಂದು ಎಲ್ಲರೂ ಅಲ್ಲಿ ಬಂದು ಸೇರಿದರು. ರಾಜಪುತ್ರಿಯೂ ಬಂದಳು. ಕೊತ್ತವಾಲನ ಮಗಳೂ ಬಂದಳು. ರಾಜನೂ ಬಂದನು. ರಾಜನು ಎಲ್ಲವನ್ನೂ ಕೇಳಿ "ಹೆದರದೆ ಹೇಳು. ಈ ವೃತ್ತಾಂತವೇನು? ನಿನ್ನ ಹೆಸರೇನು?" ಎನ್ನಲು, ಅವನು ಎಂದಿನಂತೆ "ಪ್ರಾಪ್ತಿಯಿರುವುದು ಬಂದೇ ಬರುವುದು" ಎಂದನು. ರಾಜಪುತ್ರಿಯು "ದೈವವಾದರು ಕೆಡಿಸಲಾರದು" ಎಂದು ಎರಡನೆಯ ಪಾದವನ್ನು ಹೇಳಿದಳು. ಕೊತ್ತವಾಲನ ಮಗಳು, "ಪಡೆನು ವಿಸ್ಮಯ ದುಃಖವವರಿಂ" ಎಂದು ಮೂರನೆಯ ಪಾದವನ್ನು ಹೇಳಿದಳು. ಶೆಟ್ಟಿಯ ಮಗಳು "ತನತು ಯಾವುದೊ ಅನ್ಯಗಲ್ಲವದು" ಎಂದು ನಾಲ್ಕನೆಯ ಪಾದವನ್ನು ಹೇಳಿದಳು.

ರಾಜನು ಅದೆಲ್ಲವನ್ನೂ ಕೇಳಿ ವಿಸ್ಮಯಪಟ್ಟು, ಎಲ್ಲರಿಗೂ ಅಭಯ ಪ್ರದಾನಮಾಡಿ, ಅವರವರಿಂದ ಆಯಾ ಕಥೆಗಳನ್ನು ಕೇಳಿ, "ಪ್ರಾಪ್ತಿಯಿರುವುದು" ಗೆ ತನ್ನ ಮಗಳನ್ನು ಕೊಟ್ಟು ಮದುವೆ ಮಾಡಿ ಒಂದು ಸಾಪಿರ ಗ್ರಾಮಗಳನ್ನು ಬಳುವಳಿಯಾಗಿ ಕೊಟ್ಟನು. ಕೊತ್ತವಾಲನೂ ಮಗಳನ್ನೂ ಬಳುವಳಿಯನ್ನೂ ಕೊಟ್ಟನು. ಶೆಟ್ಟಿಯೂ ಹಾಗೆಯೇ ಮಾಡಿದನು. ಅವನೂ ಹೋಗಿ ತಾಯಿ ತಂದೆಯರನ್ನು ಕರೆದುಕೊಂಡು ಬಂದು ಎಲ್ಲರೊಡನೆ ಸುಖವಾಗಿ

ದ್ದನು. ಆದರಿಂದ ನಾನು ಹಾಗೆ ಹೇಳಿದೆನು. ನಾನೂ ಸುಖ ದುಃಖಗಳನೆಲ್ಲ ಅನುಭವಿಸಿ ಕೊನೆಗೆ ಅಪಾರವಾದ ವಿಷಾದವನ್ನು ಪಡೆದು ಈಗ ಈ ಮಿತ್ರನಿಂದ ನಿನ್ನ ಬಳಿಗೆ ಬಂದಿರುವೆನು.'' ಎಂದು ಹಿರಣ್ಯಕನು ತನ್ನ ವೃತ್ತಾಂತವನ್ನು ಹೇಳಿದನು.

ಆಮೆಯು, "ನಿಜ. ಈತನು ನಿನ್ನ ಸ್ನೇಹಿತನೆಂಬುದರಲ್ಲಿ ಕೊಂಚವೂ ಸಂದೇಹವಿಲ್ಲ. ತನಗೆ ಹೊಟ್ಟೆ ಹಸಿಯುತ್ತಿದ್ದರೂ, ನೀನು ಅವನಿಗೆ ಸ್ವಹಜವಾದ ಶತ್ರುವಾದರೂ ನಿನ್ನನ್ನು ತಿನ್ನದೆ, ಬೆನ್ನಿನ ಮೇಲೆ ಕೂರಿಸಿಕೊಂಡು, ಮಾರ್ಗದಲ್ಲಿಯೂ ನಿನಗೆ ಕೇಡೆಸಗದೆ ಇಲ್ಲಿನ ವರೆಗೂ ಕರೆದು ತಂದಿರುವನು. ಆಪತ್ಕಾಲದಲ್ಲಿ ಮಿತ್ರನಾದವನೇ ಮಿತ್ರನು. ಸಂಪತ್ತಿನಲ್ಲಿ ದುರ್ಜನರೂ ಮಿತ್ರರಾಗುವರು. ಇವೊತ್ತು ಈತನ ವಿಚಾರದಲ್ಲಿ ನನಗೂ ಅಪಾರವಾದ ಮೈತ್ರಿಯು ಹುಟ್ಟಿರುವುದು. ಸಾಮಾನ್ಯವಾಗಿ ನೋಡಿದರೆ ಮಾಂಸವನ್ನು ತಿನ್ನುವ ಕಾಗೆಗಳಿಗೂ ನೀರಿನಲ್ಲಿರುವ ನಮಗೂ ಸ್ನೇಹವೆಲ್ಲಿಯದು? ಆದರೂ ನಾವು ನಾವು ಇಂದು ನಿಜವಾಗಿಯೂ ಸ್ನೇಹಿತರಾಗಿರುವೆವು. ಅದರಿಂದ ನಿಮ್ಮಿಬ್ಬರಿಗೂ ಸ್ವಾಗತವು. ಈ ಸರೋವರದ ತೀರದಲ್ಲಿ ನೀವಿಬ್ಬರೂ ನಿಮ್ಮ ನಿಮ್ಮ ಮನೆಯಲ್ಲಿರುವಂತೆ ಸುಖವಾಗಿರಿ. ಇದ್ದ ಹಣವು ಹೋಯಿತು: ಪರದೇಶಕ್ಕೆ ಬರಬೇಕಾಯಿತು. ಎಂಬ ದುಃಖವು ನಿನಗೆ ಮರೆಯಲಿ. ಯೌವನವೂ ಧನವೂ ಕೊಂಚಕಾಲ ಮಾತ್ರ ಇರುವವು. ಅದರಿಂದ ಜಿತೇಂದ್ರಿಯರಾದ ವಿವೇಕಿಗಳು ಧನಕ್ಕೆ ಅಷ್ಟು ಆಶೆ ಪಡುವುದಿಲ್ಲ. ಅಲ್ಲದೆ, ನೀರಿನಲ್ಲಿ ಮತ್ಸ್ಯಗಳು, ನೆಲದಲ್ಲಿ ಕ್ರೂರ ಮೃಗಗಳು, ಆಕಾಶದಲ್ಲಿ ಪಕ್ಷಿಗಳು ಮಾಂಸವನ್ನು ಹುಡುಕಿ ತಿನ್ನುವಂತೆ, ಹಣವಂತನನ್ನು ಎಲ್ಲರೂ ಕಿತ್ತು ತಿನ್ನುವರು. ಪರದೇಶವೆಂಬ ಇನ್ನೊಂದು ದುಃಖವೂ ನಿನ್ನ ಮನಸ್ಸಿಗೆ ಬೇಸರವನ್ನು ತರದಿರಲಿ. ಹಣವಿಲ್ಲದವನಾದರೂ ಪರದೇಶದಲ್ಲಿರುವವನಾದರೂ ಯಾವನು ಪ್ರಜ್ಞಾವಂತನೋ ಅವನು

ಕೆಡುವುದಿಲ್ಲ. ನಿನಗೆ ಅಂತಹ ಪ್ರಜ್ಞೆಯು ಬೇಕಾದಷ್ಟಿದೆ. ನೀನು ಸಾಮಾನ್ಯನಲ್ಲ.

ಉತ್ಸಾಹವಿದ್ದು ವೈರಿಗಳನಲ್ಲದಿರೆ ॥
ಕಾರ್ಯವಿಧಿ ತಿಳಿದು ವ್ಯಸನಗಳ ಬಿಟ್ಟಿರಲು ॥
ದೃಢಮೈತ್ರಿಯುಳ್ಳ ಕೃತಜ್ಞನ ಶೂರನನು ||
ಐಸಿರಿಯು ಹುಡುಕಿ ಕೊಂಡೈತಹುದು ನಿಜವು || ೨೧ ॥

ಅಲ್ಲದೆ, ಲಭಿಸಿದ್ದ ಧನವೂ ಕಾಲಬಂದಾಗ ನಾಶವಾಗಿ ಹೋಗುವುದಲ್ಲವೆ? ಆ ಹಣವನ್ನು ನೀನೇನೂ ಉಪಭೋಗಿಸುತ್ತಿರಲಿಲ್ಲ ಅಂಥ ಹಣ ಹೋಯಿತೆಂದೇಕೆ ದುಃಖ? ಯಾವುದು ತನ್ನದಲ್ಲವೋ ಅದನ್ನು ಯಾರುತಾನೇ ಉಪಭೋಗಿಸಬಲ್ಲರು? ತಾನಾಗಿ ಬಂದರೂ ಅದನ್ನು ವಿಧಿಯು ಅಪಹರಿಸಿಕೊಂಡು ಹೋಗುವುದು. ಕೇಳಿಲ್ಲವೆ?

ಹಣವನಾರ್ಜಿಸಿದರೇನೈ । ಭೋಗ ದೊರೆಯದು ನೋಡಲು ||
ಮೂಢ ಸೋಮಿಲನ ನೋಡೈ । ಕಾಡು ಹೊಕ್ಕರು ನಿಷ್ಫಲ ||೨೨||

ಹಿರಣ್ಯಕನು "ಅದು ಹೇಗೆ?" ಎಂದು ಕೇಳಿತು. ಆಮೆಯು ಹೇಳಿತು.



## ಸೋಮಿಲಕನ ಕಥೆ.

ಒಂದಾನೊಂದು ಊರಿನಲ್ಲಿ ಸೋಮಿಲಕನೆಂಬ ಒಬ್ಬ ನೇಗೆಯವನು ಇದ್ದನು. ಅವನು ಒಳ್ಳೊಳ್ಳೆಯ ಪಟ್ಟೆಯ ಉತ್ತಮ ವಸ್ತ್ರಗಳನ್ನು ಮಾಡುವನು. ಅವನು ಮಾಡಿದ ಬಟ್ಟೆಗಳು ಶ್ರೀಮಂತರಿಗೆ ಮಾತ್ರ ಆಗುವಂಥವು. ಅಂಥ ಸೊಗಸು ಬಟ್ಟೆಗಳನ್ನು ನೇದರೂ ಅವನಿಗೆ ಹೊಟ್ಟೆ ಬಟ್ಟೆಗೆ ಮಾತ್ರ ಸಾಕಾಗುವಷ್ಟು ಅಲ್ಲದೆ ಹೆಚ್ಚಾಗಿ ಸಿಕ್ಕುತ್ತಿರಲಿಲ್ಲ. ಮಿಕ್ಕ ನೇಗೆಯವರು ಒರಟೊರಟು ಬಟ್ಟೆಯನ್ನು

ನೇದರೂ ಅವರಿಗೆ ಬೇಕಾದ ಹಾಗೆ ಹಣವು ಸಿಕ್ಕುವುದು. ಇದನ್ನು ಕಂಡು ಸೋಮಿಲಕನು ಹೆಂಡಿತಿಗೆ ಹೇಳಿದನು:–"ಪ್ರಿಯೆ, ನೋಡು, ಒರಟು ಬಟ್ಟೆ ನೇದವರಿಗೆ ಬೇಕಾದ ಹಾಗೆ ಲಾಭಸಿಕ್ಕುತ್ತಿದೆ: ಸಪಿರಾಗಿ, ನಯುವಾಗಿ, ಉತ್ತಮವಾಗಿರುವ ಬಟ್ಟೆಯನ್ನು ನೇದ ನನಗೆ ಇಲ್ಲ. ಅದರಿಂದ ನಾನು ಬೇರೆ ಊರಿಗೆ ಹೋಗಿ ಹಣವನ್ನು ಸಂಪಾದಿಸಿಕೊಂಡು ಬರುವೆನು"

ಅವಳು ಹೇಳಿದನು:— "ಪ್ರಿಯ, ದೇಶಬಿಟ್ಟು ಹೋದರೆ ಧನವು ಸಿಕ್ಕುವುದು, ಸ್ವಸ್ಥಾನದಲ್ಲಿ ಇದ್ದರೆ ಇಲ್ಲ ಎಂಬುದು ಸುಳ್ಳು. ಹಕ್ಕಿಗಳು ಆಕಾಶಕ್ಕೆ ಹಾರಿ ಭೂಮಿಗೆ ಬಿದ್ದರೂ ಅವಕ್ಕೆ ಎಷ್ಟು ಪ್ರಾಪ್ತಿಯೋ ಅಷ್ಟಲ್ಲದೆ ಹೆಚ್ಚಿಗೆ ಏನೂ ಸಿಕ್ಕುವುದಿಲ್ಲ.

ಪ್ರಾಪ್ತಿಯಿದ್ದುದು ಬಂದೆ ಬರುವುದು ಯತ್ನ ಮಾಡದೆಯೆ॥
ಪ್ರಾಪ್ತಿಯಿರದಿರೆ ಬರದು ಬಂದರು ನಷ್ಟವಾಗುವುದು ॥ ೨೩॥

ಒಂದು ಸಾವಿರ ಆಕಳುಗಳು ಇದ್ದರೂ ಕರುವು ತಾಯಿಯನ್ನು ಗುರುತು ಹಿಡಿಯುವಂತೆ ಕರ್ಮ ಫಲವು ತನ್ನ ಕರ್ತೃವನ್ನು ಹಿಡಿದೇ ಹಿಡಿಯುವುದು. ಕರ್ಮಫಲವು ಅವನು ಮಲಗಿದ್ದರೆ ತಾನೂ ಮಲಗಿರುವುದು: ಆವನು ಹೋಗುತ್ತಿದ್ದರೆ ತಾನೂ ಹೋಗುವುದು. ಅವನು ನಿಂತಿದ್ದರೆ ತಾನೂ ನಿಂತಿರುವುದು. ಕರ್ತೃ ಕರ್ಮಗಳು ಯಾವಾಗಲೂ ಬೆಳಕುನೆರಳುಗಳಂತೆ ಜೋತೆ ಜೊತೆಯಲ್ಲಿಯೇ ಇರುವುವು. ಅದರಿಂದ ಇಲ್ಲಿಯೇ ಇದ್ದುಬಿಡು."

ಗಂಡನು ಮತ್ತೆ ಹೇಳಿದನು:—"ಹಾಗಲ್ಲ. ಪ್ರಿಯೆ, ಕೇಳು, ಕರ್ಮವು ಫಲಿಸಬೇಕಾದರೆ ವ್ಯವಸಾಯವು ಬೇಕೇ ಬೇಕು. ಒಂದೇ ಕೈಯಿಂದ ತಾಳ ಹಾಕಲಾಗುವುದೇ? ಊಟವು ಬಂದು ಎದುರಿಗೆ ಕುಳಿತುಕೊಂಡರೂ ಕೈಯಿಂದ ತೆಗೆದು ಬಾಯಲ್ಲಿ ಹಾಕಿಕೊಳ್ಳದಿದ್ದರೆ ಊಟವಾಗುವುದು ಹೇಗೆ?

ಉದ್ಯೋಗಮುಳ್ಳ ಪುರುಷ ಸಿಂಹನನು ಲಕ್ಷ್ಮಿ ಸೇರುವಳು ||
ದೈವವೇ ದೈವಯೆಂದು ಕಾಪುರುಷ ನುಡಿವ ನುಡಿಯು ||
ದೈವವಂ ಬಡಿದು ಆತ್ಮ ಶಕ್ತಿಯಿಂ ಮಾಡು ಪೌರುಷವ ||
ಮಾಡಿಯುಂ ಯತ್ನ ಫಲಿಸದಿರೆ ತಪ್ಪುನಿನ್ನದಲ್ಲ|| ೨೪ ||

ಅಲ್ಲದೆ, ದುಡಿಮೆಯ ದುಡಿದರೆ ಫಲಿಪುದು ಕಾರ್ಯ ||
ಮನಸಲಿ ಚಿಂತಿಸೆ ಫಲಿಸುವುದೇನು ?||
ಸಿಂಹವು ಗುಹೆಯುಲಿ ಮಲಗಿರೆ ತಾನು||
ಮೃಗಗಳು ಬಾಯಲಿ ನುಗ್ಗುವುವೇನು? || ೨೫ ||

ಆದರಿಂದ ನಾನು ದೇಶಾಂತರ ಹೋಗಿಯೇ ಹೋಗುವೆನು'' ಎಂದು ನಿಶ್ಚಯಿಸಿ ವರ್ಧಮಾನವೆಂಬ ಪಟ್ಟಣಕ್ಕೆ ಹೋದನು. ಅಲ್ಲಿ ಮೂರು ವರ್ಷ ಇದ್ದು ಮುನ್ನೂರು ಹೊನ್ನುಗಳನ್ನು ಸಂಪಾದಿಸಿ ಕೊಂಡು ಮನೆಗೆ ಹೊರಟನು.

ದಾರಿಯಲ್ಲಿ ಬರುತ್ತಿರುವಾಗ ಒಂದು ಕಾಡಿನ ನಡುವೆ ಕತ್ತಲಾಯಿತು. ಕಾಡು ಮೃಗಗಳ ಭಯವೆಂದು ಒಂದು ದೊಡ್ಡ ಮರವನ್ನೇರಿ ಕುಳಿತನು. ಅಲ್ಲಿ ಕುಳಿತಿರುವಾಗ ಹಾಗೆಯೇ ಒಂದು ಕನಸಾಯಿತು. ಆ ಕನಸಿನಲ್ಲಿ ಇಬ್ಬರು ಕಾಣಿಸಿದರು. ಇಬ್ಬರೂ ದೊಡ್ಡಾಳುಗಳು. ನೋಡಿದರೆ ದಿಗಿಲಾಗುವುದು. ಅವರಿಬ್ಬರೂ ಮಾತನಾಡಿಕೊಳ್ಳುತ್ತಿದ್ದಾರೆ. ಒಬ್ಬನು ಕೇಳಿದನು ''ಎಲೈ ಕರ್ತನೆ, ಈ ಸೋಮಿಲಕನಿಗೆ ಅನ್ನ ಬಟ್ಟೆಗಳಿಗಿಂತ ಹೆಚ್ಚಾಗಿ ಸಿಕ್ಕ ಕೂಡದು ಎಂದು ನಿನಗೆ ಗೊತ್ತಿಲ್ಲವೆ? ಆದರೂ ಇವನಿಗೆ ಇಷ್ಟು ಹಣವನ್ನೇಕೆ ಕೊಟ್ಟೆ?'' ಇನ್ನೊಬ್ಬನು ಹೇಳಿದನು:''—ಎಲೈ ಕರ್ಮನೆ, ನಾನ್ನು ದುಡಿಯುವವರಿಗೆ ಕೊಟ್ಟೇ ಕೊಡುವೆನು. ಅದನ್ನು ಅವನಿಗೆ ಉಳಿಸಿ ಕೊಡುವುದೂ ಬಿಡುವುದೂ ನಿನಗೆ ಸೇರಿದುದು.'' ಇದನ್ನು ಕೇಳಿ ಸೋಮಿಲಕನಿಗೆ ಎಚ್ಚರವಾಯಿತು. ನೋಡಿಕೊಂಡರೆ ಗಂಟನಲ್ಲಿದ್ದ ಹಣ ಮಾಯವಾಗಿತ್ತು.

ಅದನ್ನು ಕಂಡು ಅವನಿಗೆ ಬಹಳ ದುಃಖವಾಯಿತು. "ಕಷ್ಟ ಪಟ್ಟು ಸಂಪಾದಿಸಿದ ಹಣವೆಲ್ಲ ಹೀಗೆ ಮಾಯವಾಯಿತಲ್ಲ! ಈ ಮಾತು ಹೇಳಿದರೆ ನಂಬುವವರು ತಾನೇ ಯಾರು? ನನ್ನ ಹೆಂಡತಿಗೂ ಮಿತ್ರರಿಗೂ ನಾನು ಮುಖವನ್ನು ತೋರಿಸುವುದು ತಾನೇ ಹೇಗೆ?" ಎಂದು ಅತ್ತುಕೊಂಡು, ಮತ್ತೆ ಅದೇ ಊರಿಗೆ ಹೋಗಿ ಅಲ್ಲಿ ಒಂದೇ ವರ್ಷದಲ್ಲಿ ಐನೂರು ಹೊನ್ನು ಸಂಪಾದಿಸಿ, ಮತ್ತೆ ತನ್ನ ಊರಿಗೆ ಹೊರಟನು.

ಆ ಸಲವೂ ಕಾಡಿಗೆ ಬರುವುದಕ್ಕೂ ಸಂಜೆಯಾಗುವುದಕ್ಕೂ ಸರಿಹೋಯಿತು. ಅವನಿಗೂ ಆಯಾಸವಾಗಿತ್ತು. ಆದರೂ ಎಲ್ಲಾದರೂ ನಿಂತರೆ ಹಣವೇನಾಗುವುದೋ ಎಂದು ನಿಲ್ಲದೆ ನಡದೇ ಬಿಟ್ಟನು. ಅವನೆದುರಿಗೆ ಇಬ್ಬರು ಮಾತನಾಡಿಕೊಂಡು ಬರುತ್ತಿದ್ದರು. ಒಬ್ಬನು ಇನ್ನೊಬ್ಬನನ್ನು ಕೇಳಿದನು: "ಏನು ಕರ್ತ, ಇವನಿಗೆ ಐನೂರು ಹೊನ್ನು ಕೊಟ್ಟಿರುವೆಯಲ್ಲ! ಇವನಿಗೆ ಅನ್ನ ಬಟ್ಟೆಗಾಗುವಷ್ಟು ಮಾತ್ರವೇ ಸಿಕ್ಕಬೇಕು ಎಂದು ನಿನಗೆ ತಿಳಿಯದೆ?"

ಇನ್ನೊಬ್ಬನು ಹೇಳಿದನು:—"ಕರ್ಮ, ನನ್ನನ್ನೇಕೆ ನಿಂದಿಸುವೆ? ದುಡಿದವನಿಗೆ ನಾನು ಕೊಡಲೇಬೇಕು. ಅದನ್ನು ಉಳಿಸುವುದೂ ಬಿಡುವುದೂ ನಿನ್ನದು." ಇದನ್ನು ಕೇಳಿ ಸೋಮಿಲಕನಿಗೆ ದಿಗಿಲಾಗಿ ಗಂಟು ಮುಟ್ಟಿ ನೋಡಿದನು. ಹಣ ಮಾಯವಾಗಿತ್ತು.

ಅವನಿಗೆ ಬಹಳ ದುಃಖವಾಯಿತು. "ಹಣವಿಲ್ಲದ ನನ್ನ ಬಾಳು ಏಕೆ?" ಎಂದು ಬಲು ಬೇಸರ ಪಟ್ಟುಕೊಂಡು ಅಲ್ಲಿಯೇ ಒಂದು ಆಲದ ಮರದ ಮೇಲೆ ಹತ್ತಿ ಒಂದು ಹಗ್ಗವನ್ನು ಕತ್ತಿಗೆ ಹಾಕಿಕೊಂಡು ಅದನ್ನು ಒಂದು ಕೊಂಬೆಗೆ ಕಟ್ಟಿ, ಇನ್ನೇನು ಕೆಳಗೆ ಬೀಳಬೇಕು ಎಂದು ನಿಂತಿದ್ದಾನೆ. ಅಷ್ಟರಲ್ಲಿ ಒಬ್ಬ ಪುರುಷನು ಆಕಾಶದಲ್ಲಿ ಕಾಣಿಸಿಕೊಂಡು "ಸೋಮಿಲಕ, ಸಾಹಸ ಮಾಡ

ಬೇಡ, ನಿನ್ನ ಹಣವನ್ನು ತೆಗೆದುಕೊಂಡವನು ನಾನು. ನಿನಗೆ ಅನ್ನ ಬಟ್ಟೆಗಿಂತ ಹೆಚ್ಚಾಗಿ ಯಾವಾಗಲೂ ಇರಕೂಡದು. ಆದರೂ ನಿನ್ನ ಸಾಹಸವನ್ನು ಮೆಚ್ಚಿದೆನು. ನನ್ನ ದರ್ಶನವೂ ವ್ಯರ್ಥವಾಗಬಾರದು. ಅದರಿಂದ ಒಂದು ವರವನ್ನು ಕೊಡುವೆನು. ಕೇಳು.'' ಎಂದನು. ಅದಕ್ಕವನು ''ಹಾಗಾದರೆ ನನಗೆ ಅಪಾರವಾದ ಧನವನ್ನು ಕೊಡು ಎಂದನು. ಆ ಪುರುಷನು ''ಹುಚ್ಚ'' ನಿನಗೆ ಧನ ಪ್ರಾಪ್ತಿಯಿಲ್ಲ. ನಾನು ಕೊಟ್ಟರೂ ನಿನಗೆ ಅದು ಉಳಿಯುವುದಿಲ್ಲ. ಭೋಗವಿಲ್ಲದ ಧನದಿಂದ ಏನು ಪ್ರಯೋಜನ? ನಿನ್ನ ಅವಸ್ಥೆಯು ಗೂಳಿಯ ಅಂಡ ಗಳನ್ನು ನೋಡಿಕೊಂಡು ತಿರುಗುತ್ತಿದ್ದ ನರಿಯ ಹಾಗಾಗುವುದು.'' ಎಂದನು.

ಸೋಮಿಲಕನು ''ಅದು ಹೇಗೆ?'' ಎನ್ನಲು ಪುರುಷನು ಕಥೆ ಯನ್ನು ಹೇಳಿದನು:—



## ಬರಿದೆ ತಿರುಗಿದ ನರಿಯು ಕಥೆ

ಒಂದಾನೊಂದು ಕಾಡಿನಲ್ಲಿ ಒಂದು ನರಿಯು ಇತ್ತು. ಅದು ತನ್ನ ಹೆಂಡಿತಿ ಮಕ್ಕಳೊಡನೆ ಕಾಡಿನಲ್ಲಿ ತಿರುಗುತ್ತಿದ್ದಾಗ ದೊಡ್ಡ ಕೊಂಬಿನ ಗೂಳಿಯೊಂದನ್ನು ಕಂಡಿತು. ಒಂದೊಂದು ಮಾರು ಉದ್ದದ ಕೊಂಬುಗಳು, ಬೆಳೆದು ಒಂದು ಮುಗ್ಗುಲಿಗೆ ಬಗ್ಗಿರುವ ಹಿಣಿಲು, ಜೋಲಾಡುತ್ತಿರುವ ಗಂಗೆ ದೊವಲೂ ಕೂಡಿ ಅದುನೋಡು ವುದಕ್ಕೆ ಬಲು ಮುದ್ದಾಗಿತ್ತು. ಅದಂತೂ ಕೊಂಬಿನಿಂದ ತಿವಿದರೆ ನದಿಯ ದಡವು ಕತ್ತರಿಸಿ ಹೋಗುವುದು. ಸ್ವೇಚ್ಛೆಯಿಂದ ಸಿಕ್ಕಿದ ಕಡೆ ಮೇದುಕೊಂಡು, ಆ ಅರಣ್ಯಕ್ಕೆಲ್ಲಾ ತಾನೇ ರಾಜನೋ ಎನ್ನು ವಷ್ಟು ಗರ್ವದಿಂದ ಇರುವುದು.

ನರಿಯ ಹೆಂಡತಿಯು ಗಂಡನನ್ನು ಕರೆದು ಆ ಗೂಳಿಯ ಅಂಡ ಗಳನ್ನು ತೋರಿಸಿ, "ನೋಡಿದೆಯಾ? ಆ ಎರಡು ಮಾಂಸದ ಮುದ್ದೆ ಗಳು! ಎಷ್ಟು ಚೆನ್ನಾಗಿ ಬೆಳೆದಿವೆ! ಇವು ಆಗಲೇ ಜೋಲು ಬಿದ್ದಿವೆ. ಈಗಲೋ ಇನ್ನೊಂದುಗಳಿಗೆಗೋ ಅಥವಾ ನಾಳೆಯೋ ಇವು ತಪ್ಪದೆ ಬಿದ್ದು ಹೋಗುತ್ತವೆ. ನೀನು ಈ ಮೃಗದ ಜೊತೆಯಲ್ಲಿಯೇ ಹೋಗ ಬೇಕು. ಆವು ಬಿದ್ದು ಕೂಡಲೇ ಅವನ್ನು ನನಗೆ ತಂದು ಕೊಡ ಬೇಕು" ಎಂದು ಹೇಳಿತು. ಗಂಡು ಹೇಳಿತು:—ಪ್ರಿಯೆ, ಇವು ಯಾವಾಗ ಬೀಳುವುವೋ? ಅಥವಾ ಬೀಳುವುದೇ ಇಲ್ಲವೋ? ನಾನು ಬರಿದೆ ಬರಿದೆ ಇವರ ಹಿಂದೆ ತಿರುಗುವುದು ಎಂದರೇನು? ಇಲ್ಲಿದ್ದರೆ ತಪ್ಪದೆ ಇಲಿಗಳಂತೂ ಸಿಕ್ಕಿಯೇ ಸಿಕ್ಕುವುವು. ಇದನ್ನೂ ಬಿಟ್ಟು ಈ ಮೃಗದ ಹಿಂದೆ ತಿರುಗುವುದಕ್ಕೆ ಹೋದರೆ, ಈ ಮನೆಯನ್ನು ಕಾಯುವವರು ಯಾರು? ಅದರಿಂದ

ಧ್ರುವವ ಬಿಟ್ಟ ಧ್ರುವವ ಹಿಡಿದವ ಕೆಟ್ಟನು ॥ *
ಧ್ರುವವು ಹೋಯ್ತು ಧ್ರುವವು ಇಲ್ಲವೇ ಇಲ್ಲ ॥ ೨೬ ॥

ಹಾಗಬಾರದು."

ಅದನ್ನು ಕೇಳಿ ಹೆಂಡತಿಯು ಹೇಳಿತು:- ನಿಜವಾಗಿಯೂ ನೀನು ಹೇಡಿಯು.

ಕೊಂಚ ಮಳೆಯೊಳು ಹಳ್ಳ ಹರಿವುದು ||
ಕೊಂಚ ಹಿಡಿವುದು ಇಲಿಯ ಬೊಗಸೆಯು ||
ಕೊಂಚ ದೊರೆತರೆ ಹೇಡಿ ಸಾಕೆಂಬ || ೨೭ ||

ನೀನೂ ಹಾಗೆ ಆಗಬೇಡ.

---

* ಧ್ರುವ = ಶಾಶ್ವತವಾದದ್ದು: ಎಂದಿಗೂ ಇರುವುದು:
ಅಧ್ರುವ = ಹಾಗೆ ಇಲ್ಲದ್ದು.

ಉತ್ಸಾಹದಿಂದ ಕಾರ್ಯ ಮಾಡುತ ||
ಆಲಸ್ಯವಿಲ್ಲದೆಂದಿಗೂ.... ||
ಪೌರುಷ್ಯ ಮಾಡಿ ವಿನಯ ಬಿಡದಿರೆ ||
ಶ್ರೀ ದೇವಿ ನಿಲ್ವಳಯ್ಯ ನಿಶ್ಚಲಂ || ೨೮ ||

ಅದರಿಂದ ಪ್ರಯತ್ನವೇ ದೇವರೆಂದು ನಂಬಿ ಪ್ರಯತ್ನ ಶೀಲನಾಗು. ಗಾಣವು ಒಂದೇಸಮನಾಗಿ ತಿರುಗುತ್ತಿದ್ದರಲ್ಲವೆ ಎಳ್ಳು ಎಣ್ಣೆಯನ್ನು ಕೊಡುವುದು? ಅಲ್ಪ ಸ್ವಲ್ಪ ಸಿಕ್ಕಿದರೆಸಾಕು ಎಂಬುದು ಸಣ್ಣಬುದ್ಧಿಯುವರ ಮಾತು. ಅಂಥವರಿಗೆ ಐಶ್ವರ್ಯವು ಬಂದರೂ ನಿಲ್ಲುವುದಿಲ್ಲ. ಇವು ಬೀಳುವುವೋ ಬೀಳುವುದೇ ಇಲ್ಲವೋ ಎಂದೆ. ಅದೂ ಕೂಡ ನ್ಯಾಯವಲ್ಲ.

ನಿಶ್ಚಯ ಹಿಡಿಯದೆ ಗುರಿಯನು ಗೆಲ್ಲುವುದುಂಟೇನು?
ಚಾತಕವೆಂಬುದು ಸಣ್ಣದು ನಿಶ್ಚಯ ನೋಡದರಾ ।
ಬಾನಿಗೆ ಬಾಯ್ದ್ಬಾಯ್ ಬಿಡುತಲಿ ಕುಳ್ಳಿರೆ ಬಾಯಾರಿ ||
ಇಂದ್ರನೆ ಮೋಡವ ನೋಡಿಸಿ ನೀರನು ಕಳುಹಿಸುವ * || ೨೯ ||

ಜೊತೆಗೆ ನನಗೆ ಇಲಿಗಳನ್ನು ತಿಂದು ತಿಂದು ಬೇಸರವಾಗಿ ಹೋಗಿರುವುದು. ನೋಡು. ಈ ಮಾಂಸ ಪಿಂಡಗಳು ಇನ್ನೇನು ಬಿದ್ದು ಹೋಗುವುವೋ ಎಂಬಂತಿವೆ. ಅದರಿಂದ ನೀನು ನಾನು ಹೇಳಿದಂತೆಯೇ ಮಾಡಲೇಬೇಕು.'' ಎಂದು ಒತ್ತಾಯ ಮಾಡಲು ಗಂಡು ಹೆಂಡಿತಿಯ ಮಾತನ್ನು ಮೀರಲಾರದೆ ಆಗಲಿ ಎಂದು ಆ ಗೂಳಿಯ ಹಿಂದೆ ಹೋಯಿತು. ಕೇಳಿಲ್ಲವೆ?

ಹೆಣ್ಣಿನ ಮಾತೆಂಬಂಕುಶ ಇರಿಯುವ ತನಕ ||
ಮದಗಜದಂತಿಹ ಗಂಡುಸು ತಾನೆ ತಾನಾಗಿ||

---

* ಚಾತಕವೆಂಬುದು ಗುಬ್ಬಿಯುಷ್ಟಿರುವ ಒಂದು ಸಣ್ಣ ಹಕ್ಕಿ. ಅದು ನೆಲದ ಮೇಲೆ ಬಿದ್ದ ನೀರನ್ನು ಕುಡಿಯುವುದಿಲ್ಲ. ಮೋಡದಿಂದ ಬರುವ ನೀರನ್ನೇ ಕುಡಿಯುವುದು.

ಸಿಕ್ಕಲು ತಿವಿತಕೆ ಪಾಪವ ಪುಣ್ಯವು ಎನುತ ॥
ಮಾಡಲು ಬಾರದ ಕೆಲಸವ ತಪ್ಪದೆ ಮಾಳ್ಪ ॥ ೩೦ ॥

ನರಿಯು ಹೀಗೆ ಹೆಂಡಿತಿಯೊಡನೆ ಆ ಗೂಳಿಯ ಹಿಂದೆ ತಿರುಗುತ್ತ ತಿರುಗುತ್ತ ಹದಿನೈದು ವರ್ಷಗಳು ಕಳೆದು ಹೋಯಿತು. ಆಗ ಅದಕ್ಕೂ ಬೇಸರವಾಗಿ ಇನ್ನು ಈ ಕೆಲಸ ಬೇಡವೆಂದು ಅದನ್ನು ಬಿಟ್ಟು ತನ್ನ ಪಾಡಿಗೆ ತಾನು ಹೋಯಿತು. ಅದರಿಂದ ನರಿಯ ಹಾಗಾಗ ಬೇಡವೆಂದು ಹೇಳಿದೆನು. ನೀನು ಮತ್ತೆ ವರ್ಧಮಾನಕ್ಕೆ ಹೋಗು. ಅಲ್ಲಿ ಗುಪ್ತಧನ, ಭುಕ್ತಧನ ಎಂಬ ಇಬ್ಬರು ವೈಶ್ಯರು ಇರುವರು. ಅವರನ್ನು ಹೋಗಿನೋಡು. ಅವರಲ್ಲಿ ನೀನು ಯಾರಂತೆ ಇರಬೇಕು ಎಂದರೆ ಅವರಂತೆ ಆಗುವೆ.'' ಎಂದು ಅವನನ್ನು ಸಮಾಧಾನ ಮಾಡಿದನು.

ಸೋಮಿಲಕನು ಪುರುಷನು ಹೇಳಿದಂತೆ ವರ್ಧಮಾನಕ್ಕೆ ಹೋದನು. ಅಲ್ಲಿ ಗುಪ್ತಧನನ ಮನೆಯನ್ನು ವಿಚಾರಿಸಿಕೊಂಡು ಸಂಜೆಯ ವೇಳೆಗೆ ಹೋದನು. ಅಲ್ಲಿ ಗುಪ್ತಧನ, ಅವನ ಹೆಂಡಿತಿ, ಮಕ್ಕಳು, ಎಲ್ಲರೂ ಬರಬೇಡ ಎಂದು ಬಯ್ಯುತ್ತಿದ್ದರೂ ಒಳನುಗ್ಗಿ ಇವೊತ್ತು ರಾತ್ರಿ ನಾನು ಇಲ್ಲಿಯೇ ತಂಗಬೇಕು ಎಂದು ಹಟ ಮಾಡಿ ಕುಳಿತುಬಿಟ್ಟನು. ಇನ್ನು ಯತ್ನವಿಲ್ಲವೆಂದು ಅವರು ಊಟ ಮಾಡುವಾಗ ಇವನಿಗೂ ಒಂದಷ್ಟು ತಂದು ಹಾಕಿದರು. ಅದನ್ನು ತಿಂದು ಅಲ್ಲಿಯೇ ಮಲಗಿದನು.

ಅರ್ಧ ರಾತ್ರಿಯಲ್ಲಿ ಅವನಿಗೆ ಎಚ್ಚರವಾಯಿತು. ಆ ವೇಳೆಗೆ ಇಬ್ಬರು ಪುರುಷರು ನಿಂತುಕೊಂಡು ಮಾತನಾಡುತ್ತಿದ್ದರು. ಒಬ್ಬನು ಹೇಳಿದನು. ''ಏನು ಕರ್ತ, ಈ ಸೋಮಿಲಕನಿಗೆ ಅನ್ನ ಇಡಿಸುವ ನೆಪದಲ್ಲಿ ಈ ಗುಪ್ತಧನನಿಗೆ ಇನ್ನೊಂದು ವೆಚ್ಚ ತಂದಿಟ್ಟೆಯಲ್ಲ?'' ಇನ್ನೊಬ್ಬನು ಹೇಳಿದನು:—''ಕರ್ಮ ನನ್ನನ್ನು ನಿಂದಿಸಬೇಡ.

ನಾನು ಏನಿದ್ದರೂ ಕೊಡುವವನು. ಅದರ ಭೋಗ ಕೊಡುವುದೂ ಬಿಡುವುದೂ ನಿನ್ನದು.''

ಬೆಳಗಾಗುವ ವೇಳೆಗೆ ಗುಪ್ತಧನನಿಗೆ ಎರಡು ಸಲ ಭೇದಿಯಾಯಿತು. ಹೊಟ್ಟೆಯ ನೋವೆಂದು ಮಲಗಿದ್ದನು. ಆ ದಿನ ಊಟಬೇಡವೆಂದು ಉಪವಾಸ ಮಾಡಿದನು. ಹಿಂದಿನ ರಾತ್ರಿ ಮಾಡಿದ್ದ ವೆಚ್ಚ ಭರ್ತಿಯಾಯಿತು.

ಇದನ್ನು ನೋಡಿದ ಸೋಮಿಲಕನು ಮರುದಿನ ಭುಕ್ತಧನನ ಮನೆಗೆ ಹೋದನು. ಅತನು ಬಂದವನನ್ನು ವಿಶ್ವಾಸದಿಂದ ಕಂಡು ಆದರಿಸಿ, ಸತ್ಕಾರ ಮಾಡಿದನು. ಸರಿಯಾಗಿ ಊಟ ಮಾಡಿಸಿ, ಹಾಸುಗೆ ಹಾಸಿಕೊಟ್ಟು ಉಪಚಾರ ಮಾಡಿದನು. ಆದಿನ ರಾತ್ರಿಯೂ ಸೋಮಿಲಕನಿಗೆ ಎಚ್ಚರವಾಗಿ ಆ ಇಬ್ಬರ ಪುರುಷರ ಮಾತುಗಳು ಕೇಳಿಸಿದುವು. ಒಬ್ಬನು ಕೇಳುತ್ತಿದ್ದನು:—''ಏನಯ್ಯಾ, ಇವನು ಸೋಮಿಲಕನಿಗೆ ಉಪಚಾರ ಮಾಡುವುದಕ್ಕೆಂದು ಬೇಕಾದಷ್ಟು ವ್ಯಯ ಮಾಡಿದನು. ಇನ್ನು ಆ ಹಣವನ್ನು ಎಲ್ಲಿಂದ ತರಬೇಕು? ಇವೊತ್ತಿಗೆ ಬೇಕಾದ ಹಣವನ್ನೆಲ್ಲಾ ಇವನು ಸಾಲ ತಂದಿರುವನಲ್ಲಾ!'' ಇನ್ನೊಬ್ಬನು ಹೇಳಿದನು:—ಕರ್ಮ, ಇದೆಲ್ಲಾ ನನ್ನ ಕೆಲಸ. ನಿಜ. ಮುಂದಲದು ನಿನ್ನ ಹಣೆಯ ಬರೆಹ. ಬೆಳಗಾಗುತ್ತಿದ್ದ ಹಾಗೆಯೇ ಅರಮನೆಯಿಂದ ಭುಕ್ತಧನನಿಗೆ ಬೇಕಾದಷ್ಟು ಧನವು ಬಂತು.

ಅದೆಲ್ಲವನ್ನೂ ಕಂಡು ಸೋಮಿಲಕನು ಚಿಂತಿಸಿದನು. ''ಈ ಭುಕ್ತಧನನಿಗೆ ಆಸ್ತಿಯಿಲ್ಲ ಪಾಸ್ತಿಯಿಲ್ಲ. ಅದರೂ ಅದೆಲ್ಲ ಇರುವ ಗುಪ್ತಧನನಿಗಿಂತ ಇವನೇ ಉತ್ತಮನು.

ವೇದವನೋದಲು ದೇವಾರಾಧನ ಗೈವುದೆ ಫಲವು ||
ವಿದ್ಯೆಯ ಕಲಿಯುಲು ಬುದ್ಧಿ ನಡತೆ ತಿದ್ದುವುದೇ ಫಲವು ||

ಮಡದಿಯು ಪಡೆಯಲು ಭೋಗವು ಮಕ್ಕಳು ದೊರೆವುದೆ ಫಲವು ||
ಧನಗಳು ತುಂಬಿರೆ ದಾನವು ಭೋಗವು ಹಿರಿದಹೆ ಫಲವು ||೩೧ ||

ಅದರಿಂದ ನನ್ನ ಕರ್ಮವು ನನ್ನನ್ನು ಭುಕ್ತಧನನನ್ನು ಮಾಡಲಿ, ಗುಪ್ತಧನನಾಗುವುದು ಬೇಡ ''ಎಂದು ಭುಕ್ತಧನನಾದನು. ಅದರಿಂದ, ಎಲೈ ಹಿರಣ್ಯಕ, ಇದನ್ನು ತಿಳಿದು ಹಣವು ಹೋಯಿತೆಂಬ ಚಿಂತೆಯನ್ನು ಬಿಡು. ಇದ್ದರೂ ಭೋಗಿಸದ ಮೇಲೆ ಆ ಧನವು ಇಲ್ಲದಂತೆಯೇ ಅಲ್ಲವೆ? ಹೂತುಹಾಕಿರುವ ಧನದಿಂದ ಒಬ್ಬನು ಧನವಂತನು ಎಂದರೆ, ಅವನು ಹೂತಿಟ್ಟಿರುವ ಧನದಿಂದ ನಾವೂ ಧನವಂತರೇ ಆಗಿರುವೆವು. ಅಲ್ಲದೆ, ಸಂಪಾದಿಸಿದ ಹಣವನ್ನು ತ್ಯಾಗ ಮಾಡುವುದೇ ಅದಕ್ಕೆ ರಕ್ಷಣೆಯು. ಕೆರೆಗೆ ನೀರು ಬಂದರೆ, ಕೆರೆಯನ್ನು ಕಾಪಾಡಲು ಅದನ್ನು ಹೊರಕ್ಕೆ ಬಿಡಲೇಬೇಕಲ್ಲವೆ? ಮತ್ತು, ದಾನ, ಭೋಗ, ಈ ಎರಡಕ್ಕೆ ಹಣವನ್ನು ಉಪಯೋಗಿಸುವುದೇ ಸರಿಯಲ್ಲದೆ ಅದನ್ನು ಕೂಡಿಡಬಾರದು. ಕೂಡಿಟ್ಟ ಜೇನು ನೋಡು, ಪರರ ಪಾಲಾಗುವುದು. ಎಲ್ಲದಕ್ಕಿಂತ ಹೆಚ್ಚಾಗಿ.

ದಾನವು ಭೋಗವು ನಾಶವು ಎಂಬೀ ||
ಮೂರೇ ಗತಿಗಳು ಧನಕ್ಕೆ ನೋಡಲ್ ||
ದಾನವು ಭೋಗವು ಇಲ್ಲದ ಹಣಕ್ಕೆ ||
ಮೂರನೆ ಗತಿಯೇ ತಪ್ಪದೆ ಬಹುದೈ || ೩೨ ||

ಇದೆಲ್ಲವನ್ನೂ ತಿಳಿದುಕೊಂಡು ವಿವೇಕಿಯು ಮಾನವಾಗಿ ಬದುಕುವುದಕ್ಕೆ ಬೇಕಾದಷ್ಟು ಹಣವನ್ನು ಸಂಪಾದಿಸಬೇಕು. ಕೂಡಿಡುವುದಕ್ಕೆಂದು ಸಂಪಾದಿಸಬಾರದು. ಹಾಗೆ ಮಾಡಿದರೆ ದುಃಖವು ತಪ್ಪದು. ಸುಖಕ್ಕಾಗಿ ಹಣವಂತರನ್ನು ಸೇವಿಸುವವರು ನಿಜವಾಗಿಯೂ ಮೂರ್ಖರು. ಅಂಥವರು ಬಿಸಿಲು ಹೆಚ್ಚಾಯಿತು ಎಂದು ತಂಪಾಗಲಿ ಎಂದು ಬೆಂಕಿಯನ್ನು ಕಾಯಿಸಿಕೊಂಡವರಂತೆ, ಸುಖಕ್ಕೂ ಧನಕ್ಕೂ ಎಂದಿಗೂ ಸಂಬಂಧವಿಲ್ಲ. ಕೇಳಿಲ್ಲವೆ?

ಗಾಳಿ ಕುಡಿದು ಬದುಕುವಂಥ ಹಾವು ಅಬಲವೆ?
ಒಣಕು ಕಡ್ಡಿ ತಿಂದು ಬಾಳ್ವ ಆನೆ ಯಬಲವೆ?
ಗೆಡ್ಡೆ ಗೆಣಸು ತಿಂಬ ಮುನಿಯು ಧನವನುಳ್ಳನೇ?
ನಿಜದಿನೋಡೆ ವೋದವೊಂದೆ ಧನಕೆ ಧನವದು ॥ ೩೩ ||

ಸಂತೋಷವೆಂಬ ಅಮೃತವನ್ನು ಕುಡಿದು ತೃಪ್ತರಾದ ಪುರುಷರಿಗೆ ಇರುವ ಶಾಂತಿಯು ಧನದ ಮೇಲಿನ ಲೋಭದಿಂದ ಒದ್ದಾಡುವವರಿಗೆ ಎಲ್ಲಿ ಉಂಟು? ಅಷ್ಟೇಸು?

ದಾನಕ್ಕೆಣೆಯಹ ನಿಧಿಯಿಲ್ಲ ॥ ಶೀಲಕ್ಕೆಣೆಯಹ ತೊಡವಿಲ್ಲ ॥
ಲೋಭಕ್ಕಿಂತಲು ರಿಪುವಿಲ್ಲ ॥ ತೋಷಕ್ಕಿಂತಲು ಧನವಿಲ್ಲ ॥

ಸತ್ಪುರುಷನು ದರಿದ್ರನಾದರೂ ಪೂಜೆಗೊಳ್ಳುವನು. ಎಲ್ಲರಿಂದಲೂ ಪೂಜೆ ಮಾಡಿಸಿಕೊಳ್ಳುವ ಪರಮೇಶ್ವರನಿಗೆ ಇರುವ ಆಸ್ತಿಯೆಲ್ಲಾ ಒಂದೇ ಒಂದು ಮುದಿಗೂಳಿ.

ಸಜ್ಜನನ್ನುರುಳುವ ಚೆಂಡಿನ ಹಾಗೆ ॥
ದುರ್ಜನ ನುರುಳುವ ಮುದ್ದೆಯ ಹಾಗೆ ॥ ೩೪ ||

ಅಪರಿಂದ, ಹಿರಣ್ಯಕ, ಸಂತೋಷವಾಗಿರು ಎಂದು ಹೇಳಿದ ಮಂಥರಕನ ವಾಕ್ಯವನ್ನು ಕೇಳಿ ಕಾಗೆಯು "ಮಿತ್ರ, ಈತನು ಹೇಳಿದಂತೆಯೇ ನೀನು ಮಾಡಬೇಕು." ಎಂದು ಹೇಳಿ ಕೇಳಿಕೊಂಡಿತು. ಇಲಿಯೂ ಆಗಲೆಂದು ಮೂವರೂ ಎಷ್ಟೋಕಾಲ ಸಂತೋಷವಾಗಿದ್ದರು.



## ಚಿತ್ರಾಂಗನ ಕಥೆ

ಇವರು ಮೂವರೂ ಒಂದು ದಿನ ಸರೋವರ ತೀರದಲ್ಲಿ ಕುಳಿತು ಕಥಾ ವಿನೋದದಲ್ಲಿ ಇರುವಾಗ ಅಲ್ಲಿಗೆ ಒಂದು ಜಿಂಕೆಯು ಬೇಡರಿಗೆ ಹೆದರಿ ಏದುತ್ತಾ ಓಡೋಡಿ ಬಂತು. ಅದನ್ನು ಕಂಡು

ಕಾಗೆಯು ಮರವೇರಿತು. ಇಲಿಯು ಹುಲ್ಲಿನ ತೆಂಡೆಯಲ್ಲಿ ಅವಿತು ಕೊಂಡಿತು. ಆಮೆಯು ನೀರಿಗೆ ಧುಮುಕಿತು. ಕಾಗೆಯು ಬಂದ ಜಿಂಕೆಯನ್ನು ಚೆನ್ನಾಗಿ ನೋಡಿ "ಇದು ನೀರಿಗಾಗಿ ಬಂದಿರುವ ಜಿಂಕೆಯು. ಇನ್ನು ಮನುಷ್ಯರಾರೂ ಬಂದಿಲ್ಲ. ಮಂಥರಕ, ಬಾ." ಎಂದು ಕೂಗಿತು. ಆಮೆಯೂ ಹಾಗೆಯೇ ನೀರಿನಿಂದ ತಲೆಯೆತ್ತಿ ನೋಡಿ, "ಮಿತ್ರ, ಇದು ಏದುತ್ತಿದೆ, ಹಿಂದಕ್ಕೆ ತಿರುಗಿ ನೋಡು ತ್ತಿದೆ. ಅದರಿಂದ ಇದು ಹೆದರಿ ಬಂದಿರುವ ಮೃಗವೇ ಹೊರತು ನೀರಿಗೆ ಬಂದುದಲ್ಲ. ಇದನ್ನು ಓಡಿಸಿಕೊಂಡು ಬೇಡರೂ ಬಂದಿ ರುವರೇನೋ ನೋಡು." ಎಂದಿತು.

ಅದನ್ನು ಕೇಳಿ ಆ ಜಿಂಕೆಯು "ಆಮೆಯ ಮಾತು ನಿಜ. ನಾನು ಬೇಡರ ಬಾಣದ ಏಟು ತಪ್ಪಿಸಿಕೊಂಡು ಕಷ್ಟಪಟ್ಟು ಓಡಿ ಬಂದೆನು. ನನ್ನ ಗುಂಪನ್ನು ಅವರು ಹೊಡೆದು ಹಾಕಿದರೋ




ಏನೋ? ದಯವಿಟ್ಟು ಬೇಡರಿಗೆ ಕಾಣದ ಒಂದು ಸ್ಥಲವನ್ನು ತೋರಿಸು. ಕಾಪಾಡು" ಎಂದು ಕಾಗೆಯನ್ನು ಬೇಡಿಕೊಂಡಿತು. ಕಾಗೆಯು ಮೇಲಕ್ಕೆ ಹಾರಿ ಸುತ್ತಲೂ ನೋಡಿಕೊಂಡು ಬಂದು,

"ನಿನ್ನ ಬೇಡರು ಮಾಂಸದ ಮುದ್ದೆಗಳನ್ನು ಹೊತ್ತುಕೊಂಡು ಅಪರ ಪಾಳ್ಯದ ಕಡೆಗೆ ಹೋದರು. ನೀನು ಇನ್ನು ಸುಖವಾಗಿರಬಹುದು" ಎಂದು ಹೇಳಿತು. ಆ ಜಿಂಕೆಯು "ನೀನು ನನ್ನ ಭೀತಿಯನ್ನು ಕಳೆದು ಕಾಪಾಡಿದೆ. ಇಂದಿನಿಂದ ನನ್ನ ಮಿತ್ರನಾಗು. ನನ್ನನ್ನು ಮಿತ್ರನನ್ನು ಮಾಡಿಕೊ" ನನ್ನ ಹೆಸರು ಚಿತ್ರಾಂಗನು. ಎಂದಿತು. ಕಾಗೆಯು ಆಗಲೆಂದು ಅದನ್ನು ತನ್ನ ಮಿತ್ರರಾದ ಆಮೆ ಇಲಿಗಳಿಗೂ ಮಿತ್ರನನ್ನು ಮಾಡಿಕೊಟ್ಟಿತು. ಚಿತ್ರಾಂಗನೆಂಬ ಆ ಜಿಂಕೆಯು ಕಾಗೆ ಇಲಿ ಆಮೆಗಳೊಡನೆ ಎಷ್ಟೋಕಾಲ ಸುಖವಾಗಿತ್ತು.

ಒಂದು ದಿನ ಚಿತ್ರಾಂಗನು ಮೇಯುವುದಕ್ಕೆ ಹೋಗಿದ್ದು ಎಂದಿನಂತೆ ಹೊತ್ತಿಗೆ ಸರಿಯಾಗಿ ಬರಲಿಲ್ಲ. ಮಿಕ್ಕ ಮೂವರೂ "ಚಿತ್ರಾಂಗನೇಕೆ ಬರಲಿಲ್ಲ? ಸಿಂಹಾದಿಗಳು ತಿಂದು ಹಾಕಿದುವೋ? ಬೇಡರು ಹೊಡೆದು ಹಾಕಿದರೋ? ಹಳ್ಳಗಿಳ್ಳದಲ್ಲಿ ಬಿದ್ದು ಹೋಯಿತೋ?" ಎಂದು ವ್ಯಥೆ ಪಟ್ಟರು. ಆಗ ಆಮೆಯು ಕಾಗೆಯನ್ನು ಕರೆದು "ನಾವಿಬ್ಬರೂ ನಿದಾನವಾಗಿ ನಡೆಯುವವರು. ನೀನು ಹಾರುವವನು. ಅದರಿಂದ ಬೇಗ ಹಾರಿಹೋಗಿ ಚಿತ್ರಾಂಗನೇನಾಗಿರುವನೋ ನೋಡಿ ಬಾ."ಎಂದು ಕಳುಹಿಸಿತು. ಕಾಗೆಯೂ ಹುಡುಕಿಕೊಂಡು ಹೋಯಿತು.

ಚಿತ್ರಾಂಗನು ಕೊಂಚ ದೂರದಲ್ಲಿಯೇ ಬಲೆಯಲ್ಲಿ ಸಿಕ್ಕಿ ಹಾಕಿಕೊಂಡಿತ್ತು. ಕಾಗೆಯನ್ನು ಕಂಡು ಜಿಂಕೆಯು ಕಣ್ಣೀರು ಹಾಕಿಕೊಂಡು, "ಮಿತ್ರ, ತಾನಿನ್ನು ಸಾಯುವೆನು. ಸಾಯುವ ಕಾಲಕ್ಕೆ ನಿನ್ನನ್ನು ಕಂಡುದೇ ಭಾಗ್ಯ. ಆಪತ್ಕಾಲದಲ್ಲಿ ಮಿತ್ರನನ್ನು ಕಂಡರೆ ಸತ್ತರೂ ಸಂತೋಷವೇ! ಇದ್ದರೂ ಸಂತೋಷವೇ! ಏನಾದರೂ ಆಗಲಿ. ನಾನು ನಿನ್ನಲ್ಲಿ ತಿಳಿಯದೆ ಏನಾದರೂ ಅಪರಾಧ ಮಾಡಿದ್ದರೆ ಅದನ್ನು ನೀನೂ ಕ್ಷಮಿಸು. ಹಿರಣ್ಯಕ ಮಂಥರಕರೂ ಕ್ಷಮಿಸುವಂತೆ ಹೇಳು." ಎಂದು ಹೇಳಿಕೊಂಡಿತು.

ಅದನ್ನು ಕೇಳಿ ಕಾಗೆಯು, "ಮಿತ್ರ, ನಮ್ಮಲ್ಲಿ ನೀನು ಏನೂ ಅಪರಾಧ ಮಾಡಿಲ್ಲ. ಅದಿರಲಿ, ನಾನು ಹೋಗಿ ಹಿರಣ್ಯಕನನ್ನು ಬೇಗನೆ ಕರೆದು ತರುವೆನು. ಸತ್ಪುರುಷರು ವ್ಯಸನದಲ್ಲಿ ವ್ಯಾಕುಲ ಪಡುತ್ತ ತಲೆಯಮೇಲೆ ಕೈಯಿಟ್ಟುಕೊಂಡು ಕುಳಿತುಕೊಳ್ಳಬಾರದು. ಸಂಪತ್ತಿಂದು ಹರ್ಷಪಡದೆ, ವಿಪತ್ತಿನಲ್ಲಿ ವಿಷಾದ ಪಡದೆ, ರಣದಲ್ಲಿ ಹೆದರದೆ ಇರುವವನು ಮೂರು ಲೋಕಗಳಿಗೂ ಭೂಷಣನು. ನೀನು ಧೈರ್ಯವಾಗಿರು. ನಾನೀಗಲೇ ಬರುವೆನು." ಎಂದು ಅದಕ್ಕೆ ನಂಬಿಕೆ ಹೇಳಿ, ಓಡಿಹೋಗಿ ಇಲಿ ಆಮೆಗಳಿಗೆ ಜಿಂಕೆಯ ಅವಸ್ಥೆಯನ್ನು ಹೇಳಿ ಇಲಿಯನ್ನು ಬೆನ್ನಿನ ಮೇಲೆ ಕುಳ್ಳಿರಿಸಿಕೊಂಡು ಜಿಂಕೆಯಿರುವ ತಾವಿಗೆ ಕರೆದುಕೊಂಡು ಬಂತು. ಇಲಿಯನ್ನು ಕಂಡು ಜಿಂಕೆಗೆ ಜೀವ ಬಂದಹಾಗಾಗಿ, "ಆಪತ್ತು ದಾಟುವುದಕ್ಕೆ ಮಿತ್ರನಿರಬೇಕೆಂದು ಹಿರಿಯರು ಹೇಳುತ್ತಿದ್ದರು. ಅದು ನಿಜವಾಯಿತು" ಎಂದಿತು.

ಹಿರಣ್ಯಕನು "ನೀನು ಹೇಗೆ ಸಿಕ್ಕಿಕೊಂಡೆ?" ಎಂದು ಕೇಳಿತು. ಜಿಂಕೆಯು "ಮೊದಲು ಬಿಡಿಸು. ಬೇಡನು ಬಂದಾನು." ಎಂದಿತು. ಇಲಿಯು "ನಾನಿರುವಾಗ ನಿನಗೇಕೆ ಆಯೋಚನೆ ನಿನ್ನಂಥವನೂ ಬಲೆಗೆ ಸಿಕ್ಕಿಕೊಂಡನು ಎಂದ ಮೇಲೆ ಏನು ಹೇಳುವುದು?" ಎಂದು ಕಣ್ಣೀರು ಹಾಕಿಕೊಂಡಿತು. ಜಿಂಕೆಯು "ನನ್ನದೇನು ಮಹಾ! ದುಷ್ಕಾಲವು ಬಂದಾಗ ಬುದಿಯು ಮೊಂಕಾಗುವುದು." ಎಂದು ಸಮಾಧಾನ ಹೇಳಿತು. ಹೀಗೆ ಇವರಿವರು ಮಾತನಾಡಿಕೊಳ್ಳುತ್ತಿರುವಾಗ ಮಂಥರಕನೂ ಅಲ್ಲಿಗೆ ಬಂದು ಬಿಟ್ಟಿತು.

ಅದನ್ನು ಕಂಡು ಕಾಗೆಯು "ಅಯ್ಯೋ ಕೆಲಸ ಕೆಟ್ಟಿತು." ಎಂದು ಕೂಗಿಕೊಂಡಿತು. ಇಲಿಯು ಗಾಬರಿಯಾಗಿ "ಏನು ಬೇಡನು ಬಂದನೇನು?" ಎಂದಿತು. ಕಾಗೆಯು "ಇಲ್ಲ. ಇಲ್ಲ. ಇತ್ತನೋಡು.

ಮಂಥರಕನು ಬಂದಿದ್ದಾನೆ. ಬೇಡನು ಬಂದರೆ ಚಿತ್ರಾಂಗನು ಓಡು ವನು. ನೀನು ಬಿಲವನ್ನು ಸೇರುವೆ. ನಾನು ಮರವನ್ನು ಏರುವೆನು. ಈ ಮಂಥರಕನು ಏನು ಮಾಡಬೇಕು? ಅದರಿಂದ ಮಂಥರಕ, ನೀನು ಬರಬಾರದಾಗಿತ್ತು.'' ಎಂದಿತು. ಇಲಿಯು "ಹೌದು, ಹೌದು, ನೀನು ಬರಬಾರದಾಗಿತ್ತು. ಈಗಲೂ ಬೇಗ ಬೇಗ ನಡೆ, ಬೇಡನು ಬಂದಾನು.'' ಎಂದಿತು. ಆಮೆಯು "ನಾನು ಅಲ್ಲಿರುವುದಕ್ಕೆ ನನ್ನಿಂದ ಸಾಧ್ಯವಾಗಲಿಲ್ಲ. ಬಂದು ಬಿಟ್ಟೆ'' ಎಂದಿತು.

ಇವರಿವರು ಹೀಗೆ ಮಾತನಾಡುತ್ತಿರುವುದರಲ್ಲಿ ಬಿಲ್ಲು ಬಾಣ ಗಳನ್ನು ಹಿಡಿದುಕೊಂಡು ಯಮನಂತೆ ಬೇಡನು ಬಂದೇ ಬಿಟ್ಟನು. ಇಲಿಯು ಥಟ್ಟನೆ ಹೋಗಿ ಜಿಂಕೆಯನ್ನು ಹಿಡಿದಿದ್ದ ಹಗ್ಗವನ್ನು ಕತ್ತ ರಿಸಿತು. ಜಿಂಕೆಯು ಎದ್ದು ಹಾರಿತು. ಇಲಿಯು ಬಿಲದಲ್ಲಿ ಸೇರಿ ಕೊಂಡಿತು. ಕಾಗೆಯು ಮರವನ್ನು ಏರಿಕೊಂಡಿತು. ಆಮೆಯೂ ಆದಷ್ಟು ಬೇಗ ಬೇಗ ಓಡಿತು.

ಬೇಡನು ಜಿಂಕೆಯು ತಪ್ಪಿಸಿಕೊಂಡಿತಲ್ಲಾ ಎಂದು ಕೈ ಕೈ ಹಿಸುಕಿಕೊಳ್ಳುತ್ತಾ, ಹಾಗೆಯೇ ಸುತ್ತ ಮುತ್ತ ನೋಡುತ್ತಿರಲು, ಅಲ್ಲಿಯೇ ಹೋಗುತ್ತಿರುವ ಆಮೆಯು ಕಾಣಿಸಿತು. "ಹೋಗಲಿ. ಜಿಂಕೆಯಿಲ್ಲದಿದ್ದರೆ ಆಮೆಯಾದರು ಸಿಕ್ಕಿತಲ್ಲ. ಇವೊತ್ತಿನ ಮನೆಯ ಪಾಡು ಕಳೆಯಿತು.'' ಎಂದು ಅದನ್ನು ತೆಗೆದುಕೊಂಡು ಮನೆಯ ಕಡೆ ಹೊರಟನು.

ಅದನ್ನು ಕಂಡು ಹಿರಣ್ಯಕನಿಗೆ ಕಣ್ಣೀರು ಬಂತು. "ಛೀ. ಸಸಿದು ಈ ಕೆಟ್ಟ ಹಣೆಯಬರೆಹ! ಒಂದು ದುಃಖವು ತೀರಿತು ಎನ್ನು ವುದರೊಳಗಾಗಿ ಇನ್ನೊಂದು ದುಃಖವೇ? ಇದ್ದ ಹಣ ಹೋಯಿತು. ಅದನ್ನು ಮರೆಯುವುದರೊಳಗಾಗಿ ಎರಡನೆಯ ಪ್ರಾಣದಂತಿದ್ದ ಮಿತ್ರನು ಹೋದನು. ಇನ್ನು ಮಂಥರಕನಂತಹ ಮಿತ್ರನುಂಟೇ?

ಎಡಹಿದ ಕಾಲೇ ಎಡಹುವುದು ಎಂಬ ಮಾತು ನಿಜವಾಯಿತಲ್ಲಾ!" ಎಂದು ಅಳುತ್ತಿರಲೂ ಚಿತ್ರಾಂಗ ಲಘುಪತನಕರೂ ಅಳುತ್ತ ಅಲ್ಲಿಗೆ ಬಂದರು. ಒಬ್ಬರನ್ನೊಬ್ಬರು ಸಮಾಧಾನ ಮಾಡುತ್ತ, ಕೊನೆಗೆ ಇಲಿಯು ಹೇಳಿತು. "ಬರಿಯ ಅಳುವಿನಿಂದ ಪ್ರಯೋಜನವಿಲ್ಲ. ಏಳಿ. ಏನಾದರೂ ಉಪಾಯಮಾಡಿ ಮಂಥರಕನನ್ನು ಉಳಿಸಿ" ಕೇಳಿಲ್ಲವೆ?

ವ್ಯಸನವು ಬಂದಾಗ |ಬರಿ ಬರಿ ದತ್ತರೆ ಫಲವೇನು ?||
ಅಳು ಅಳು ಅಳುವಾಗಿ | ಅಳುತಿರೆ ವ್ಯಸನವು ತೀರುವುದೇ ||
ವ್ಯಸನವನದರಿಂದ | ಬಿಡುಬೇಕು ವ್ಯಸನದ ಕೊನೆಗಾಗಿ ||
ಚಿಂತಿಸಿ ಮತಿವಂತ | ಕಾರ್ಯವ ಮಾಡಬೇಕು || ೩೫ ||

ಅಲ್ಲದೆ,
ಕೈ ಸೇರಿದ ಲಾಭದ ರಕ್ಷಣಕಾಗಿ ||
ಕೈ ಸೇರುವ ಲಾಭದ ಬರುವಿಕೆಗಾಗಿ ||
ಆಪತ್ತಿನೊಳಿರುವನ ಬಿಡುಗಡೆಗಾಗಿ ||
ಯೋಚನೆ ಮಾಡಿರಿ ಉಪಾಯವೆಂದ || ೩೬ ||

ಕಾಗೆಯು ಒಂದುಗಳಿಗೆ ಯೋಚಿಸಿ ಹೇಳಿತು. "ಹಾಗಾದರೆ ಕೇಳಿ. ಈ ಚಿತ್ರಾಂಗನು ಈ ಬೇಡನ ಹಾದಿಯಲ್ಲಿ ಇರುವ ನೀರಿನ ಮಗ್ಗುಲಲ್ಲಿ ಸತ್ತಂತೆ ಬಿದ್ದುಕೊಳ್ಳಲಿ. ನಾನೂ ಈತನ ಮೇಲೆ ಕುಳಿತು ಕುಕ್ಕಿ ಕುಕ್ಕಿ ತಿನ್ನುತ್ತಿರುವಂತೆ ನಟಿಸುವೆನು. ಅದನ್ನು ಕಂಡು ಬೇಡನು ಈ ಜಿಂಕೆಯು ಸತ್ತಿದೆಯೆಂದು ಇದನ್ನು ತೆಗೆದುಕೊಳ್ಳಲು ಆಮೆಯನ್ನು ಅತ್ತ ಎಸೆದು ಬರುವನು. ಅವನಿತ್ತ ಬರುತ್ತಲೂ ನೀನು ಹೋಗಿ ಆಮೆಯನ್ನು ಸುತ್ತಿರುವ ಹುಲ್ಲನ್ನು ಕಡಿದು ಹಾಕು. ಮಂಥರಕನು ಓಡಿಹೋಗಿ ನೀರಿಗೆ ಧುಮುಕಲಿ, ನಾನು ಸಮಯ ನೋಡಿ ಕೂಗುವೆನು. ಚಿತ್ರಾಂಗನು ಎದ್ದು ಓಡುವನು." ಎಂದಿತು. ಎಲ್ಲರೂ ಅದನ್ನು ಒಪ್ಪಿದರು. ಹಾಗೆಯೇ ಮಾಡಿದರು.

ಬೇಡನು ಬರುತ್ತಿದ್ದ ಹಾದಿಯಲ್ಲಿ ಒಂದು ಜಿಂಕೆಯು ಬಿದ್ದಿರುವುದನ್ನು ಕಂಡನು. ಕಾಗೆಯು ಕಾಕಾ ಎಂದು ಸಣ್ಣಗೆ ಕೂಗುತ್ತಾ

ಅದರ ಮೇಲೆ ಕೊಕ್ಕೊ ಆಡಿಸುತ್ತಾ ಕುಳಿತಿತ್ತು. ಅವನಿಗೆ ಅದನ್ನು ಕಂಡು ಆಸೆಯಾಗಿ ಆಮೆಯನ್ನು ಅತ್ತ ಎಸೆದು ಜಿಂಕೆಯ ಕಡೆಗೆ ಓಡಿದನು. ಕೂಡಲೇ ಇಲಿಯು ಹೋಗಿ ಆಮೆಯ ಕಟ್ಟು ಕತ್ತರಿಸಿತು. ಆಮೆಯು ಓಡಿ ಓಡಿ ಹೋಗಿ ನೀರಲ್ಲಿ ಧುಮುಕಿತು. ಅದನ್ನು ಕಂಡ ಕಾಗೆಯು ಮೇಲಕ್ಕೆ ಹಾರಿ ಬದುಕಿದೆವು ಎಂದು ಕೂಗಿತು. ಜಿಂಕೆಯು ಥಟ್ಟನೆ ಎದ್ದು ಚೆಂಗನೆ ಹಾರಿ ಓಡಿತು.

ಇದೆಲ್ಲವನ್ನೂ ಕಂಡು, ಆಮೆಯೂ ಇಲ್ಲದಿರುವುದನ್ನು ನೋಡಿ, "ಅದೂ ಹೋಯಿತು. ಇದೂ ಹೋಯಿತು. ಹೆಂಡತಿ ಮಕ್ಕಳಿಗೆ ಹೊಟ್ಟೆಗಿಲ್ಲವಾಯಿತು." ಎಂದು ಅತ್ತುಕೊಂಡು ಹೋದನು.

ಅವನು ಅಷ್ಟುದೂರ ಹೋದ ಮೇಲೆ ಮಿತ್ರರು ಮತ್ತೆ ಸೇರಿದರು. ಪರಮಾನಂದದಿಂದ ಒಬ್ಬರನ್ನೊಬ್ಬರು ಆಲಿಂಗಿಸಿಕೊಂಡು, ಮೃತ್ಯುವಿಗೆ ಸಿಕ್ಕಿದ್ದು ಮತ್ತೆ ಹುಟ್ಟಿ ಬಂದವರಂತೆ ಸಂತೋಷದಿಂದ ಕುಣಿದಾಡಿದರು.

ಅವರು ಬಹುಕಾಲದವರೆಗೂ ಆ ಸರೋವರದ ತೀರದಲ್ಲಿ ಸುಖವಾಗಿದ್ದರು.

ಇಂತಿದು ಹೊಸಗನ್ನಡ ಪಂಚತಂತ್ರದಲ್ಲಿ
**"ಸ್ನೇಹ ಕಟ್ಟುವುದು"** ಎಂಬ
ಐದನೆಯ ತಂತ್ರವು ಮುಗಿದುದು.



# ಮೂಲ ಸಂಸ್ಕೃತ

ಸಂಸ್ಕೃತವನ್ನು ೬೦ ದಿನಗಳಲ್ಲಿ ಕಲಿಸುವ ವಿಧಾನ

೫ ಪುಸ್ತಕಗಳು.



ಭಾಷಾಶಾಸ್ತ್ರ ಎಂಬ ವ್ಯಾಕರಣ ಸಹ

ಒಟ್ಟು ಬೆಲೆ ರೂ. ೨೫—೦—೦



—:ವಿವರಗಳಿಗೆ ಬರೆಯಿರಿ:—

**ಗೀರ್ವಾಣ ವಿದ್ಯಾಪೀಠ**

ಬೆಂಗಳೂರು. ೪

